NARASIMHARAJA WADIYAR SERIES

# ದುರ್ಗೇಶನಂದಿನಿ

(ನಾಲ್ಕನೆಯ ಸಂಸ್ಕರಣ)



ಬಿ. ವೆಂಕಟಾಚಾರ್ಯ

ಬೆಂಗಳೂರು ಸಿಟಿ:
ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ
1930

NARASIMHARAJA WADIYAR SERIES

# ದುರ್ಗೇಶನಂದಿನಿ

(ನಾಲ್ಕನೆಯ ಸಂಸ್ಕರಣ)

ಬಿ. ವೆಂಕಟಾಚಾರ್ಯ

ಬೆಂಗಳೂರು ಸಿಟಿ:

ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ

1930

 [ಬೆಲೆ: ೨ ರೂಪಾಯಿ



SIR MIRZA M. ISMAIL, KT., B.A., C.I.E., O.B.E., AMIN-UL-MULK
DEWAN OF MYSORE

TO

**SIR MIRZA MAHOMED ISMAIL**

KT., B.A., C.I.E., O.B.E.

AMIN-UL-MULK

DEWAN OF MYSORE

---

THIS WORK

(by special permission graciously granted) is most respectfully and loyally dedicated in token of the esteemed encouragement given to Kannada literature, and in commemoration of the KNIGHTHOOD graciously conferred on him by His Most Excellent Majesty the King George V, Emperor of India, on the New Year's Day of 1930 in appreciation of his high statesmanship.

By his patriotic admirer

SRI SALLAMMA.

# PREFACE

A Novel in the sense in which it is understood in English is not familiar to the Kanaiese-speaking public. I was therefore induced to undertake the translation of the present work, which is a novel by the well-known Bengali Novelist of the day—Babu Bankim Chander Chatterji.

The original Bengali work, of which this is a translation, has been translated into English and published under the distinguished patronage of Lord Lytton.

The works of Babu Bankim Chander Chatterji are many, and one of them, "Visha Vriksha" has since been translated into English by Mrs. Mariam S. Knight, and published with a preface by Mr. Edwin Arnold, C.S.I. Mr. Edwin Arnold introduces our author to the English public in these words: "The author is Babu Bankim Chatterji, a native gentleman of Bengal, of superior intellectual acquisitions, who ranks unquestionably as the first living writer of fiction in his Presidency. His renown is widespread among the Native readers, who recognize the truthfulness and power of his descriptions. Allowance being made for the loss which an original author cannot but sustain by the transfer of his style and method into another language and system of thought, it will be confessed, I think, that the reputation of 'Bankim Babu' is well deserved, and that Bengal has here produced a writer of true genius, whose vivacious invention, dramatic force, and purity of aim, promise well for the new age of Indian vernacular literature."

Such being the reputation of the author among the English public, I need not apologize for introducing him to our Kanarese-speaking public. But I beg that my kind readers will not judge of the merits of the original work from my poor attempt to render it into our vernacular, which is much behind the times. I hope they "will not measure by the scale of perfection the meagre product of reality."

I am deeply indebted to Babu Bankim Chander Chatterji for his kind permission to publish this translation.

I hope my kind readers will show me the same indulgence and give me the same encouragement as they have done in respect of my previous works.

My thanks are due to my friend Mr. Gundappa for his great help to me in getting up this work.

*Yadehally,*
31—3—85.

**B. VENCATACHARYA.**

# ಎರಡನೆಯ ಮುದ್ರಾವರ್ತಿಯ ವಿಜ್ಞಾಪನೆ

ಈ ಗ್ರಂಥದ ಮೊದಲ ಮುದ್ರಾವರ್ತಿಯ ಪ್ರತಿಗಳೆಲ್ಲವೂ ಮುಗಿದು ಹೋಗಿ ಬಹಳ ಕಾಲವಾಯಿತು. ನನ್ನ ಸ್ನೇಹಿತರನೇಕ ಮಹನೀಯರು ಪುನಃ ಮುದ್ರಿಸಬೇಕೆಂದು ಅಪೇಕ್ಷಿಸಿದರು. ಅವರ ಇಷ್ಟದಂತೆ ಮೊದಲ ಮುದ್ರಾವರ್ತಿಯಲ್ಲಿದ್ದ ಅಶುದ್ಧಗಳನ್ನೆಲ್ಲಾ ಪರಿಶೋಧಿಸಿ, ಪುನಃ ಮುದ್ರಿಸಲ್ಪಟ್ಟಿರುವ ಈ ಮುದ್ರಾವರ್ತಿಯಲ್ಲಿ, ಪಂಡಿತವರ್ಯರಾಗಿ ಸ್ವನಾಮಖ್ಯಾತರಾಗಿದ್ದ ಪ್ರಾತಃಸ್ಮರಣೀಯರಾದ ಶ್ರೀ ಎಸ್. ಜಿ. ನರಸಿಂಹಾಚಾರ್ಯರವರು ನನಗೆ ತಿಳಿಸಿದ್ದ ಪ್ರಕಾರ ಕೆಲವು ಸುಧಾರಣೆಗಳನ್ನು ಮಾಡಿದ್ದೇನೆ.

ಮೂಲಗ್ರಂಥ ಲೇಖಕರಾದ ಶ್ರೀ ಬಂಕಿಮಬಾಬುಯವರ ಗ್ರಂಥಗಳ ವಿಚಾರದಲ್ಲಿ ಹೆಚ್ಚು ಹೇಳಬೇಕಿಲ್ಲ. ಅವರ ವರ್ಣನೆಯೇನು, ಭಾವವೇನು, ಭಾಷೆಯೇನು, ಚರಿತ್ರಘಟನೆಯೇನು, ರಚನಾನೈಪುಣ್ಯವೇನು, ಅವರ ಲಿಪಿಯ ಕುಶಲತೆಯೇನು, ಉದ್ಭಾವನೆಯ ಶಕ್ತಿಯೇನು, ಸೌಂದರ್ಯ ಸೃಷ್ಟಿಯೇನು, ಘಟನಾ ಸಾಮಂಜಸ್ಯವೇನು,–ಸಕಲ ವಿಷಯಗಳಲ್ಲಿಯೂ ಬಂಕಿಮಬಾಬುಯವರು ಉಪನ್ಯಾಸ ಲೇಖಕರ ಜಗತ್ತಿನಲ್ಲಿ ರಾಜರಾಜೇಶ್ವರರಾಗಿ ವಿರಾಜಿಸುತ್ತಿದ್ದರು. ಅವರ ಗ್ರಂಥಗಳೆಲ್ಲವೂ ಉತ್ಕೃಷ್ಟವಾದುವೆಂದು ಪುನಃಪುನಃ ಹೇಳಬೇಕಾಗಿಲ್ಲ. ಅವುಗಳಲ್ಲೊಂದಾದ 'ಕೃಷ್ಣಚರಿತ್ರೆ' ಎಂಬುದು ಸರ್ವೋತ್ಕೃಷ್ಟವಾದುದೆಂದು ಅಂಗೀಕರಿಸಲ್ಪಟ್ಟಿದೆ. ಅದನ್ನೂ ಸ್ವಲ್ಪ ದಿನಗಳಲ್ಲಿ ಕನ್ನಡಿಸಬೇಕೆಂಬ ನನ್ನ ಮನೋರಥವು ಈಗೆನಗಿರುವ ಅನನುಕೂಲ ಬಾಹುಳ್ಯದಿಂದ ಹೇಗೆ ಪರಿಣಮಿಸುವುದೋ ಅದನ್ನು ಹೇಳಲಸಾಧ್ಯ. ಮಹನೀಯರಾದ ಕನ್ನಡ ಭಾಷಾಸೇವಿಗಳ ಉದಾರ ಆಶ್ರಯದಿಂದದು ಕೈಗೂಡತಕ್ಕ ಕೆಲಸವಾಗಿದೆ.

ಬಹು ಭಾಷಾ ತತ್ವಜ್ಞರಾದ ಜೆ. ಎಫ್. ಬ್ಲುಮ್‌ಹಾರ್ಟ್ (J. F. Blumhardt) ಎಂಬ ಮಹಾ ಪಂಡಿತ ಪುಂಗವರು 1895ನೆಯ ಇಸವಿ ಫಿಬ್ರುವರಿ ತಿಂಗಳಲ್ಲಿ ಶ್ರೀ ಬಂಕಿಮಬಾಬುಯವರನ್ನೂ ಅವರ ಗ್ರಂಥಗಳನ್ನೂ ಕುರಿತು ಬರೆದಿರುವ ಕೆಲವು ಅಂಶಗಳನ್ನು ನಮ್ಮ ಪಾಠಕರ ಅವಗಾಹನಕ್ಕೆ ಸಲುವಾಗಿ ಇದರಡಿ ಬರೆದಿರುವೆನು :—

"Bankim Chandra Chatterjee was unquestionably the greatest novelist that India has ever produced. No other writer has done so much to improve the style and to raise the tone of Bengali literature. His severe criticism on the worthless and ephemeral

productions of so many of his fellow country-men, his fearless exposure of the faults and shortcomings of Hindu Social life and of the evils arising from a corrupt and superstitious form of Hindu religion have brought about a complete evolution in the History of Bengali literature.

He was himself a vigorous author. His works display a wonderful power of description of human life and character, which render them so deeply interesting and instructive * * * *

Towards the close of his life Bankim Chandra appeared as an advocate of a reformed system of Hindu Religion and a teacher of the sublime philosophy of the Bhagavadgita. His 'Krishṇa Charitra' or Life of Krishṇa, which was first published in 1886, is by many considered to be his finest work. * * * * * *

Bankim Chandra was also an able exponent of intellectual and scientific research. He was himself a perfect master of the English language, as well as of Sanskrit. * * * * * *

The story (Krishṇa-Kānta's Will) is written with much dramatic force, tragic indeed, but enlivened by passages of humorous descriptions. The moral lesson intended to be conveyed is obvious—in fact the chief aim of the author in all his works appears to have been to promote the amelioration of Hindu Society and to teach the vital importance of a reliance on religious principles in the affairs of life."

ಮೇಲಿನ ನುಡಿಗಳಲ್ಲಿ ಹೇಳಿರುವ ಒಂದೊಂದು ವಿಶೇಷಣವೂ ದುರ್ಗೇಶ ನಂದಿನಿಯಲ್ಲಿ ಸಮನ್ವಯವಾಗಿ ಸಾರ್ಥಕಗೊಳ್ಳುವುದು—ದುರ್ಗೇಶನಂದಿನಿಯು ನವರಸಭರಿತವಾದ ಸರ್ವೋತ್ಕೃಷ್ಟ ಕಾದಂಬರಿಯೆಂಬುದು ಸರ್ವಸಮ್ಮತವಾಗಿದೆ. ಈ ಕನ್ನಡ ಗ್ರಂಥವು ನನ್ನ ಅನುಮತಿಯಿಂದ ಸಂಸ್ಕೃತ ಭಾಷೆಗೆ ಪರಿವರ್ತಿತ ವಾಗಿದೆಯಲ್ಲದೆ ಇತರ ದ್ರಾವಿಡ ಭಾಷೆಗಳಿಗೂ ಪರಿವರ್ತಿತವಾಗಿದೆ.

ಬಂಕಿಮಬಾಬುಯವರು ಇಂಗ್ಲೀಷರ ಸರಕಾರದಲ್ಲಿ ಗೌರವ ಪದವಿಯಲ್ಲಿದ್ದು, 'ರಾಯಬಹದುರು' ಹಾಗೂ 'C.I.E.' ಎಂಬ ಬಿರುದುಗಳನ್ನು ಹೊಂದಿ ಸಮ್ಮಾನಿತರಾಗಿದ್ದು, 1894ನೆಯ ಇಸವಿ ಮೇ ತಿಂಗಳಲ್ಲಿ, 57ನೆಯ ವರ್ಷದ ವಯಸ್ಸಿನಲ್ಲಿ ಪರಂಧಾಮವನ್ನೈದಿದರು.

ಬಂಕಿಮಬಾಬುಯವರ ಉಪನ್ಯಾಸಗಳಲ್ಲೊಂದೆರಡನ್ನು ಹೊರತು ಉಳಿದ ಎಲ್ಲಾ ಉಪನ್ಯಾಸಗಳನ್ನೂ ಅವರ ಅನುಮತಿಯಿಂದ ಕನ್ನಡಿಸಿರುವೆನು. ಅವರ

ಗ್ರಂಥಗಳ ಸ್ವತ್ವಾಧಿಕಾರವನ್ನು 'ವಸುಮತಿ' ಎಂಬ ಪತ್ರಿಕೆಯವರು ಈಗ್ಗೆ ಎರಡು ವರ್ಷಗಳಲ್ಲಿ ಎರಡುಲಕ್ಷ ರೂಪಾಯಿಗಳ ಬೆಲೆಗೆ ಕೊಂಡುಕೊಂಡಿದ್ದಾರೆ. ಅದರಿಂದಲೇ ಬಂಕಿಮಬಾಬುಯವರ ಗ್ರಂಥಗಳ ಉತ್ಕರ್ಷೆಯನ್ನೂ ಸ್ವದೇಶ ಭಾಷಾಸೇವಿಗಳಾದಾ ದೇಶದವರ ಅಭಿರುಚಿಯನ್ನೂ ಸುಲಭವಾಗಿ ಊಹಿಸಬಹುದು. ಕನ್ನಡಿಗರಲ್ಲಿ ಅಂತಹ ಗ್ರಂಥವನ್ನು ಕಾಸಿಗೆ ಕೊಟ್ಟರೂ ಕೊಂಬುವವರಿಲ್ಲ !! ಇದು ಶೋಚನೀಯವಾದುದೆಂದು ಚಿಂತಾಶೀಲರು ತಿಳಿಯದಿರರು. ನಾವು ಪರಭಾಷೆಯಲ್ಲಿ ಉದ್ದುದ್ದಾದ ಭಾಷಣಗಳನ್ನೊದರಿಕೊಳ್ಳುವ ದೇಶಾಭಿಮಾನಿಗಳಾಗಿ ಪರಿಣಮಿಸಿರುವರೆಂಬ ವಾಹಿಣಿಯನ್ನು ಸಾರ್ಥಕಗೊಳಿಸಿಕೊಳ್ಳತಕ್ಕವರೆಂದಿನ್ನೂ ತೋರದಿರುವುದು ಅಚ್ಚರಿದೋರುವುದು !!

ಮೈಸೂರು,<br>1910.

ಇತಿ,<br>**ಬಿ. ವೆಂಕಟಾಚಾರ್ಯ.**

---

## ವಿಜ್ಞಾಪನೆ

ಈ ಪುಸ್ತಕವನ್ನು ಮೈಸೂರು ಸರಕಾರದ ವಿದ್ಯಾ ಇಲಾಖೆಯ ಟೆಕ್ಸ್ಟ ಬುಕ್ಕು ಕಮಿಟಿಯವರು 1922-23 ನೆಯ ವರುಷಕ್ಕೆ S.S.L.C. ಪರೀಕ್ಷೆಗೆ ಪಠ್ಯ ಪುಸ್ತಕವನ್ನಾಗಿ ಚುನಾಯಿಸಿ ತನ್ಮೂಲಕ ಗ್ರಂಥಕರ್ತರ ಗ್ರಂಥಗಳ ಪುನರುಜ್ಜೀವನಕ್ಕೆ ಅವಕಾಶಕೊಟ್ಟು ಪ್ರೋತ್ಸಾಹಿಸಿರುವುದರಿಂದ ಅವರಿಗೆ ನಾನು ಚಿರಋಣಿಯಾಗಿರುವೆನು.

ಮುಂದೆಯೂ ಇದೇ ರೀತಿ ಪ್ರೋತ್ಸಾಹವು ದೊರೆಯುತ್ತಿರುವುದೆಂದು ನಂಬಿರುವೆನಲ್ಲದೆ, ವಾಚಕಮಹಾಶಯರ ಪ್ರೋತ್ಸಾಹವೂ ಎಂದಿನಂತೆ ದೊರೆಯುತ್ತಿರಬೇಕೆಂದು ಕೋರುವ,

ಮೈಸೂರು,<br>1922.

**ಬಿ. ವಿ. ನರಸಿಂಹೈಯ್ಯಂಗಾರ್**

# ವಿಜ್ಞಾಪನೆ

ಈ ಗ್ರಂಥಕರ್ತರ ಖ್ಯಾತಿಯು ಇತ್ತೀಚೆಗೆ ಹೆಚ್ಚು ಪ್ರಾಶಸ್ತ್ಯಕ್ಕೆ ಬರುತ್ತಿರುವು ದೆಂಬುದಕ್ಕೆ ಈ ಗ್ರಂಥದ ನಾಲ್ಕನೆಯ ಸಂಸ್ಕರಣವೇ ದೃಷ್ಟಾಂತರವಲ್ಲವೆ? ಇವರ ಗ್ರಂಥಗಳು ಇಡೀ ಕರ್ನಾಟಕದ ಕನ್ನಡ ಭಾಷಾಭಿಮಾನಿಗಳಿಂದಲೂ, ನಮ್ಮ ಸರಕಾರದ ಪಠ್ಯ ಪುಸ್ತಕ ಕಮಿಟಿಯವರಿಂದಲೂ, ವಿಶ್ವವಿದ್ಯಾನಿಲಯದವ ರಿಂದಲೂ ಸಮ್ಮಾನಿಸಲ್ಪಡುತ್ತಿರುವುದರಿಂದ ಈ ಗ್ರಂಥಗಳ ಪ್ರಾಮುಖ್ಯತೆಯು ದಿನೇ ದಿನೇ ಹೆಚ್ಚು ವೃದ್ಧಿಯನ್ನೈದುತ್ತಿರುವುದು ಬಹು ಶ್ಲಾಘನೀಯವಾಗಿ ರುವುದು. ಈ ರೀತಿ ಪ್ರೋತ್ಸಾಹವು ದೊರೆಯುತ್ತಿರುವುದರಿಂದ ಈ ಗ್ರಂಥ ಗಳ ಗೌರವಕ್ಕನುಗುಣವಾದ ಯೋಗ್ಯರೂಪದಲ್ಲಿ ಪ್ರಚುರಪಡಿಸಬೇಕೆಂಬ ಪಾಠಕ ಮಹನೀಯರ ಆಜ್ಞೆಯಂತೆ ನಡೆಯಲುಪಕ್ರಮಿಸಿರುವೆನು.

ಬಹುಮಾನಿತರಾಗಿಯೂ, ಮುದ್ರಣ ಕಾರ್ಯ ನಿಪುಣರಾಗಿಯೂ ಇರುವ ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿಯವರು ಈ ಗ್ರಂಥಕರ್ತರ ಗ್ರಂಥಗಳಲ್ಲಿನ ಈ ಗ್ರಂಥವನ್ನು ಅಂದವಾಗಿಯೂ ಉತ್ತಮ ಕಾಗದದಲ್ಲಿ ಅಚ್ಚು ಮಾಡಿ ಕನ್ನಡಿಗರ ಮೆಚ್ಚುಗೆಗೆ ಅರ್ಹತೆಯನ್ನುಂಟುಮಾಡಿಕೊಟ್ಟಿರುವುದಕ್ಕೆ ಅವರಿಗೆ ನಾನು ಕೃತಜ್ಞಳಾಗಿರುವೆನು.

ಕನ್ನಡ ಭಾಷಾ ಪಕ್ಷಪಾತಿಗಳ ಮಹದಾಶ್ರಯವು ನನ್ನೀ ಪ್ರಯತ್ನಕ್ಕೆ ಸರ್ವದಾ ದೊರೆಯುತ್ತಿರಬೇಕೆಂದು ಕೋರುವ

ಬೆಂಗಳೂರು ಸಿಟಿ,
10-3-30.

ಎಸ್. ಶಲ್ಲಮ್ಮ.

# ವಿಜ್ಞಾಪನೆ

ಈ ಗ್ರಂಥವು ಇಂಗ್ಲೀಷಿನಲ್ಲಿ ಬಹಳವಾಗಿ ಪ್ರಚಾರಗೊಂಡಿರುವ (Novel) ನಾವೆಲ್ ಎಂಬ ಉಪನ್ಯಾಸ ಗ್ರಂಥಗಳಿಗನುಸಾರವಾಗಿ ರಚಿಸಲ್ಪಟ್ಟಿದೆ.

'ನಾವೆಲ್' ಎಂದರೆ ಉಪನ್ಯಾಸ. ನಾವೆಲ್ ಎಂಬುದು ಇಂಗ್ಲೀಷಿನಲ್ಲೊಂದು ಸಾಹಿತ್ಯ ವಿಶೇಷವು. ಈಚೆಗೆ ಸ್ವಲ್ಪ ಕಾಲದಿಂದ ಅದರ ಪ್ರಾಬಲ್ಯವುಂಟಾಯಿತು. ಪೂರ್ವಕಾಲದಲ್ಲಿ ಹುಡುಗರು ತಮ್ಮ ವೃದ್ಧ ಪಿತಾಮಹಿಯರ ಬಳಿ ಕುಳಿತು ಅವರು ಹೇಳುತ್ತಿದ್ದ ಆಶ್ಚರ್ಯಕರವಾದ ಅದ್ಭುತ ಕಟ್ಟುಕಥೆಗಳನ್ನು ಹೇಗೆ ಆತುರರಾಗಿ ಆವರದಿಂದ ಕೇಳುತಿದ್ದರೋ, ಹಾಗೆ ಅಲೌಕಿಕ ಅದ್ಭುತ ಘಟನಾವಳಿಗಳನುಳ್ಳ ಸಾಮಾನ್ಯ ಉಪನ್ಯಾಸಗಳನ್ನೋದಿ ಅನೇಕರು ಈಚೀಚಿನವರೆಗೆ ತೃಪ್ತರಾಗುತಿದ್ದರು. ಚಾತುರ್ಯ ರಚನಾ ಪಾರಿಪಾಟ್ಯ ವಿಹೀನವಾಗಿ ಭಾವಹೀನನಾದಾ ಉಪನ್ಯಾಸಗಳಲ್ಲಿ ಅದ್ಭುತ ಘಟನಾವಳಿಗಳು, ಅದ್ಭುತ ಜನರು, ದೇವತೆಯರು, ದೈತ್ಯರು ಮುಂತಾಗಿ ವರ್ಣಿತರಾಗುತಿದ್ದರು. ಕಥೆಯು ಕೇವಲ ಅಸಾಧಾರಣವಾದ ಮಾನುಷಾತೀತ ವ್ಯಾಪಾರಗಳನ್ನುಳ್ಳದುದಾಗಿದ್ದರೆ ಜನರಿಗದು ಚಿತ್ತಾಕರ್ಷಣವಾಗಿ ಉಪನ್ಯಾಸವು ಪ್ರಶಂಸಾಸ್ಪದವಾಗುತಿದ್ದಿತು. ಉಪನ್ಯಾಸಗಳು ನಾಯಕ ನಾಯಕಿಯರ ಪ್ರಣಯ ಕಥೆಗಳನ್ನುಳ್ಳವಾಗಿದ್ದರೆ ಅವುಗಳಿಂದಲೇ ಪಾಠಕರು ಪರಿತೃಪ್ತರಾಗುತಿದ್ದರು. ಆದುದರಿಂದ ಅಂತಹ ಉಪನ್ಯಾಸಗಳೇ ಬಹುಕಾಲದವರೆಗೂ ಆದರಿಸಲ್ಪಡುತಿದ್ದುವು. ಈಗಾ ದಿವಸಗಳು ಕಳೆದುಹೋದುವು. ಇಂಗ್ಲಾಂಡು ದೇಶದಲ್ಲಿ ಪ್ರಥಮತಃ ಫೀಲ್ಡಿಂಗ್, ಸರ್ ವಾಲ್ಟರ್ ಸ್ಕಾಟ್ ಎಂಬುವರು ಹೊಸ ಪದ್ಧತಿಯನ್ನವಲಂಬಿಸಿ, ನಾವೆಲಗಳನ್ನು ಬರೆದರು. ತದಾರಭ್ಯ ಇಂಗ್ಲೀಷು ಸಾಹಿತ್ಯದಲ್ಲಿ ನಾವೆಲ ಯುಗವು ಪ್ರಾರಂಭವಾಯಿತು. ಬಳಿಕ ಇತರ ಅನೇಕ ಲೇಖಕರು ನಾವೆಲಗಳನ್ನು ಬರೆಯಲು ಪ್ರಾರಂಭಿಸಿ, ಈಗ ಇಂಗ್ಲೀಷು ಭಾಷೆಯಲ್ಲಿ ನಾವೆಲಗಳು ಅಸಂಖ್ಯಾಕವಾಗಿ ನಕ್ಷತ್ರಗಳಂತೆ ತುಂಬಿವೆ. ಇಂಗ್ಲೀಷು ಸಾಹಿತ್ಯಕ್ಕೆ ಯುಗಗಳನ್ನು ಕಲ್ಪಿಸುವುದಾದರೆ, ಹತ್ತೊಂಭತ್ತು ಇಪ್ಪತ್ತನೆಯ ಶತಾಬ್ದಗಳನ್ನು ಯಥಾರ್ಥವಾಗಿ ನಾವೆಲ ಯುಗಗಳೆಂದು ಹೇಳಬಹುದು.

ಇಂಗ್ಲೀಷು ಸಾಹಿತ್ಯ ಪ್ರಭಾವದಿಂದ ಈಗ್ಗೆ ಪ್ರಾಯಶಃ ಐವತ್ತು ವರ್ಷಗಳಿಂದ ವಂಗಭಾಷೆಯ ಸಾಹಿತ್ಯದಲ್ಲಿಯೂ ಸಂಪೂರ್ಣವಾದ ಬದಲಾವಣೆಗಳುಂಟಾಗಿವೆ. ಪ್ರಕೃತ ವಂಗಭಾಷೆಯಲ್ಲಿ ಇಂಗ್ಲೀಷಿನಲ್ಲಾವಾವ ವಿಧ ವರ್ತಮಾನ ಪತ್ರಿಕೆಗಳುಂಟೋ, ಅದೇ ಮಾದರಿಯ ಮಾಸಪತ್ರಿಕೆಗಳು, ದೈನಿಕ, ಸಾಪ್ತಾಹಿಕ, ಪಾಕ್ಷಿಕ, ಮಾಸಿಕ, ತ್ರೈಮಾಸಿಕ ಮುಂತಾದುವುಗಳು ನೂರಾರು ಹುಟ್ಟಿ ಅನೇಕ

ಸಹಸ್ರ ಸಹಸ್ರ ಪ್ರತಿಗಳಾಗಿ ಪ್ರಚಾರವಾಗುತ್ತಿವೆ. ಅವಲ್ಲದೆ ಭೌತಿಕ, ಚಿಕಿತ್ಸಾ ಪದಾರ್ಥವಿಜ್ಞಾನ, ಭೂತತ್ವ ಮುಂತಾದ ಅನೇಕಾನೇಕ ಶಾಸ್ತ್ರಸಂಬಂಧವಾದ ಪುಸ್ತಕಗಳುಂಟಾಗಿವೆ. ಇಷ್ಟೊಂದು ಅಲ್ಪಕಾಲದಲ್ಲಿ ವಂಗಭಾಷೆಯು ಇಷ್ಟೊಂದು ಉನ್ನತಿಯನ್ನು ಹೊಂದಿರುವುದನ್ನು ಯೋಚಿಸಿದರೆ ಪರಮಾಶ್ಚರ್ಯವಾಗುತ್ತದೆ ಆ ಉನ್ನತಿಗೆ ಪ್ರಧಾನ ಕಾರಣವು ಇಂಗ್ಲೀಷು ಸಾಹಿತ್ಯವಾಗಿದೆ. ನಮ್ಮ ಕರ್ಣಾಟದೇಶದಲ್ಲಿ ಇಂಗ್ಲೀಷು ಭಾಷೆಯ ಪ್ರಾಚುರ್ಯವು ಕಡಿಮೆಯಾಗಿಲ್ಲದಿದ್ದರೂ ದೇಶಭಾಷೆಯು ಮಾತ್ರ ಹಿಂದೂಸ್ಥಾನದೇಶದ ಇತರ ದೇಶಗಳಂತೆ ಕಾಲಾನುಗುಣ್ಯವಾದ ವೃದ್ಧಿಯನ್ನು ಹೊಂದದಿರುವುದು ಕೇವಲ ವಿಷಾದಕ್ಕೆ ಕಾರಣವಾಗಿದೆ. ನಮ್ಮಲ್ಲಿ ಸಾಕಾದಷ್ಟು ವರ್ತಮಾನ ಪತ್ರಿಕೆಗಳು ಇಲ್ಲವು. ಇರುವ ಒಂದೆರಡು ಪತ್ರಿಕೆಗಳು ಓದುವವರಿಲ್ಲದೆ ಗತಾಯುಗಳಾಗಿ ಮುಮೂರ್ಷಾವಸ್ಥೆಯಲ್ಲಿವೆ. ಶಾಸ್ತ್ರಸಂಬಂಧವಾದ ಪುಸ್ತಕಗಳೇ ಇಲ್ಲ. ಪುಸ್ತಕ ಲೇಖಕರು ಕೇವಲ ವಿರಳರಾಗಿದ್ದಾರೆ. ಅದಕ್ಕೆ ಮುಖ್ಯ ಕಾರಣವು ತೋರುವುದೇನೆಂದರೆ:—ನಮ್ಮಲ್ಲಿ ಇಂಗ್ಲೀಷು ಭಾಷಾಭಿಜ್ಞರಾದವರು ತಾವು ಓದುವ ವಿದ್ಯಾಲಯದ ಉಪಾಧಿಗಳನ್ನು ಸಂಪಾದಿಸಿಬಿಟ್ಟರೆ ಕೃತಕಾರ್ಯರಾದೆವೆಂದು ತಿಳಿದುಕೊಂಡು ತಟಸ್ಥರಾಗಿ, ದೇಶಭಾಷೆಯ ಅಭಿವೃದ್ಧಿಯ ವಿಚಾರದಲ್ಲಿ ಸ್ವಲ್ಪವೂ ಲಕ್ಷ್ಯಕೊಡದೆ ಉದಾಸೀನರಾಗಿರುವುದೇ ಶೋಚನೀಯವಾದೀ ಸ್ಥಿತಿಗೆ ಕಾರಣವೆಂದು ತೋರುತ್ತದೆ. ಇದರಿಂದ ಇಂಗ್ಲೀಷು ಭಾಷೆಯಲ್ಲಿ ಕೃತವಿದ್ಯರಾಗಿರುವ ನಮ್ಮ ಅನೇಕ ಪಂಡಿತ ಮಹಾಶಯರು ನಿಂದಿತರಾದೆವೆಂದು ತಿಳಿಯಕೂಡದು. ಅವರಿಂದಲೇ ದೇಶಕ್ಕೆ ಮಂಗಳವುಂಟಾಗಿ ಕಾರ್ಯಸಿದ್ಧಿಯಾಗಬೇಕಾಗಿರುವುದರಿಂದ ಅವರನ್ನು ನಾವೆಂದಿಗೂ ದೂಷಿಸಲಾರೆವು. ಮುಂದಾದರೂ ಅವರು ವ್ರತದೋಪಾದಿಯಲ್ಲಿ ಕೈಗೊಂಡಿರುವಾ ತಾಟಸ್ಥ್ಯಭಾವವನ್ನು, ವ್ರತಭಂಗವಾದರೂ ಚಿಂತೆಯಿಲ್ಲವೆಂದು ತ್ಯಜಿಸಿ, ತಮ್ಮ ವಿದ್ಯಾಪಾರಂಗತೆಯ ಪ್ರಭಾವದಿಂದ ದೇಶಭಾಷೆಯನ್ನು ಇತರ ದೇಶೀಯರಂತೆ ಅಭಿವೃದ್ಧಿಯನ್ನೈದಿಸುವ ಪ್ರಯತ್ನವನ್ನು ಮಾಡಿದರೆ, ಸರ್ಕಾರದವರವರನ್ನು ಸುಶಿಕ್ಷಿತರನ್ನಾಗಿ ಮಾಡಿದುದಕ್ಕೆ ತಕ್ಕ ಫಲಪ್ರಾಪ್ತಿಯುಂಟಾಗಿ ಅದರಿಂದ ದೇಶಕ್ಕೆ ಬಹೂಪಕಾರವಾಗುವುದು. ಅದನ್ನವರೇ ಒಪ್ಪದಿರರು.

ಇಂಗ್ಲೀಷ ಸಾಹಿತ್ಯಕ್ಕೆ ನಾವೆಲ ಯುಗವು ಪ್ರಾರಂಭವಾಗಿದೆಯೆಂದು ಮೇಲೆ ಹೇಳಿದ್ದೇವಷ್ಟೆ. ಇಂಗ್ಲೀಷು ಸಾಹಿತ್ಯದ ಸಂಘರ್ಷಣೆಯಿಂದ ಇಂಗ್ಲೀಷು ಭಾವಗಳಿಗೆ ಅನುಕರಣವಾಗಿ ವಂಗಭಾಷಾ ಸಾಹಿತ್ಯದಲ್ಲಿಯೂ ನಾವೆಲ ಯುಗವು ಪ್ರಾರಂಭವಾಗಿರುವದೇನು ಆಶ್ಚರ್ಯ? ವಂಗಭಾಷೆಯಲ್ಲಿ ಪ್ರಥಮತಃ ಒಬ್ಬಿಬ್ಬರು ಪಂಡಿತರು ನಾಲ್ಕಾರು ನಾವೆಲಗಳನ್ನು ಬರೆದಿದ್ದರು. ಆದರೆ ಆಗ ನಾವೆಲ ಯುಗವು ಪ್ರಾರಂಭವಾಗಿರಲಿಲ್ಲ. ಬಾಬು ಬಂಕಿಂಚಂದ್ರ ಚಟ್ಟೋಪಾಧ್ಯಾಯರ

'ದುರ್ಗೇಶ ನಂದಿನಿಯು' ಪ್ರಕಾಶವಾಯಿತು. ತದಾರಭ್ಯ ಬಂಗಾಳಿಯಲ್ಲಿ ಅನೇ ಕಾನೇಕ ನಾವೆಲಗಳು ಹುಟ್ಟಿದುವು. ಆಗಲಿಂದಲೇ ವಂಗಭಾಷಾ ಸಾಹಿತ್ಯಕ್ಕೆ ನಾವೆಲ ಯುಗವು ಪ್ರಾರಂಭವಾಯಿತೆಂದು ಹೇಳಬಹುದು. ಅದೇ ರೀತಿಯಾಗಿ ನಮ್ಮ ದೇಶದಲ್ಲಿಯೂ ಇಂಗ್ಲೀಷಿನಲ್ಲಿ ಪಾರಂಗತರಾಗಿರುವ ನಾಲ್ಕಾರು ಪಂಡಿತರು ಉದಾಸೀನರಾಗದೆ ಶಾಸ್ತ್ರ ಸಾಹಿತ್ಯ ಸಂಬಂಧವಾದ ಪುಸ್ತಕಗಳನ್ನು ಬರೆಯಲು ತೊಡಗಿದರೆ ನಮ್ಮ ದೇಶಭಾಷೆಯೂ ಸ್ವಲ್ಪ ಕಾಲದಲ್ಲಿಯೇ ಪ್ರಕೃತ ಕಾಲಾನುಗುಣ್ಯವಾದ ಉನ್ನತಿಯನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಅದಕ್ಕೆ ವಂಗಭಾಷೆಯೇ ಉದಾಹರಣವಾಗಿದೆ. ನಮ್ಮ ಸಂಸ್ಕೃತ ಪಂಡಿತರಿಂದೀ ಕಾರ್ಯ ಸಾಧನೆಯಾಗುವುದೆಂದು ನಿರೀಕ್ಷಿಸಕೂಡದು. ಹಾಗೆ ನಿರೀಕ್ಷಿಸುವದೂ ಸರಿಯಲ್ಲ. ಅವರು ಸಾಮಾನ್ಯರಿಗೆ ತಿಳಿಯದ ಧರ್ಮಶಾಸ್ತ್ರಗಳಲ್ಲಿ ಪಾರಂಗತರಾಗಿರುವ ಕಾರಣ ಅವರು ಅದರ ತತ್ವಾನ್ವೇಷಣದಲ್ಲಿ ನಿರತರಾಗಿರುತ್ತಾರೆ. ಪ್ರಾಕೃತವಾದ ದೇಶಭಾಷೆಯು ಅವರು ನೋಡತಕ್ಕುದಲ್ಲ. ಅವರಪಥಾನಕ್ಕದು ಯೋಗ್ಯವಾದುದಲ್ಲ. ಅದರಿಂದ ತಮಗೆ ಕಾರ್ಯಕಾರಿಯಲ್ಲವೆಂದು ಉದಾಸೀನರಾಗಿರುತ್ತಾರೆ. ಅದು ಸಹಜವಾದುದೇ ಅಹುದು. ಏಕೆಂದರೆ, ಅವರು ವಿಶೇಷ ದುರೂಹ ಅಪ್ರಾಕೃತ ಅಧ್ಯಾತ್ಮ ಸಂಬಂಧವಾದ ನಿಗೂಢ ತತ್ವಾನ್ವೇಷಣದಲ್ಲಿ ವ್ಯಾಪೃತರಾಗಿರುತ್ತಾರೆ! ಅಂತಹವರನ್ನು ಲೌಕಿಕ ಪ್ರಾಕೃತ ಭಾಷೆಯ ಉನ್ನತಿಯ ವಿಚಾರದಲ್ಲಿ ದೃಷ್ಟಿಯನ್ನು ಕೊಡಬೇಕೆನ್ನುವುದು ಯುಕ್ತಸಂಗತವಲ್ಲವಾಗಿ ತೋರುತ್ತದೆ. ಅತಏವ, ಇಂಗ್ಲೀಷಿನಲ್ಲಿ ಪಾರಂಗತರಾದ ಪಂಡಿತರಿಂದಲೇ ಈ ಕಾರ್ಯಸಿದ್ಧಿಯಾಗಬೇಕು.

ನಾವೆಲು ಹೇಗೆ ಉಂಟಾಯಿತು? ಮತ್ತು ನಾವೆಲಿನ ಉದ್ದೇಶವೇನು? ಈ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳುವುದು ಆವಶ್ಯಕವು. ಪೂರ್ವದಲ್ಲಿ ಅಲೌಕಿಕವಾದ ಅಪ್ರಾಕೃತ ಘಟನಾವಳಿಗಳನ್ನೂ, ಅಸ್ವಾಭಾವಿಕವಾದ ಮಾನವ ಚರಿತ್ರೆಯುಳ್ಳ ಕಥೆಗಳನ್ನೂ ಓದಿ ಜನರು ತೃಪ್ತರಾಗುತ್ತಿದ್ದುದು ಕ್ರಮಕ್ರಮವಾಗಿ ನಿಂತುಹೋಗುತ್ತಾ ಬಂದಿತೆಂದು ಮೇಲೆ ಹೇಳಿದ್ದೇವಷ್ಟೆ. ಅದಕ್ಕೆ ಬದಲಾಗಿ ಸ್ವಾಭಾವಿಕ ಘಟನೆಗಳನುಳ್ಳ ನೈಸರ್ಗಿಕ ಮನುಷ್ಯ ವಿಷಯಕವಾದ ವರ್ಣನೆಯನ್ನು ಮಾಡುವ ಪದ್ಧತಿಯು ಪ್ರಾರಂಭವಾಯಿತು. ಆದರಾಗಲೂ ಮನುಷ್ಯರಿಗೆ ಅಪ್ರಾಕೃತ ಶಕ್ತಿಗಳನ್ನಾರೋಪಿಸಿ ವರ್ಣನೆಮಾಡುವುದು ತಪ್ಪಲಿಲ್ಲ. ಅದು ಕೆಲವುಕಾಲ ನಡೆದುಬಂದುದರಲ್ಲಿಯೂ ಪಾಠಕರಿಗೆ ಅಭಿರುಚಿಯು ತಪ್ಪಿಹೋಯಿತು. ತರುವಾಯ ಐತಿಹಾಸಿಕ ಘಟನಾವಳಿಗಳನ್ನವಲಂಬಿಸಿ ಗ್ರಂಥಗಳನ್ನು ಬರೆಯುವ ಸಂಪ್ರದಾಯವು ಪ್ರಾರಂಭವಾಗಿ ಆ ಗ್ರಂಥಗಳು ಕೆಲವುಕಾಲ ಪಠನೀಯಗಳಾಗಿದ್ದು, ಕೆಲವು ಲೇಖಕರು ಆ ಗ್ರಂಥಗಳಲ್ಲಿಯೂ ನಾಯಕರಾದ ವೀರಪುರುಷರ ಚರಿತ್ರೆಯನ್ನೂ ಅವರ ಕಾರ್ಯಗಳನ್ನೂ

ಅಪ್ರಾಕೃತವಾಗಿ ವರ್ಣನೆ ಮಾಡತೊಡಗಿದುದರಿಂದ ಅವುಗಳಲ್ಲಿಯೂ ನೈರಾಶ್ಯ ಉಂಟಾಯಿತು. ಅದಲ್ಲದೆ, ಕ್ರಮೇಣ ಆವುಗಳಲ್ಲಿ ವರ್ಣಿತರಾದ ನಾಯಕ ರಾದ ವೀರಪುರುಷರ ಸಹಜವಾದ ನಡತೆಯೂ ಕಾರ್ಯಗಳೂ ಸಾಧಾರಣ ಜನ ರಿಗೆ ಅಸಾಧಾರಣವಾಗಿ ಕಂಡುಬಂದುವಲ್ಲದೆ, ಕೆಲವು ಪ್ರಮೇಯಗಳಲ್ಲಿ ಈ ಗ್ರಂಥಗಳು ಪೂರ್ವೋಕ್ತ ಕಟ್ಟುಕಥೆಗಳಿಗೆ ಹತ್ತಿರ ಹತ್ತಿರ ಹೋಲಿಕೆಯಾಗುವ ಸಂಭವವೂ ಕಂಡಿತು. ಅದುಕಾರಣ ಆ ಸಂಪ್ರದಾಯ ಗ್ರಂಥಗಳೂ ಕೆಲವು ದಿನಗಳಲ್ಲಿಯೇ ವಿರಳವಾಗುತ್ತಾ ಬಂದು, ಇತಿಹಾಸ ಸಂಬಂಧವಾದ ನಾವೆಲಿಗೆ ಬದಲಾಗಿ ಗಾರ್ಹಸ್ಥ್ಯ ಸಂಬಂಧವಾದ ನಾವೆಲುಗಳು ಪ್ರಾರಂಭವಾಗಿ, ಕ್ರಮೋನ್ನತಿಯಾಗಿ ಸ್ವಾಭಾವಿಕವಾದುದಾಗಿಯೂ, ಮನುಷ್ಯಚರಿತ್ರ ಪರಿಚಾಯಕ ವಾದುದಾಗಿಯೂ, ಮನುಷ್ಯನ ಸದ್ವ್ಯವಹಾರ ನಡತೆಗಳಿಗೆ ಮೂಲಸೂತ್ರ ಜ್ಞಾಪಕಜನಕವಾದುದಾಗಿಯೂ ಇರುವ ಅತ್ಯುತ್ಕೃಷ್ಟವಾದ ನಾವೆಲುಗಳ ಸೃಷ್ಟಿಯಾಯಿತು. ಅಂತಹ ಗ್ರಂಥಗಳ ಉದ್ದೇಶವೇನೆಂದರೆ :—ಸಮಾಜದ ಹಾಗೂ ಸಮಾಜಕ್ಕೆ ಅಂಗಭೂತನಾದ ಮನುಷ್ಯನ ಚರಿತ್ರೆ ನಡತೆಗಳಲ್ಲಿ ಕಂಡು ಬರುವ ಅತ್ಯಾಚಾರ, ದುರಾಚಾರ, ಅಸದ್ವ್ಯವಹಾರ, ದುರ್ನಡತೆ ಮುಂತಾದುವು ಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ ಅವುಗಳಿಂದುಂಟಾಗುವ ವಿಪತ್ತು ಗಳನ್ನು ತೋರ್ಪಡಿಸಿ ಪ್ರತಿ ಒಬ್ಬನೂ ಸಮಾಜದಲ್ಲಿ ಸದ್ಭಾವದಿಂದ ನಡೆದು ಕೊಳ್ಳಬೇಕಾದುದನ್ನು ತೋರ್ಪಡಿಸತಕ್ಕುದಾಗಿರುತ್ತದೆ. ಈ ರೀತಿಯಾದ ಉದ್ದೇಶವು ಮನಸ್ಸಿನಲ್ಲಿ ಅಂಕಿತವಾಗಬೇಕಾದರೆ ಗ್ರಂಥಗಳನ್ನೋದಿದ ಮಾತ್ರದಿಂದ ಉದ್ದಿಷ್ಟವಾದ ಆಯಾ ಭಾವೋದಯಗಳನ್ನುಂಟುಮಾಡುವ ಹಾಗೆ ಘಟನಾವಳಿಗಳನ್ನು ಕಲ್ಪಿಸಿ ಕೌಶಲದಿಂದ ರಚಿಸಬೇಕು. ನಾವೆಲ ಎಂಬುದು ಸಮಾಜದ ಹಾಗೂ ಮನುಷ್ಯ ಚರಿತ್ರೆಯ ಪ್ರತಿಚಿತ್ರವಾಗಿ ಪ್ರತಿ ಒಬ್ಬ ಪಾಠಕರ ಮನಸ್ಸಿಗೂ ಮುಕುರಸ್ವರೂಪವಾಗಿರಬೇಕು. ನಾವೆಲಗಳಾ ಉದ್ದಿಷ್ಟ ಫಲ ಸಿದ್ಧಿಗೆ ಎಷ್ಟರಮಟ್ಟಿಗೆ ಸಾಧಕವಾಗುತ್ತದೆಂಬುದರ ಮೇಲೆ ಅವುಗಳ ಉತ್ಕರ್ಷಾಪ ಕರ್ಷವನ್ನು ಮಾಡಬೇಕು. ದಾರ್ಶನಿಕರನೇಕರು ನಾವೆಲಗಳು ಶುದ್ಧವಾದ ಉದ್ದೇಶವುಳ್ಳವುಗಳಾಗಿದ್ದರೆ ಅವು ಸಮಾಜತತ್ತ್ವ ಅಥವಾ ಸಮಾಜ ವಿಜ್ಞಾನವಾಗಿ (Sociology) ಪರಿಣಮಿಸುವುವೆಂದು ಹೇಳಿದ್ದಾರೆ.

ಪೂರ್ವೋಕ್ತ ಸಂಪ್ರದಾಯದ ಗ್ರಂಥಗಳು ಕನ್ನಡದಲ್ಲಿ ಪ್ರಚಾರವಿಲ್ಲ ವಾದುದರಿಂದ ಈ ಪುಸ್ತಕವನ್ನು ಬರೆಯಲು ಪ್ರೇರಿತನಾದೆನು.

ಈ ಉಪನ್ಯಾಸದ ಮೂಲಗ್ರಂಥವು ಕಲಕತ್ತಾದಲ್ಲಿ ವಿಖ್ಯಾತ ಉಪನ್ಯಾಸ ಪ್ರಣೇತರಾದ ಶ್ರೀಯುತ ಬಾಬು ಬಂಕಿಂಚಂದ್ರ ಚಟ್ಟೋಪಾಧ್ಯಾಯರಿಂದ ಬಂಗಾಳಿ ಭಾಷೆಯಲ್ಲಿ ರಚಿಸಲ್ಪಟ್ಟಿದೆ. ಆ ಪುಸ್ತಕವು ಇಂಗ್ಲೀಷಿನಲ್ಲಿ ಭಾಷಾಂತರ

ಮಾಡಲ್ಪಟ್ಟು, ಭಾರತವರ್ಷದ ಭೂತಪೂರ್ವ ಗವರ್ನರ್ ಜನರಲ್ ಮಹಾಮತಿ ಲಾರ್ಡ್ ಲಿಟ್ಟನ್ ಸಾಹೆಬ ಬಹದ್ದೂರ್ರವರ ಆಶ್ರಯದಿಂದ ಪ್ರಚಾರ ಮಾಡಲ್ಪಟ್ಟಿದೆ.

ಮೂಲಗ್ರಂಥಕರ್ತರಾದ ಬಂಕಿಮ ಬಾಬುಯವರ ಗ್ರಂಥಗಳು ಅನೇಕ ಉಂಟು. ಅವುಗಳಲ್ಲಿ 'ವಿಷವೃಕ್ಷ'ವೆಂಬ ಗಾರ್ಹಸ್ಥ್ಯ ಸಂಬಂಧವಾದೊಂದು ನಾವೆಲು ಈಚೆಗೆ ಮಿಸ್ಟ್ರೆಸ್ ಮೇರಿಯು ಎಸ್. ನೈಟ್ ಎಂಬುವರಿಂದ ಇಂಗ್ಲೀಷಿನಲ್ಲಿ ಭಾಷಾಂತರಿಸಲ್ಪಟ್ಟು, ಮೆಸ್ಟರ್ ಎಡ್ವಿನ್ ಆರ್ನೋಲ್ಡ್, ಸಿ.ಎಸ್.ಐ. ಎಂಬುವರು ಬರೆದಿರುವ ಪೀಠಿಕೆಯೊಡನೆ ಪ್ರಚಾರಮಾಡಲ್ಪಟ್ಟಿದೆ. ಮೆಸ್ಟರ್ ಎಡ್ವಿನ್ ಆರ್ನೋಲ್ಡ್ ಸಾಹೆಬರವರು ಬರೆದಿರುವ ಪೀಠಿಕೆಯಲ್ಲಿ, ನಮ್ಮ 'ಗ್ರಂಥಕರ್ತರಾದ ಬಾಬು ಬಂಕಿಮ ಚಂದ್ರ ಚಟ್ಟೋಪಾಧ್ಯಾಯರು ಬಂಗಾಳಾ ಪ್ರೆಸಿಡೆನ್ಸಿಯಲ್ಲೊಬ್ಬ ಸುಶಿಕ್ಷಿತರಾದ ದೊಡ್ಡ ಪಂಡಿತರೆಂತಲೂ, ಸುವಿಖ್ಯಾತರಾದ ಉಪನ್ಯಾಸ ಲೇಖಕರೆಂತಲೂ, ಅವರ ಕಲ್ಪನಾಶಕ್ತಿಯು ತೇಜಸ್ವಿನಿಯಾದುದೆಂತಲೂ, ಅವರ ಗ್ರಂಥೋದ್ದೇಶವು ಕೇವಲ ಪವಿತ್ರವಾದುದೆಂತಲೂ, ಅವರ ರಚನಾ ಕೌಶಲವು ಓದಿದ ಮಾತ್ರದಿಂದ ಹೃದಯದಲ್ಲಿ ಅಂಕಿತವಾಗತಕ್ಕುದೆಂತಲೂ ಹೇಳಿ, ಅವರ ಗ್ರಂಥವು ಭಾರತವರ್ಷದ ದೇಶಭಾಷಾಭಿವೃದ್ಧಿಗೆ ಮಂಗಳ ಸೂಚಕವಾದುದೆಂತಲೂ ಕೊಂಡಾಡಿದ್ದಾರೆ. ಅಂತಹ ವಿಖ್ಯಾತ ನಾಮರಾದ ನಮ್ಮ ಗ್ರಂಥಕರ್ತರನ್ನು ನಮ್ಮ ಕನ್ನಡ ಪಾಠಕಮಹಾಶಯರಿಗೆ ಪರಿಚಯಮಾಡಿ ಕೊಡುವುದಕ್ಕೆ ಸಲುವಾಗಿ ನಾನವರ ಕ್ಷಮಾ ಪ್ರಾರ್ಥನೆಯನ್ನು ಮಾಡಬೇಕಾದುದಿಲ್ಲವು. ಆದರೆ ನನ್ನದೊಂದು ಪ್ರಾರ್ಥನೆ:—ನಮ್ಮ ಪಾಠಕಮಹಾಶಯರು ನನ್ನೀ ಕನ್ನಡ ಗ್ರಂಥವನ್ನೋದಿ ಮೂಲಗ್ರಂಥದ ಉತ್ಕರ್ಷಾಪಕರ್ಷವನ್ನು ಮಾಡಕೂಡದು. ಏಕೆಂದರೆ, ಕನ್ನಡ ಭಾಷೆಯು ವಂಗಭಾಷೆಯು ಹೊಂದಿರುವಷ್ಟು ಉನ್ನತಿಯನ್ನು ಹೊಂದಿಲ್ಲವಲ್ಲದೆ, ಗ್ರಂಥವನ್ನು ರಚನೆಯಂಗೈದೆನಗೆ ಕನ್ನಡದಲ್ಲಿ ಪಾಂಡಿತ್ಯವೂ ಇಲ್ಲ; ಆದುದರಿಂದವರು ಉತ್ಕರ್ಷವೆಂಬ ತ್ರಾಸಿನಿಂದ ಅಸ್ಥಿಸಾರವಾದೀ ನನ್ನ ಕದರ್ಯಲಿಪಿಯನ್ನು ತೋಲಸಮಾಡಕೂಡದೆಂದು ಪ್ರಾರ್ಥಿಸುತ್ತೇನೆ. ಈ ಉಪನ್ಯಾಸದ ಮೂಲಗ್ರಂಥವಾದರೋ, ಸ್ವದೇಶದಲ್ಲಿಯೂ ಅನ್ಯದೇಶದಲ್ಲಿಯೂ ನಮ್ಮ ದೇಶಭಾಷೆಗೆ ಶಿರೋಭೂಷಣವಾದುದಾಗಿಯೂ ಆದರ್ಶಸ್ವರೂಪವಾಗಿಯೂ ಅಂಗೀಕರಿಸಲ್ಪಟ್ಟಿದೆ. ನಾನಾ ಗ್ರಂಥದಲ್ಲಿ ಅತ್ಯುತ್ಕೃಷ್ಟವಾದ ವಾಗ್ವಿಜೃಂಭಣೆಯಿಂದ ಸತೇಜವಾಗಿ ಚಿತ್ರಿಸಲ್ಪಟ್ಟಿರುವ ಚಿತ್ರವನ್ನು ಅನುಕರಣಮಾಡಲು ಪ್ರಯತ್ನಪಟ್ಟಿದ್ದೇನೆ.

ಶ್ರೀ ಬಂಕಿಮ ಬಾಬುಯವರು ತಮ್ಮ ಗ್ರಂಥವನ್ನು ಕನ್ನಡದಲ್ಲಿ ಭಾಷಾಂತರಿಸಿ ಪ್ರಚಾರಮಾಡಲು ಸದಯರಾಗಿ ಅಪ್ಪಣೆಯನ್ನು ಕೊಟ್ಟಿರುವುದಕ್ಕಾಗಿ ನಾನವರಿಗೆ ಚಿರಕಾಲ ಋಣಿಯಾಗಿರುವೆನು.

ನಮ್ಮ ಸದಯರಾದ ಪಾಠಕಮಹಾನುಭಾವರು ಅವರು ನನ್ನ ಇತರ ಗ್ರಂಥಗಳ ವಿಚಾರದಲ್ಲಿ ತೋರಿರುವ ಉತ್ಸಾಹಾನುಗ್ರಹಗಳನ್ನು ಈ ಗ್ರಂಥದ ವಿಚಾರದಲ್ಲಿಯೂ ತೋರುವರೆಂದು ಕೋರುತ್ತೇನೆ.

ಈ ಗ್ರಂಥವನ್ನು ಬರೆಯುವುದರಲ್ಲಿ ಸಹಾಯಮಾಡಿದ ನನ್ನ ಸ್ನೇಹಿತರಾದ ಮ|| ರಾ|| ಗುಂಡಪ್ಪನವರಿಗೆ ಕೃತಜ್ಞನಾಗಿದ್ದೇನೆ.

ಎಡೆಹಳ್ಳಿ,<br>೨೧-೩-೯೨೪.

ಇತಿ,<br>**ಬಿ. ವೆಂಕಟಾಚಾರ್ಯ.**

ಶ್ರೀಃ

ಶ್ರಿಯೈನಮಃ

# ದುರ್ಗೇಶನಂದಿನಿ



## ಮೊದಲನೆಯ ಭಾಗ



### ಮೊದಲನೆಯ ಪರಿಚ್ಛೇದ

**ದೇವಾಲಯ**

ಒಂಬೈನೂರು ತೊಂಬತ್ತೆಂಟನೆಯ ವಂಗಾಬ್ದದ ಕಡೆಯ ಭಾಗದಲ್ಲೊಂದು ದಿನ ಮಹಾಪುರುಷನೊಬ್ಬನು ಅಶ್ವಾರೂಢನಾಗಿ ವಿಷ್ಣುಪುರದಿಂದ ಹೊರಟು ಮಂದಾರಣದ ಮಾರ್ಗದಲ್ಲಿ ಏಕಾಂಗಿಯಾಗಿ ಪ್ರಯಾಣಮಾಡುತ್ತಿದ್ದನು. ಆಗ ದಿನಮಣಿಯಾದ ಸೂರ್ಯದೇವನು ಅಸ್ತಾಚಲಗಮನೋದ್ಯೋಗಿಯಾಗುತ್ತಿದ್ದುದನ್ನು ಕಂಡು ಹಾದಿವಾಕನಾಗಿದ್ದಾ ಮಹಾಪುರುಷನು ಮನಸ್ಸಿನಲ್ಲಿ, ಮುಂದೆ ಪಯಣವಾಗಿ ಹೋಗತಕ್ಕ ಮಾರ್ಗವು ವಿಜನವಾಗಿಯೂ ದೂರವಾಗಿಯೂ ಇರುವುದರಿಂದ, ಕಾಲಧರ್ಮದಿಂದ ಅವೇಳೆಯಲ್ಲಿ ಗಾಳಿಗೂ ಮಳೆಗೂ ಆರಂಭವಾದರೆ ಉಳಿಯುವುದಕ್ಕೆ ಸ್ಥಳ ಸಿಗದೆ ಕಷ್ಟಪಡಬೇಕಾಗುವುದೆಂದು ಯೋಚಿಸಿ, ಕುದುರೆಯನ್ನು ವೇಗವಾಗಿ ಬಿಡಲಾರಂಭಿಸಿದನು. ಸ್ವಲ್ಪ ದೂರ ಹೋಗುವುದರೊಳಗಾಗಿ ಸೂರ್ಯನು ಅಸ್ತಂಗತನಾದನು. ಕ್ರಮ ಕ್ರಮವಾಗಿ ಸಂಧ್ಯಾರಾಗವು ವಿಲೀನವಾಗಿ ಗಗನವು ನೀಲಮೇಘಪಙ್ಕ್ತಿಗಳಿಂದ ಆವೃತವಾಯಿತು. ನಿಶಾರಂಭದಲ್ಲೇ ಘೋರತರವಾದ ಅಂಧಕಾರವು ದಿಗಂತವ್ಯಾಪ್ತವಾಗಿ ಕುದುರೆಯನ್ನು ಮುಂದೆ ನಡಿಸುವುದು ಅಸಾಧ್ಯವಾದರೂ ಧೀರನಾದಾ ಪುರುಷನು ಬಾರಿ ಬಾರಿಗೂ ಮಿನುಗುತ್ತಿದ್ದ ಮಿಂಚಿನ ಬೆಳಕಿನಲ್ಲಿ ದಾರಿಯನ್ನು ಪ್ರಯಾಸದಿಂದ ಸ್ವಲ್ಪ ಸ್ವಲ್ಪವಾಗಿ ನಡೆಯುತ್ತಿದ್ದನು.

ಸ್ವಲ್ಪ ಹೊತ್ತಿನಲ್ಲಿಯೇ ಮೇಘಗರ್ಜನೆಗೆ ಪ್ರಾರಂಭವಾಗಿ ಪ್ರಬಲವಾದ ವೃಷ್ಟಿಧಾರೆಯು ಸುರಿಯಲಾರಂಭವಾಯಿತು. ಅಶ್ವಾರೂಢ ವ್ಯಕ್ತಿಯು ಮುಂದು ವರಿದುಹೋಗತಕ್ಕ ಮಾರ್ಗವನ್ನು ಸ್ವಲ್ಪವೂ ಗೊತ್ತುಹಿಡಿಯಲಾರದೆ ಕುದುರೆಯು ಸ್ವೇಚ್ಛೆಯಾಗಿ ಹೋಗಲೆಂದು ಅದರ ಕಡಿವಾಣವನ್ನು ಸಡಿಲಿಸಲಾಗಿ, ಕುದುರೆಯು ಸುಸೂತ್ರವಾಗಿ ನಡೆಯತೊಡಗಿತು. ಅನಂತರ ಸ್ವಲ್ಪ ದೂರ ಹೋದ ಬಳಿಕ ಕುದುರೆಯ ಕಾಲಿಗೆ ಒಂದಾವುದೋ ಕಠಿನ ಪದಾರ್ಥವು ತಗಲಿ ಪದಸ್ಖಲನ ವಾಯಿತು. ಆ ಸಮಯದಲ್ಲಿ ಮಿಂಚು ಥಳಥಳನೆ ಹೊಳೆಯಿತು. ಅದರ ಪ್ರಕಾಶದಿಂದ ಮುಂದೆಡೆ ಆವುದೋ ಮಹತ್ತಾದೊಂದು ಬಿಳಿದಾದ ಪದಾರ್ಥವು ಅವನ ಕಣ್ಣಿಗೆ ಬೀಳಲು, ಅದೊಂದು ಗೃಹವಾಗಿರಬಹುದೆಂದು ತಿಳಿದು ಕುದುರೆಯಿಂದ ಧುಮುಕಿ, ನೆಲದಮೇಲೆ ನಿಂತು ನೋಡಿದನು. ಕುದುರೆಯ ಕಾಲು ಒಂದು ಸೋಪಾನದ ಶಿಲೆಗೆ ತಗಲಿ ಎಡವಿದಂತೆ ಕಂಡುಬಂದಿತು. ಸಮೀಪದಲ್ಲಿಯೇ ಉಳಿಯುವುದಕ್ಕೆ ಸ್ಥಳ ಸಿಗಬಹುದೆಂದು ತಿಳಿದು ಕುದುರೆಯನ್ನು ನಿರಾತಂಕವಾಗಿ ಹೋಗುವಂತೆ ಕೈಬಿಟ್ಟು, ತಾನು ಆ ಅಂಧಕಾರದಲ್ಲಿ ಸೋಪಾನ ಶಿಲೆಗಳಮೇಲೆ ಮೆಲ್ಲಮೆಲ್ಲನೆ ಕಾಲಿಡುತ್ತ ಹತ್ತಲಾರಂಭಿಸಿ, ಹತ್ತಿಪ್ಪತ್ತು ಮೆಟ್ಟಿ ಗಳನ್ನು ಹತ್ತಿದನು. ತಟಿದಾಲೋಕದಿಂದ* ಆ ಕಟ್ಟಡವು ಒಂದು ದೇವಾಲಯ ವಾಗಿ ಕಂಡಿತು. ಉಪಾಯದಿಂದ ಮತ್ತೂ ಮುಂದೆ ಹೋಗಿ ನೋಡಲಾಗಿ, ಆ ದೇವಾಲಯಕ್ಕೆ ಚಿಕ್ಕದಾದೊಂದು ಬಾಗಿಲಿದ್ದಿತು. ಬಾಗಿಲು ಮುಚ್ಚಿದ್ದಿತು. ಬಾಗಿಲನ್ನು ಕೈಯಿಂದ ತಡವರಿಸಿ ನೋಡಿದನು. ಹೊರಗಣ ಚಿಲಕವು ಹಾಕಿ ದ್ದಂತೆ ಕಂಡುಬರಲಿಲ್ಲ. ಪಥಿಕನು ವಿಸ್ಮಿತನಾಗಿಯೂ, ಕೌತೂಹಲವಿಶಿಷ್ಟ ನಾಗಿಯೂ ಜನವಿಹೀನವಾದಾ ಮಾರ್ಗದಲ್ಲಿದ್ದಾ ಮಂದಿರದಲ್ಲಿ ಅಷ್ಟೊಂದು ಹೊತ್ತಿನಲ್ಲಿ ಒಳಗಣ ಅಗಣಿಯನ್ನು ಆರೋ ಹಾಕಿಕೊಂಡಿರಬಹುದೆಂದು ಯೋಚಿಸಿ, ಸಂತತ ಧಾರೆಯಾಗಿ ಸುರಿಯುತ್ತಿದ್ದ ಮಳೆಯನ್ನು ಸಹಿಸಲಾರದೆ ದೇವಮಂದಿರದೊಳಗಾರು ಇದ್ದರೂ ಚಿಂತೆಯಿಲ್ಲವೆಂದು ಧೈರ್ಯವನ್ನವಲಂಬಿಸಿ, ಕೈಗಳಿಂದ ಬಾಗಿಲನ್ನು ಬಲವಾಗಿ ತಟ್ಟತೊಡಗಿದನು. ಬಾಗಿಲನ್ನು ತೆರೆಯಲಾರೂ ಬರಲಿಲ್ಲ. ಅನಂತರ ಕಾಲುಗಳಿಂದೊದ್ದು ಬಾಗಿಲನ್ನೊಡೆಯಲು ಮನವು ಮಣಗಿತು. ಆದರೆ ದೇವಾಲಯದ ಮುಂದುಗಡೆ ಹಾಗೆ ಮಾಡುವುದು ಅಮರ್ಯಾದೆಯೆಂಬ ಆಶಂಕೆಯಿಂದ ಪಥಿಕನು ಅಷ್ಟೊಂದು ದೂರ ಪ್ರವೃತ್ತನಾಗ ಲಿಲ್ಲ. ಆದರೆ ಅವನ ಕೈಪೆಟ್ಟುಗಳು ಬಲವಾದವಾಗಿದ್ದುದರಿಂದ, ಬಾಗಿಲಿಗೆ ಹಾಕಿದ್ದ ಸಾಮಾನ್ಯವಾದ ಮರದ ಅಗಣಿಯು ಮುರಿದು ಕದವು ತಾನಾಗಿಯೇ ತೆರೆದುಕೊಂಡಿತು. ಕೂಡಲೇ ಆ ಯೌವನ ಪುರುಷನು ದೇವಮಂದಿರದೊಳಗೆ ಪ್ರವೇಶಮಾಡಿದನು. ಆಗ ಮಂದಿರದೊಳಗಣಿಂದ ಅಸ್ಫುಟವಾದ ಚೀತ್ಕಾರದ

* ತಟಿದಾಲೋಕದಿಂದ=ಮಿಂಚಿನ ಬೆಳಕಿನಿಂದ.

ಧ್ವನಿಯುಂಟಾಗಿ ಆ ಧ್ವನಿಯು ಅವನ ಕಿವಿಗಳಿಗೆ ಬಿದ್ದಿತು. ಮತ್ತು ಅವನು ಒಳಗೆ ಪ್ರವೇಶಿಸಿದ ಮುಹೂರ್ತದಲ್ಲಿಯೇ ಬಾಗಿಲು ಬಯಲಾಗಿ ತೆರೆದಿದ್ದುದರಿಂದ ಗಾಳಿಯು ನುಗ್ಗಿ ಒಳಗೆ ಉರಿಯುತ್ತಿದ್ದ ದೀಪವು ಆಳಿಸಿಹೋಯಿತು. ಆದುದರಿಂದ ಪಥಿಕನಿಗೆ ಮಂದಿರದಲ್ಲಿ ಮನುಷ್ಯರಾರಿರುವರೋ ದೇವತಾ ವಿಗ್ರಹವಿರುವು ದಾವುದೋ ಎಂಬುದನ್ನು ದೃಢಪಡಿಸಲಸಾಧ್ಯವಾಯಿತು. ಅನಂತರ, ನಿರ್ಭೀಕ ನಾಗಿದ್ದಾ ಯೌವನ ಪಥಿಕನು ತನಗೆ ಪ್ರಾಪ್ತವಾದಾ ಅವಸ್ಥೆಯನ್ನು ಯೋಚಿಸಿ ಕೊಂಡು ಸ್ವಲ್ಪ ನಕ್ಕು, ಆ ಅಂಧಕಾರದಲ್ಲಿಯೇ ಪ್ರಥಮತಃ ಭಕ್ತಿಭಾವದಿಂದ ಮಂದಿರದ ಮಧ್ಯದಲ್ಲಿದ್ದ ಅದೃಶ್ಯ ದೇವಮೂರ್ತಿಯನ್ನುದ್ದೇಶಿಸಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಎದ್ದು ನಿಂತುಕೊಂಡು, ಘಟ್ಟಿಯಾಗಿ ಮಂದಿರ ದೊಳಗಿರುವವರಾರೆಂದು ಕೂಗಿದನು. ಆ ಪ್ರಶ್ನೆಗೆ ಉತ್ತರವನ್ನಾರೂ ಕೊಡಲಿಲ್ಲ. ಆದರೆ ಕೆಲವು ಆಭರಣಗಳ ಸಿಂಜಿತ ಶಬ್ದವು ಮಾತ್ರ ಅವನ ಕಿವಿಗೆ ಬಿದ್ದಿತು. ಆಗಲಾ ಪಥಿಕನು ವೃಥಾ ವಾಕ್ಯ ವ್ಯಯವು ನಿಷ್ಪ್ರಯೋಜನವೆಂದು ಭಾವಿಸಿ, ಗಾಳಿಯು ಒಳಗೆ ಬಾರದಹಾಗೆ ಬಾಗಿಲನ್ನು ಮುಚ್ಚಿ, ಅಗಣಿಗೆ ಬದಲಾಗಿ ತಾನೇ ಅಡ್ಡವಾಗಿ ನಿಂತುಕೊಂಡು, ಪುನಃ 'ಈ ಮಂದಿರದಲ್ಲಿರುವವರಾರೇ ಆಗಲಿ, ಕೇಳಿರಿ. ನಾನು ಸಶಸ್ತ್ರಪಾಣಿಯಾಗಿ ಬಾಗಿಲಲ್ಲಿ ಕುಳಿತಿದ್ದೇನೆ. ನನ್ನ ವಿಶ್ರಾಮಕ್ಕಾರೂ ವಿಘ್ನವನ್ನು ಮಾಡಕೂಡದು. ಹಾಗೆ ನನ್ನ ಮಾತನ್ನು ಲಕ್ಷಿಸದೆ ವಿಘ್ನ ಮಾಡುವವರು ಪುರುಷರಾಗಿದ್ದರೆ ಅದಕ್ಕವರು ತಕ್ಕ ಫಲವನ್ನು ಹೊಂದುವರು; ಮಂದಿರದಲ್ಲಿರುವವರು ಪುರುಷರಲ್ಲದೆ ಹೆಂಗಸರಾಗಿದ್ದರೆ ನಿಶ್ಚಿಂತೆಯಾಗಿ ನಿದ್ರೆಯನ್ನು ಮಾಡಬಹುದು. ರಾಜಪುತ್ರನ ಕೈಯಲ್ಲಿ ಖಡ್ಗವಿರುತ್ತ ನಿಮ್ಮ ಕೂದಲೊಂದಾದರೂ ಘಾತವಾಗಲಾರದು' ಎಂದು ಘಟ್ಟಿಯಾಗಿ ಕೂಗಿ ಹೇಳಿದನು.

ಅನಂತರ 'ಸ್ವಾಮಿ! ತಾವಾರು?' ಎಂಬ ಪ್ರಶ್ನೆಯು ಒಬ್ಬ ಹೆಂಗಸಿನ ಧ್ವನಿಯಲ್ಲಿ ಹೇಳಿದಹಾಗೆ ಒಳಗಣಿಂದ ಕೇಳಿಸಿತು. ಅದನ್ನು ಕೇಳಿ ಪಥಿಕನು ವಿಸ್ಮಯಾವಿಷ್ಟನಾಗಿ, ಸ್ವರದಿಂದ ನೋಡಿದರೆ ಪ್ರಶ್ನೆಯನ್ನಾವಳೋ ಸುಂದರಿ ಯೊಬ್ಬಳು ಮಾಡುವಹಾಗೆ ತೋರುವುದೆಂದು ಭಾವಿಸಿ—'ನನ್ನ ಪರಿಚಯದಿಂದ ನಿಮಗೇನಾದೀತು?' ಎಂದು ಉತ್ತರವನ್ನು ಕೊಟ್ಟನು.

'ಮಹಾಶಯರೆ! ನಾವು ಬಹಳ ಭೀತರಾಗಿದ್ದೇವೆ!' ಎಂದು ಒಳಗಣಿಂದ ಪ್ರತ್ಯುತ್ತರವು ಹೊರಟಿತು.

ಯುವಕನು, 'ನಾನಾರೆಂಬುದನ್ನು ನಾನೇ ಹೇಳಿಕೊಳ್ಳುವುದು ನಮ್ಮ ಸಂಪ್ರದಾಯವಲ್ಲ; ಆದರೆ ನಾನು ಇಲ್ಲಿರುವವರೆಗೂ ಅಬಲೆಯರಿಗೆ ವಿಪತ್ತಾವುದೂ ಸಂಘಟಿಸಲಾರದೆಂದು ಸ್ಥಿರವಾಗಿ ನಂಬಿರಿ' ಎಂದು ಹೇಳಿದನು.

ಒಳಗಿದ್ದ ರಮಣಿಯು, 'ಸ್ವಾಮಿ! ತಮ್ಮ ಮಾತುಗಳನ್ನು ಕೇಳಿ ನನಗೆ

ಧೈರ್ಯವುಂಟಾಯಿತು; ಇದುವರೆಗೂ ಮೃತಪ್ರಾಯೆಯಾಗಿದ್ದೆನು; ನಾವು ಸಾಯಾಹ್ನಕಾಲದಲ್ಲೇ ಶೈಲೇಶ್ವರ ಶಿವಪೂಜೆಗೆ ಸಲುವಾಗಿ ಬಂದಿದ್ದೆವು; ಮಳೆಗೆ ಪ್ರಾರಂಭವಾಗುತ್ತಲೇ ನಮ್ಮ ಬೋಯಿಗಳೂ ಸೇವಕರೂ ದಾಸಿಯರೂ ನಮ್ಮನ್ನು ಬಿಟ್ಟು ನೆಲೆಯಿಲ್ಲದೆ ಹೊರಟುಹೋದರು' ಎಂದು ಹೇಳಿದಳು.

ಯುವಕನು, 'ಚಿಂತೆಯನ್ನು ಮಾಡಬೇಡಿರಿ, ವಿಶ್ರಮಿಸಿಕೊಳ್ಳಿರಿ, ಬೆಳಗಾಗುತಲೇ ನಾನು ನಿಮ್ಮನ್ನು ಸಂಗಡ ಕರೆದುಕೊಂಡು ಹೋಗಿ ನಿಮ್ಮ ಮನೆಗೆ ಬಿಡುವೆನು' ಎಂದು ಹೇಳಲು; ರಮಣಿಯು, 'ಶೈಲೇಶ್ವರನು ತಮಗೆ ಮಂಗಳವನ್ನು ಮಾಡಲಿ' ಎಂದು ಹರಸಿದಳು.

ಅರ್ಧರಾತ್ರಿಯ ಮೇಲೆ ಗಾಳಿಯೂ ಮಳೆಯೂ ನಿಂತವು. ಆಗಲಾ ಯುವಕನು ಒಳಗಿದ್ದ ಹೆಂಗಸರನ್ನುದ್ದೇಶಿಸಿ, 'ನೀವು ಸ್ವಲ್ಪ ಹೊತ್ತು ಧೈರ್ಯಾವಲಂಬನೆಯಿಂದ ಇಲ್ಲಿದ್ದರೆ ನಾನು ಇಲ್ಲಿಗೆ ಸಮೀಪದಲ್ಲಿರುವ ಗ್ರಾಮಕ್ಕೆ ಹೋಗಿ ಬೆಳಕನ್ನು ತರುವೆನು' ಎಂದು ಹೇಳಿದನು.

ಅದನ್ನು ಕೇಳಿ ಮೊದಲು ಮಾತನಾಡಿದ ಹೆಂಗಸು, 'ಮಹಾಶಯರೆ! ಅವೇಳೆಯಲ್ಲಿ ಗ್ರಾಮಾಂತರವನ್ನು ಹುಡುಕಿಕೊಂಡು ಹೋಗಬೇಕಾದ ಆವಶ್ಯಕವಿಲ್ಲ. ದೇವಾಲಯದ ರಕ್ಷಕನೊಬ್ಬನು ಸಮೀಪದಲ್ಲಿಯೇ ವಾಸಮಾಡುತ್ತಿರುವನು; ಬೆಳದಿಂಗಳು ಪ್ರಕಾಶಮಾನವಾಗಿದೆ; ದೇವಸ್ಥಾನದ ಹೊರಗೆ ಹೋಗಿ ನೋಡಿದರೆ ಆಲಯದ ಭೃತ್ಯನ ಕುಟೀರವಿರುವುದು ಕಂಡುಬರುವುದು. ಅವನು ಏಕಾಂಗಿಯಾಗೀ ಪ್ರದೇಶದಲ್ಲಿ ವಾಸಮಾಡುವನಾದಕಾರಣ ಮನೆಯಲ್ಲಾವಾಗಲೂ ಬೆಂಕಿಯನ್ನು ಮಾಡುವ ಸಾಮಗ್ರಿಯನ್ನಿಟ್ಟುಕೊಂಡಿರುವನು' ಎಂದು ಹೇಳಿದಳು.

ಯುವಕನು ಅವಳ ಮಾತಿನ ಪ್ರಕಾರ ದೇವಸ್ಥಾನದಿಂದ ಹೊರಗೆ ಬಂದು ಬೆಳದಿಂಗಳ ಬೆಳಕಿನಲ್ಲಿ ದೇವಾಲಯದ ಭೃತ್ಯನ ಮನೆಯನ್ನು ದೂರದಿಂದ ನೋಡಿ, ಅವನ ಮನೆಯ ಬಾಗಿಲಿಗೆ ಹೋಗಿ ಅವನನ್ನೆಬ್ಬಿಸಿದನು. ಭೃತ್ಯನು ಭಯದಿಂದ ಮನೆಯ ಬಾಗಿಲನ್ನು ತೆರೆಯದೆ, ಬಂದಿರುವವನನ್ನು ಒಳಗಿನಿಂದಲೇ ನೋಡಿ, ಅವನು ಕಳ್ಳನಲ್ಲವೆಂದು ಸ್ಥಿರವಾಗಿ ನಂಬಿದ್ದರೂ ಬಾಗಿಲನ್ನು ತೆರೆಯುವುದಕ್ಕೆ ಶಂಕಿಸುತ್ತಿದ್ದನು. ಕಡೆಗೆ ಯುವಕನು ಪಾರಿತೋಷಕವಾಗಿ* ಕೊಟ್ಟ ಸುವರ್ಣಮುದ್ರೆಯನ್ನು ತೆಗೆದುಕೊಳ್ಳುವ ಆಸೆಯನ್ನಡಗಿಸುವುದು ಕಷ್ಟಸಾಧ್ಯವಾಗಿ, ಏನೇನೋ ಯೋಚಿಸಿಕೊಂಡು ಬಳಿಕ ಆದುದಾಗಲೆಂದು ಧೈರ್ಯಗೊಂಡು ಬಾಗಿಲನ್ನು ತೆರೆದು ದೀಪವನ್ನು ಹೊತ್ತಿಸಿಕೊಟ್ಟನು.

ಪಾಂಥನು ದೀಪವನ್ನು ತಂದು ಮಂದಿರದಲ್ಲಿ ನೋಡಲಾಗಿ, ಅದರ ಮಧ್ಯದಲ್ಲಿ ಶ್ವೇತಶಿಲೆಯಿಂದ ನಿರ್ಮಿತವಾದ ಶಿವಮೂರ್ತಿಯು ಸ್ಥಾಪಿತವಾ

* ಪಾರಿತೋಷಕವಾಗಿ=ಬಹುಮಾನವಾಗಿ.

ಗಿದ್ದಿತು. ಆ ಮೂರ್ತಿಯ ಹಿಂಭಾಗದಲ್ಲಿ ಇಬ್ಬರು ಕಾಮಿನಿಯರು ಕುಳಿತಿದ್ದರು. ಅವರಲ್ಲಿ ಕಿರಿಯವಳಾಗಿದ್ದವಳು ದೀಪವನ್ನು ನೋಡಿದ ಕೂಡಲೇ ಆವರಣಪಟವನ್ನು ಮುಖದಮೇಲೆ ಎಳೆದುಕೊಂಡು ಸಮ್ಮುಖಿಯಾಗಿ ಕುಳಿತುಕೊಂಡಳು; ಪರಂತು ಅನಾವೃತವಾಗಿದ್ದ* ಕೈಗಳಲ್ಲಿದ್ದ ವಜ್ರಖಚಿತವಾದ ವಲಯವೇ ಮುಂತಾದ ರತ್ನಾಭರಣಗಳನ್ನೂ ನೋಡಿ, ಪಥಿಕನು, ಆ ನಾರೀಮಣಿಯು ನಿಸ್ಸಂದೇಹವಾಗಿ ಹೀನವಂಶಸಂಭೂತೆಯಲ್ಲವೆಂದು ತಿಳಿದುಕೊಂಡನು. ಎರಡನೆಯವಳ ಉಡುಪು ಮುಂತಾದುವು ಮೊದಲಿನವಳ ಉಡಿಗೆ ತೊಡಿಗೆಗಳಿಗಿಂತ ಕಡಿಮೆಯಾಗಿದ್ದುದರಿಂದ ಅವಳು ಯುವತಿಯ ಸಹಚಾರಿಣಿ ಅಥವಾ ದಾಸಿಯಾಗಿರಬೇಕೆಂದು ಭಾವಿಸಿಕೊಂಡನು. ಆದರೆ ಅವಳು ಸಾಮಾನ್ಯ ದಾಸಿಯ ಹಾಗಿರಲಿಲ್ಲ; ಸಂಪನ್ನೆಯಾಗಿಯೇ ಕಂಡುಬಂದಳು. ಯುವಕನಿಗೆ ತನ್ನೊಂದಿಗೆ ಅದುವರೆಗೂ ಮಾತನಾಡುತ್ತಿದ್ದವಳು ವಯೋಜ್ಯೇಷ್ಠೆಯೆಂದು ಗೊತ್ತಾಯಿತು. ಅವರಿಬ್ಬರ ಉಡುಪು ಈ ದೇಶೀಯರ ಉಡುಪಿನಹಾಗಿರಲಿಲ್ಲ. ಅವರ ವಸ್ತ್ರಾಭರಣವನ್ನು ನೋಡಿದರೆ ಅವರಿಬ್ಬರೂ ಹಿಂದೂಸ್ಥಾನದ ದೇಶೀಯರಾಗಿ ಕಂಡುಬಂದರು. ಯುವಕನು ದೇವಾಲಯದಲ್ಲಿ ಉಪಯುಕ್ತ ಸ್ಥಳದಲ್ಲಿ ದೀಪವನ್ನಿಟ್ಟು ರಮಣಿಗಳಿಗೆದುರಾಗಿ ನಿಂತುಕೊಂಡನು. ದೀಪದ ಕಾಂತಿಯು ಅವನ ಮೈಮೇಲೆ ಬಿದ್ದಿತ್ತಾದಕಾರಣ, ಹೆಂಗಸರಿಬ್ಬರೂ ಅವನ ರೂಪುಲಾವಣ್ಯಗಳನ್ನು ನೋಡುತಿದ್ದರು. ಪಥಿಕನು ವಯಸ್ಸಿನಲ್ಲಿ ಇಪ್ಪತ್ತೈದು ವರ್ಷದವನಾಗಿದ್ದನು. ಅವನ ದೀರ್ಘವಾದ ಶರೀರವು ಅವಯವಸೌಷ್ಠವವಿಲ್ಲದವರಿಗಿದ್ದರೆ ಅಸೌಷ್ಠವಕ್ಕೆ ಕಾರಣವಾಗುತ್ತಿದ್ದಿತು; ಆದರೆ ಅವನ ವಕ್ಷೋವಿಶಾಲತೆಯಿಂದಲೂ, ಅವಯವಸೌಷ್ಠವದಿಂದಲೂ, ಸರ್ವಾಂಗಗಳಲ್ಲಿಯೂ ಪುಷ್ಟಿಯಾದ ಮೈಕಟ್ಟಿನ ಘಟನಾ ವಿಶೇಷದಿಂದಲೂ ಆ ದೈರ್ಘ್ಯವು ಅವನಿಗೆ ಅದ್ಭುತ ಸೌಂದರ್ಯವನ್ನುಂಟುಮಾಡಿದ್ದಿತು. ದೇಹಕಾಂತಿಯು ವಸಂತಪ್ರಸೂತ ನವಪಲ್ಲವದ† ಕಾಂತಿಗೆ ಸಮನಾಗಿ ಅಥವಾ ತದಧಿಕವಾಗಿದ್ದಿತು. ಅದಲ್ಲದೆ ರಜಪುತ ಜಾತಿಯವರು ಉಪಯೋಗಿಸುವ ಉಡುಪಿನಿಂದಾ ದೇಹಕಾಂತಿಯು ಮತ್ತಷ್ಟು ಅತಿಶಯವಾಗಿ ಪ್ರಕಾಶಿಸುತ್ತಿದ್ದಿತು. ಮುತ್ತು ರತ್ನಖಚಿತವಾದ ಕಟಿಬಂಧನವು‡ ಅದಕ್ಕೆ ಕಟ್ಟಲ್ಪಟ್ಟಿದ್ದ ಒರೆಯೊಳಗಿಟ್ಟಿದ್ದ ಕತ್ತಿಯು, ದೀರ್ಘವಾದ ಕೈಯಲ್ಲಿ ಹಿಡಿದಿದ್ದ ಉದ್ದವಾದ ಭಲ್ಲೆಯವು, ಮಸ್ತಕದಲ್ಲಿ ವಜ್ರಖಚಿತವಾದ ಉಷ್ಣೀಷವು§, ಕರ್ಣಗಳಲ್ಲಿ ಕನಕಕುಂಡಲವು, ಕಂಠದಲ್ಲಿ ಮುಕ್ತಾಹಾರವು—ಇವೇ ಮುಂತಾದುವುಗಳಿಂದ ಯುವಕನು ಮನ್ಮಥನೋಪಾದಿಯಲ್ಲಿ ಕಣ್ಗೊಳಿಸುತ್ತಿದ್ದನು.

ಈ ರೀತಿಯಾಗಿ ಹೆಂಗಸರಿಗೂ ಯುವಕನಿಗೂ ಸಂಭವಿಸಿದ ಸಂದರ್ಶನ

* ಅನಾವೃತ=ಮುಚ್ಚಿಲ್ಲಪದ. † ವಸಂತಪ್ರಸೂತ ನವಪಲ್ಲವ=ವಸಂತದಲ್ಲಿ ಹುಟ್ಟುವ ಹೊಸ ಚಿಗುರು. ‡ ಕಟಿಬ ಧನ=ನಡುಕಟ್ಟು. § ಉಷ್ಣೀಷ=ಮುಕುಟ, ರುಮಾಲು.

ದಿಂದ ಪರಸ್ಪರ ಪರಿಚಯಕ್ಕೋಸ್ಕರ ಉಭಯ ಪಕ್ಷದಲ್ಲಿಯೂ ಕುತೂಹಲವುಂಟಾಯಿತು. ಆದರೆ ಅಪರಿಚಯಸ್ಥರ ಪರಿಚಯವನ್ನು ಕುರಿತು ಮೊದಲು ವಿಚಾರ ಮಾಡುವುದಾರಿಗೂ ಯುಕ್ತವಾದುದಲ್ಲವೆಂದು ಭಾವಿಸಿ, ಉಭಯ ಪಕ್ಷದವರೂ ವಿಚಾರಮಾಡದೆ ಮೌನವಾಗಿದ್ದರು.

---

## ಎರಡನೆಯ ಪರಿಚ್ಛೇದ

### ಪರಿಚಯಾಲಾಪ

ಪ್ರಥಮದಲ್ಲಿ ಯುವಕನೇ ಹೆಂಗಸರ ಪರಿಚಯವನ್ನು ಕುರಿತು ವಿಚಾರಿಸುವುದಕ್ಕೆ ತನ್ನ ಕುತೂಹಲವನ್ನು ಪ್ರಕಾಶಪಡಿಸಿದನು. ಅವನು ಅವರಲ್ಲಿ ವಯೋಜ್ಯೇಷ್ಠೆಯನ್ನು ಸಂಬೋಧಿಸಿ—'ನೀವಿಬ್ಬರೂ ಸದ್ವಂಶಸಂಭೂತರಾಗಿಯೂ ಭಾಗ್ಯವಂತರ ಮನೆಯ ಹೆಂಗಸರಾಗಿಯೂ ಇರುವಹಾಗೆ ಕಾಣುತ್ತದೆ; ನಿಮ್ಮ ವೃತ್ತಾಂತವನ್ನು ಕುರಿತು ಕೇಳುವುದಕ್ಕೆ ಸಂಕೋಚಪಡುತ್ತೇನೆ; ಆದರೆ, ನನ್ನ ಸ್ವಂತ ವೃತ್ತಾಂತವನ್ನು ಕುರಿತು ನಿಮಗೆ ತಿಳಿಸಲು ನನಗಿರುವ ಪ್ರತಿಬಂಧಕವು ನಿಮಗಿರಲಾರದೆಂದು ಧೈರ್ಯಗೊಂಡು, ನಿಮ್ಮ ಪರಿಚಯವನ್ನು ಕುರಿತು ಕೇಳಲಿಚ್ಛೆಯುಳ್ಳವನಾಗಿದ್ದೇನೆ' ಎಂದು ಹೇಳಿದನು.

ಹಿರಿಯಾಕೆಯಾಗಿದ್ದ ಹೆಂಗಸು ಪ್ರತ್ಯುತ್ತರವನಿತ್ತಳದೆಂತೆಂದರೆ—'ಅಯ್ಯಾ ಮಹಾಶಯರೆ! ಹೆಂಗಸರು ತಮ್ಮ ಪರಿಚಯವನ್ನು ಮೊದಲು ಕೊಡುವುದೆಂದರೇನು? ಅವರಿಗೆ ಅಷ್ಟೊಂದು ಸ್ವಾತಂತ್ರ್ಯವೆಲ್ಲಿಯದು? ಅವರು ತಮ್ಮ ಕುಲೋಪಾಧಿಯನ್ನೂ ಧಾರಣೆಮಾಡಲಶಕ್ತರಾಗಿರಲಾಗಿ, ಸ್ವಂತ ಪರಿಚಯವನ್ನು ಪರರಿಗೆ ಹೇಳಿಕೊಳ್ಳುವುದುಂಟೆ? ಹೆಂಗಸಾದವಳಿಗೆ ಪರಪುರುಷರ ನಯನಗೋಚರವೂ ಆಗದಹಾಗೆ ರಹಸ್ಯವಾಗಿ ವಾಸಮಾಡತಕ್ಕುದು ಕೇವಲ ಧರ್ಮವೆಂದುಕ್ತವಾಗಿರಲಿಕ್ಕಾಗಿ, ಅವಳು ಹೇಗೆ ತಾನೇ ಆತ್ಮಪ್ರಕಾಶವನ್ನು ಮಾಡಿಕೊಳ್ಳಲಾಪಳು? ಹೆಂಗಸರು ತಮ್ಮ ಸ್ವಾಮಿಯ ಹೆಸರನ್ನು ಬಾಯಿಂದ ಉಚ್ಚರಿಸುವುದು ನಿಷೇಧವೆಂದು ಬ್ರಹ್ಮನು ಎಂದು ವಿಧಿಸಿದನೋ ಅಂದಿನಿಂದ ಹೆಂಗಸಿಗೆ ಆತ್ಮಪರಿಚಯವನ್ನು ಹೇಳಿಕೊಳ್ಳುವ ಮಾರ್ಗವನ್ನು ಕಟ್ಟಿಬಿಟ್ಟಹಾಗಾಯಿತು' ಎಂದು ಹೇಳಿದಳು.

ಯುವಕನು ಅದಕ್ಕುತ್ತರವನ್ನು ಕೊಡಲಿಲ್ಲ; ಅವನ ಮನವು ಅನ್ಯತ್ರ ಸಂಸಕ್ತವಾಗಿದ್ದಿತು. ಯುವತಿಯಾದ ರಮಣಿಯು ಕ್ರಮ ಕ್ರಮವಾಗಿ ತನ್ನ ಮುಖಾವರಣವನ್ನು ಸ್ವಲ್ಪ ಸ್ವಲ್ಪವಾಗಿ ಓರೆಮಾಡುತ್ತ ಗೆಳತಿಯ ಹಿಂಭಾಗದಿಂದ ಅನಿಮಿಷನಯನೆಯಾಗಿ* ಯುವಕನನ್ನು ದೃಷ್ಟಿಸಿ ನೋಡುತ್ತಿದ್ದಳು. ವಯೋಧಿಕೆ

* ಅನಿಮಿಷನಯನೆಯಾಗಿ=ಕಣ್ಣುರೆಪ್ಪೆ ಮುಚ್ಚದೆ.

ಯೊಂದಿಗೆ ಮಾತನಾಡುತ್ತಿರುವಾಗಲೇ ಪಥಿಕನ ದೃಷ್ಟಿಯು ಅಕಸ್ಮಾತ್ತಾಗಿ ಯುವತಿಯ ಕಡೆಗೆ ಬಿದ್ದುದು ಪುನಃ ಹಿಂದಿರುಗಲಿಲ್ಲ. ಅಂತಹ ಅಲೌಕಿಕವಾದ ಮಾಧುರ್ಯ ರೂಪರಾಶಿಯು ತನ್ನ ದೃಷ್ಟಿಗೆಂದೂ ಗೋಚರವಾಗಿರಲಿಲ್ಲವೆಂದು ಚೆನ್ನಾಗಿ ತಿಳಿದುಕೊಂಡನು. ಯುವತಿಯ ಕಣ್ಣುಗಳೊಡನೆ ಪಥಿಕನ ಕಣ್ಣುಗಳು ಸೇರುತಲೆ ಯುವತಿಯು ಅಧೋದೃಷ್ಟಿಯುಳ್ಳವಳಾದಳು. ಅವಳ ಸಹಚರಿಯಾದವಳು ತಾನು ಹೇಳಿದ ಮಾತಿಗೆ ಉತ್ತರವು ಬಾರದುದರಿಂದ ಪಥಿಕನ ಮುಖವನ್ನು ವೀಕ್ಷಿಸಿ, ಅವನ ದೃಷ್ಟಿಯು ಹೋಗಿದ್ದ ದಿಕ್ಕನ್ನು ಕಂಡು, ಯುವತಿಯು ಯುವಕನನ್ನು ಸತೃಷ್ಣ*ನಯನಗಳಿಂದ ನೋಡುತ್ತಿರುವಳೆಂದು ತಿಳಿದವಳಾಗಿ, ಯುವತಿಯ ಕಿವಿಯಲ್ಲಿ 'ಇದೇನು ಹುಡುಗಿ! ಶಿವಸಾಕ್ಷಿಯಾಗಿ ಸ್ವಯಂವರೆಯಾಗಲೆಳಸುವೆಯಾ, ಏನು?' ಎಂದು ಏಕಾಂತವಾಗಿ ಹೇಳಿದಳು.

ಯುವತಿಯು ಇದನ್ನು ಕೇಳಿ ಸಾಕೂತದಿಂದ† ತನ್ನ ಸಹಚಾರಿಣಿಯನ್ನು ಸ್ವಲ್ಪ ಜಿಗಟಿ ಮೃದು ಸ್ವರದಿಂದ, 'ನೀನು ನಿಪಾತವಾಗು!' ಎಂದಳು. ಚತುರೆಯಾದ ಸಹಚಾರಿಣಿಯು ಅದನ್ನು ಕಂಡು ತನ್ನೊಳು ತಾನೆ 'ಈ ಲಕ್ಷಣಗಳನ್ನು ನೋಡಿದರೆ, ಅಪರಿಚಿತನಾದೀ ಯೌವನ ಪುರುಷನ ತೇಜಃಪುಂಜವಾದ ಕೋಮಲ ಶರೀರವನ್ನು ನೋಡಿ ನನ್ನ ವಶದಲ್ಲಿರುವ ಈ ಬಾಲೆಯು ಮನ್ಮಥನ ಶರಜಾಲದಿಂದ ಬದ್ಧಳಾಗಿರುವಳೆಂದೂ, ಅದರಿಂದ ಮತ್ತೇನಾಗದಿದ್ದರೂ ಅನ್ಯಾಯವಾಗಿ ಅವಳ ಮನಸ್ಸಿನ ಸುಖವು ಚಿರಕಾಲ ನಷ್ಟವಾಗಿ ಹೋಗುವುದಾದಕಾರಣ ಅದಕ್ಕೆ ಮಾರ್ಗವನ್ನು ಕೊಡದೆ ಕೂಡಲೆ ನಿವಾರಣೆಮಾಡಬೇಕಾದುದು ಆವಶ್ಯಕವಾದುದರಿಂದ ಆವುದಾದರೂ ಒಂದು ನೆವನು ಹೇಳಿ ಯುವಕನನ್ನು ಸ್ಥಾನಾಂತರಕ್ಕೆ ಹೊರಟುಹೋಗುವಂತೆ ಮಾಡಬೇಕೆಂದೂ' ಯೋಚಿಸಿ ನಾರಿಯರಿಗೆ ಸ್ವಭಾವಸಿದ್ಧವಾದ ಚತುರತೆಯಿಂದ ಯುವಕನನ್ನು ಕುರಿತು, 'ಮಹಾಶಯರೆ! ನಾರಿಯರ ಸದ್ಗುಣವೆಂಬುದು ಕೇವಲ ಸೂಕ್ಷ್ಮವಾದ ಪದಾರ್ಥವಾಗಿರುವುದರಿಂದ ಮಂದ ಮಾರುತವಾದರೂ ಅದನ್ನು ಅಪಹರಿಸಿಬಿಡುವುದು; ಹೀಗಿರುತ್ತ ಈ ರಾತ್ರಿಯ ಚಂಡಮಾರುತದಲ್ಲಿ ರಕ್ಷಣೆಯಾಗುವುದು ದುಷ್ಕರವಾಗಿದೆ; ಅದುಕಾರಣ ಈಗ ಗಾಳಿಯು ನಿಂತುಹೋಗಿದೆ; ತಮ್ಮ ಅಪ್ಪಣೆಯಾದರೆ ನಾವು ಪಾದಚಾರಿಗಳಾಗಿ ಮನೆಗೆ ಹೋಗಿ ಸೇರುವ ಪ್ರಯತ್ನಮಾಡುವೆವು' ಎಂದು ಹೇಳಿದಳು.

ಅದನ್ನು ಕೇಳಿ ಯುವಕನು, 'ಹಾಗೆ ಸಮರಾತ್ರಿಯಲ್ಲಿ ನೀವು ನಡೆದುಕೊಂಡು ಹೋಗಬೇಕಾದ ಆವಶ್ಯಕವಿದ್ದರೆ, ನಾನೂ ನಿಮ್ಮ ಸಂಗಡ ಬಂದು ಮನೆಯಲ್ಲಿ ಬಿಟ್ಟುಬರುವೆನು; ಈಗ ಆಕಾಶವು ನಿರ್ಮಲವಾಗಿದೆ; ನಾನು ಮೊದಲೇ ಹೊರಟಿದ್ದರೆ, ನಿಮ್ಮ ಸಖಿಯಾಗಿರುವ ಅನನ್ಯ‡ ರೂಪವತಿಯನ್ನು

* ಸತೃಷ್ಣ=ಬಯಕೆಯುಳ್ಳ, ಆಶೆಯುಳ್ಳ. † ಸಾಕೂತದಿಂದ=ಬೇಕೆಂದು, ಉದ್ದೇಶದಿಂದ.
‡ ಅನನ್ಯ=ಬೇರೆ ಇಲ್ಲದ.

ನೋಡಿಕೊಳ್ಳುವವರಾರೂ ಇಲ್ಲದಿರುವುದನ್ನು ಯೋಚಿಸಿ ಅವಳೊಬ್ಬಳನ್ನೇ ಬಿಟ್ಟು ಹೋಗುವುದುಚಿತವಲ್ಲವೆಂದು ನನ್ನ ಪ್ರಯಾಣವನ್ನು ನಿಲ್ಲಿಸಿ ಇಲ್ಲಿಯೇ ನಿಂತೆನು' ಎಂದು ಹೇಳಿದನು. ಅದಕ್ಕಾ ಹೆಂಗಸು, "ತಾವು ನಮಗೋಸ್ಕರ ಇಷ್ಟೊಂದು ಅಂತಃಕರಣವನ್ನು ತೋರಿದ ನಿರ್ವ್ಯಾಜ*ವಾದ ಕೃಪೆಗೆ ಪರವಶೆಯಾಗಿ ನನ್ನ ಸಕಲ ಮನೋಭಾವಗಳನ್ನೂ ತಿಳಿಸಿದರೆ ತಾವೇ ನಮ್ಮನ್ನು ಅಕೃತಜ್ಞರೆಂದು ಭಾವಿಸುವಿರೆಂಬ ಭಯದಿಂದ ನನ್ನ ಮನೋಭಿಪ್ರಾಯವನ್ನೆಲ್ಲಾ ವ್ಯಕ್ತಪಡಿಸ ಲಸಮರ್ಥೆಯಾಗಿದ್ದೇನೆ. ಮಹಾಶಯರೆ! ಹೆಂಗಸರ ಕಪಾಲದಲ್ಲಿ ಲಿಖಿತವಾದ ಅಸ್ವಾತಂತ್ರ್ಯತೆ ವೊದಲಾದ ದುರದೃಷ್ಟ ವಿಚಾರದಲ್ಲ ತಮ್ಮೊಂದಿಗೆ ನಾನು ಹೇಳ ತಕ್ಕುದೇನಿರುವುದು? ನಾವು ಸ್ವಾಭಾವಿಕವಾಗಿ ಅವಿಶ್ವಾಸಿನಿಗಳಾದುದರಿಂದ ಎಲ್ಲರೂ ನಮ್ಮನ್ನು ಅಪನಂಬಿಕೆಯಿಂದಲೇ ನೋಡುತ್ತಾರೆ; ಅಂತಹದುದರಲ್ಲಿ ತಾವು ಸಂಗಡ ಮನೆಗೆ ಬಂದು ಬಿಟ್ಟುಬರುವುದಾಗಿ ಹೇಳುವುದು ನಮ್ಮ ಭಾಗ್ಯ ವಿಶೇಷವಾದರೂ ನಮ್ಮ ಪ್ರಭುವಾದ ಈ ಹುಡುಗಿಯ ತಂದೆಯು ಅವಳನ್ನು ಕುರಿತು, 'ಇಷ್ಟೊಂದು ರಾತ್ರಿಯಲ್ಲಿ ನೀನಾರ ಸಂಗಡ ಬಂದೆ?' ಎಂದು ಕೇಳಿದರೆ. ಏನೆಂದುತ್ತರವನ್ನು ಕೊಡಬೇಕು?" ಎಂದು ಕೇಳಿದಳು. ಯುವಕನು ತದೇ ಕಾಯತ್ತಚಿತ್ತನಾಗಿ ಕ್ಷಣಕಾಲ ಯೋಚಿಸಿ, 'ಮಹಾರಾಜ ಮಾನಸಿಂಹನ ಪುತ್ರನಾದ ಜಗತ್ಸಿಂಹನ ಸಂಗಡ ಬಂದೆನೆಂದು ಹೇಳಬಹುದು' ಎಂದನು.

ಅದನ್ನು ಕೇಳಿದ ಮುಹೂರ್ತದಲ್ಲಿ ಮಂದಿರದಲ್ಲಿ ವಜ್ರಪತನ†ವಾಗಿದ್ದರೆ ಎಷ್ಟೊಂದು ಚಕಿತವಾಗಬಹುದೋ ತತೋಪ್ಯತಿಶಯವಾಗಿ ಹೆಂಗಸರಿಬ್ಬರೂ ಭಯಚಕಿತರಾಗಿ‡ ಎದ್ದು ನಿಂತುಕೊಂಡರು. ಬಳಿಕ ಕಿರಿಯಳು ಶಿವಮೂರ್ತಿಯ ಹಿಂದುಗಡೆಗೆ ಸರಿದಳು. ವಾಕ್ಚತುರೆಯಾದ ಪಯೋಧಿಕೆಯು ಸೆರಗನ್ನು ಸರಿಮಾಡಿ ಕೊಂಡು, ಬದ್ಧಾಂಜಲಿಯಾಗಿ ನಿಂತು, ಯುವಕನನ್ನು ಕುರಿತು, 'ಯುವರಾಜನೆ! ತಿಳಿಯದೆ ನಾವು ಸಹಸ್ರಾಪರಾಧವನ್ನು ಮಾಡಿದೆವು. ನಾವು ನಿರ್ಬೋಧರಾದ ಹೆಂಗಸರು. ಅತಏವ ನಮ್ಮಪರಾಧವನ್ನು ತಮ್ಮ ನಿಜಗುಣಾತಿಶಯದಿಂದ ಮನ್ನಿಸಬೇಕು' ಎಂದು ಪ್ರಾರ್ಥಿಸಿದಳು.

ಯುವರಾಜನು ಸ್ವಲ್ಪ ನಕ್ಕು, 'ಗುರುತರವಾದಾ ನಿಮ್ಮಪರಾಧಕ್ಕೆ ಕ್ಷಮೆ ಯಿರದು; ಅಪರಾಧ ಕ್ಷಮೆಯಾಗಬೇಕಾದರೆ, ನಿಮ್ಮ ಪರಿಚಯವನ್ನು ಹೇಳಿರಿ, ನಿಮ್ಮ ಪರಿಚಯವನ್ನು ಹೇಳದಿದ್ದರೆ ಆವಶ್ಯಕವಾಗಿ ಸಮುಚಿತ ದಂಡವಿಧಾನ ವಾಗಬೇಕಾಗುವುದು' ಎಂದು ಹೇಳಿದನು.

ಸರಸ ಸಂಭಾಷಣೆಯು ಸರಸಿಯರಾದ ಹೆಂಗಸರಿಗಾವಾಗಲೂ ಧೈರ್ಯ ವನ್ನು ಕೊಡತಕ್ಕುದಾದಕಾರಣ ಆ ಹೆಂಗಸೂ ಸ್ವಲ್ಪ ನಕ್ಕು 'ಶಿಕ್ಷೆ ಯಾವುದೋ

*ನಿರ್ವ್ಯಾಜ=ವ್ಯಾಜವಿಲ್ಲದ, ಕಾರಣವಿಲ್ಲದ. †ವಜ್ರಪತನ=ಸಿಡಿಲು ಬೀಳುವುದು. ‡ಚಕಿತರಾಗಿ= ಭೀತರಾಗಿ.

ಆಜ್ಞೆಯಾಗಲಿ, ಸಿದ್ಧವಾಗಿದ್ದೇವೆ' ಎಂದಳು. ಅದಕ್ಕಾ ಜಗತ್ಸಿಂಹನೂ ಸಕ್ಕು, 'ಶಿಕ್ಷೆ ಎಂಬುದು ಮತ್ತಾವುದೂ ಅಲ್ಲ. ನಿಮ್ಮನ್ನು ಸಂಗಡ ಕರಕೊಂಡು ಹೋಗಿ ನಿಮ್ಮ ಮನೆಗೆ ಸೇರಿಸುವುದೇ ಶಿಕ್ಷೆ' ಎಂದನು.

ಆಗಲಾ ಸಹಚಾರಿಣಿಯಾಗಿದ್ದವಳಿಗೆ ವಿಷಮಸಂಕಟ ಪ್ರಾಪ್ತವಾಯಿತು. ಅವಳು ಒಂದಾನೊಂದು ಕಾರಣ ವಿಶೇಷದಿಂದ ಯುವತಿ ಯಾರೆಂಬುದನ್ನು ದಿಲ್ಲಿಯ ಚಕ್ರವರ್ತಿಯ ಸೇನಾಪತಿಗೆ ತಿಳಿಸಲು ಸಮ್ಮತಳಾಗಿರಲಿಲ್ಲ. ಅಂತಹವನು ಸಂಗಡ ಬಂದು ಮನೆಗೆ ಬಿಡುವುದು ಪರಿಚಯವನ್ನು ಹೇಳುವುದಕ್ಕಿಂತ ಹೆಚ್ಚು ಹಾನಿಕರವಾದುದೆಂದು ಭಾವಿಸಿ, ಆ ಸಹಚಾರಿಣಿಯು ಮುಖವನ್ನು ತಗ್ಗಿಸಿದಳು.

ಆ ಸಮಯದಲ್ಲಿ ದೇವಾಲಯಕ್ಕೆ ಸ್ವಲ್ಪ ದೂರದಲ್ಲಿ ಅನೇಕ ಕುದುರೆಗಳ ಖುರಪುಟ ಧ್ವನಿಯಾಯಿತು. ಆ ಧ್ವನಿಯನ್ನು ಕೇಳಿ ರಾಜಪುತ್ರನು ವ್ಯಸ್ತ*ಚಿತ್ತನಾಗಿ ಮಂದಿರದ ಹೊರಗೆ ಬಂದು ನೋಡಲಾಗಿ ನೂರಾರು ಕುದುರೆ ರಾವುತರು ಬರುತ್ತಿದ್ದರು. ನೋಡಿ ಅವರೆಲ್ಲರೂ ತನ್ನ ರಜಪೂತ ಸೈನ್ಯದವರೆಂದು ತಿಳಿದನು. ಯುವರಾಜನು ಯುದ್ಧ ಸಂಬಂಧವಾದೊಂದು ಕಾರ್ಯನಿರ್ವಾಹಕ್ಕೋಸ್ಕರ ಒಂದುನೂರು ಕುದುರೆಯನ್ನು ತೆಗೆದುಕೊಂಡು ವಿಷ್ಣುಪುರದ ಕಡೆಗೆ ಹೋಗಿದ್ದವನು ಪುನಃ ತನ್ನ ತಂದೆಯ ಬಳಿಗೆ ಹೋಗುತಿದ್ದನು. ಆ ದಿನ ಮಧ್ಯಾಹ್ನಾತ್ಪರದಲ್ಲಿ ತನ್ನೊಂದಿಗೆ ಕರೆತಂದಿದ್ದಾ ಕುದುರೆ ರಾವುತರನ್ನು ಹಿಂದುಳಿಸಿ ಯುವರಾಜನೊಬ್ಬನೇ ಬೇರೆ ಮಾರ್ಗವಾಗಿ ಬಂದು ಗಾಳಿ ಮಳೆಗೆ ಸಿಕ್ಕಿ ಕಷ್ಟಕ್ಕೊಳಗಾಗಿದ್ದನು. ಪ್ರಕೃತ ಯುವರಾಜನು ತನ್ನ ಸೈನಿಕರನ್ನು ಕಂಡು, ಅವರು ತನ್ನನ್ನು ಗುರುತಿಸುವರೋ ಇಲ್ಲವೋ ಎಂಬುದನ್ನು ನಿಶ್ಚೈಸಲು 'ದಿಲ್ಲೀಶ್ವರನಿಗೆ ಜಯವಾಗಲಿ!' ಎಂದು ಕೂಗಿದನು. ಅದನ್ನು ಕೇಳಿ, ಕುದುರೆಯ ಸವಾರನೊಬ್ಬನು ಸಮೀಪಕ್ಕೆ ಬಂದು ನಿಂತನು. ಅವನನ್ನು ಕುರಿತು ಯುವರಾಜನು, 'ಧರ್ಮಸಿಂಹ! ಮಳೆಗೆ ಸಲುವಾಗಿ ನಾನಿಲ್ಲಿ ನಿಂತೆನು' ಎಂದನು.

ಧರ್ಮಸಿಂಹನು ಯುವರಾಜನಿಗೆ ಪ್ರಣಾಮವನ್ನು ಮಾಡಿ, 'ನಾವು ತಮ್ಮನ್ನು ಬಹಳವಾಗಿ ಹುಡುಕಿದೆವು; ಎಲ್ಲಿಯೂ ಕಾಣದೆ ಕುದುರೆಯ ಹಜ್ಜೆ ಪಾಡನ್ನು ಹಿಡಿದುಕೊಂಡು ಇಲ್ಲಿಗೆ ಬರಲಾ ಕುದುರೆಯು ವಟವೃಕ್ಷದ ಕೆಳಗೆ ನಿಂತಿದ್ದುದನ್ನು ಕಂಡು, ಅದನ್ನಿಲ್ಲಿಗೆ ತಂದಿರುವೆನು' ಎಂದನು.

ಜಗತ್ಸಿಂಹನು ಧರ್ಮಸಿಂಹನನ್ನು ಕುರಿತು, 'ನೀನು ಕುದುರೆಯನ್ನಿಟ್ಟುಕೊಂಡು ಇಲ್ಲಿರು; ಮತ್ತು ಇಲ್ಲಿಗೆ ಸಮೀಪದಲ್ಲಿರುವ ಗ್ರಾಮದಿಂದೊಂದು ಪಲ್ಲಕ್ಕಿಯನ್ನೂ ಅದಕ್ಕೆ ತಕ್ಕ ಬೋಯಿಗಳನ್ನೂ ಕರೆತರುವಹಾಗೆ ರಾವುತರಿಬ್ಬರಿಗೆ ಹೇಳಿಕಳುಹಿಸಿ, ಮಿಕ್ಕವರೆಲ್ಲಾ ಮುಂದೆ ಹೋಗುತ್ತಿರುವಂತೆ ಅಪ್ಪಣೆಮಾಡು' ಎಂದನು.

---

* ವ್ಯಸ್ತ = ಕಳವಳಗೊಂಡ.

ಧರ್ಮಸಿಂಹನು ಅಪ್ಪಣೆಯನ್ನು ಕೇಳಿ ಸ್ವಲ್ಪ ಆಶ್ಚರ್ಯಗೊಂಡು, ಪ್ರಭುವಿನ ಆಜ್ಞೆಯನ್ನು ಕುರಿತು ಪ್ರಶ್ನೆಮಾಡುವುದು ಸರಿಯಲ್ಲವೆಂದು, 'ಅಪ್ಪಣೆಯ ಪ್ರಕಾರ' ಎಂದು ಹೇಳಿ ಹೊರಟುಹೋಗಿ, ಅಪ್ಪಣೆಯನ್ನು ಸೈನಿಕರಿಗೆ ತಿಳಿಯಪಡಿಸಿದನು. ಸೈನ್ಯದಲ್ಲಿ ಕೆಲವರು ಪಲ್ಲಕ್ಕಿಯ ಸಮಾಚಾರವನ್ನು ಕೇಳಿ ಸ್ವಲ್ಪ ನಕ್ಕು ತಮ್ಮೊಳು ತಾವೇ, 'ಇದೇನು! ಹೊಸ ಪದ್ಧತಿ!' ಎಂದರು. ಅದರಲ್ಲಿ ಕೆಲವರು, 'ಆಗಕೂಡದೇಕೆ? ರಜಪೂತಪತಿಯಾದ ಮಹಾರಾಜರಿಗೆ ನೂರಾರು ಮಂದಿ ಮಹಿಷಿಯರಿರುವುದಿಲ್ಲವೆ?' ಎಂದರು.

ಇತ್ತಲಾಗಿ, ಯುವರಾಜನು ಹೊರಗೆ ಹೋಗಿದ್ದ ಸಮಯದಲ್ಲಿ ಸುಂದರಿಯಾದ ಯುವತಿಯು ಮುಖಾವರಣವನ್ನು ತೆಗೆದು ತನ್ನ ಸಹಚಾರಿಣಿಯನ್ನು ಕುರಿತು, 'ವಿಮಲೆ! ರಾಜಪುತ್ರನಿಗೆ ಪರಿಚಯವನ್ನು ಹೇಳಲು ಅಸಮ್ಮತೆಯಾದುದೇಕೆ?' ಎಂದು ಕೇಳಿದಳು. ಅದಕ್ಕೆ ವಿಮಲೆಯು, 'ಆ ಪ್ರಶ್ನೆಗೆ ಉತ್ತರವನ್ನು ನಿಮ್ಮ ತಂದೆಯ ಬಳಿಯಲ್ಲಿ ಹೇಳುವೆನು; ಅದುಹಾಗಿರಲಿ, ಇದೇನೋ ಗದ್ದಲವಾಗುತ್ತಿದೆ, ಏನಿರಬಹುದು?' ಎಂದಳು. ಯುವತಿಯು, 'ರಾಜಕುಮಾರನ ಸೈನಿಕರು ಅವನನ್ನು ಹುಡುಕಿಕೊಂಡು ಬಂದಿರಬೇಕು; ಆದರೆ ಯುವರಾಜನೇ ಇಲ್ಲಿರುವಾಗ ನಮಗೇನು ಯೋಚನೆ?' ಎಂದಳು.

ಅತ್ತಲಾ ಪಲ್ಲಕ್ಕಿಯನ್ನೂ ಬೋಯಿಗಳನ್ನೂ ಕರೆತರಲು ಹೋಗಿದ್ದ ಕುದುರೆ ರಾವುತರು ಬರುವುದಕ್ಕೆ ಮುಂಚಿತವಾಗಿ ಹೆಂಗಸರನ್ನು ದೇವಮಂದಿರಕ್ಕೆ ಕರೆತಂದಿದ್ದ ಬೋಯಿಗಳೂ ಭೃತ್ಯರೂ ಮಳೆಗೋಸ್ಕರ ಸಮೀಪ ಗ್ರಾಮಕ್ಕೆ ಹೋಗಿದ್ದವರು ಪಲ್ಲಕ್ಕಿಯನ್ನು ತೆಗೆದುಕೊಂಡು ಪುನಃ ಹಿಂದಿರುಗಿ ದೇವಾಲಯಕ್ಕೆ ಬರುತ್ತಿದ್ದರು. ದೂರದಿಂದವರನ್ನು ನೋಡಿ ಜಗತ್ಸಿಂಹನು ಮಂದಿರದೊಳಗೆ ಪುನಃ ಬಂದು ಸಹಚಾರಿಣಿಯನ್ನು ಕುರಿತು, 'ಕೆಲವರು ಅಸ್ತ್ರಧಾರಿಗಳಾಗಿರುವವರೊಡನೆ ಪಲ್ಲಕ್ಕಿಯನ್ನು ತೆಗೆದುಕೊಂಡು ಬರುತ್ತಾರೆ; ಅವರು ನಿಮ್ಮವರೆ? ಹೊರಗೆ ಬಂದು ನೋಡು' ಎಂದನು. ವಿಮಲೆಯು ಹೊರಗೆ ಬಂದು ನೋಡಿ, 'ಬರುವವರು ತನ್ನವರೇ' ಎಂದು ಹೇಳಿದಳು.

ರಾಜಕುಮಾರನು, 'ನಾನಿನ್ನು ನಿಮ್ಮೊಂದಿಗೆ ಇಲ್ಲಿರಕೂಡದು; ನಿಂತರೆ, ನಿಮಗೇನಾದರೂ ಅನಿಷ್ಟವುಂಟಾಗುವುದಾದಕಾರಣ, ಹೊರಟುಹೋಗುವೆನು; ಶೈಲೇಶ್ವರನ ಅನುಗ್ರಹದಿಂದ ನೀವು ಮನೆಗೆ ಕ್ಷೇಮದಿಂದ ಸೇರಬೇಕೆಂದು ಪ್ರಾರ್ಥಿಸುತ್ತೇನೆ; ಮತ್ತೊಂದು ವಾರದ ಪರ್ಯಂತ ನಾನು ನಿಮ್ಮನ್ನು ನೋಡಿದ್ದೆನೆಂದು ನೀವಾರಿಗೂ ಹೇಳಕೂಡದೆಂದು ಕೋರುತ್ತೇನೆ; ನನ್ನನ್ನು ಮರೆಯದ ಹಾಗೆ ಸ್ಮರಣಾರ್ಥವಾಗಿ, ಈ ಹಾರವು ನಿನ್ನಲ್ಲಿರಲಿ; ನಿಮ್ಮ ಸ್ಮರಣೆಗಾಗಿ ನಿನ್ನ ಪ್ರಭುವಿನ ಕನ್ಯೆಯ ಪರಿಚಯವಾಗಲಿಲ್ಲವೆಂಬ ಕೊರತೆಯೇ ನನ್ನ ಹೃದಯದಲ್ಲಿ ಕುರುಹಾಗಿರಲಿ' ಎಂದು ಹೇಳಿ, ಉಷ್ಣೀಷದಿಂದೊಂದು ಮುಕ್ತಾಹಾರವನ್ನು

ತೆಗೆದು ವಿಮಲೆಯ ತಲೆಯಮೇಲಿಟ್ಟನು. ವಿಮಲೆಯು ಮಹಾರ್ಘವಾದಾ ರತ್ನಹಾರವನ್ನು ತನ್ನ ಕೇಶಪಾಶದಲ್ಲಿ ಕಟ್ಟಿಕೊಂಡು, ರಾಜಕುಮಾರನಿಗೆ ನಮ್ರಾ ಭಾವದಿಂದ ಪ್ರಣಾಮವನ್ನು ಮಾಡಿ, 'ಯುವರಾಜರೆ! ನಮ್ಮ ಪರಿಚಯವನ್ನು ಕೊಡದಿರುವುದಕ್ಕೋಸ್ಕರ ನಾನು ಅಪರಾಧಿಯೆಂದು ತಿಳಿಯಕೂಡದು; ಅದಕ್ಕೆ ಪ್ರಬಲವಾದೊಂದು ಕಾರಣವುಂಟು; ತಾವು ಆ ವಿಚಾರದಲ್ಲಿ ಕೌತೂಹಲಾಕ್ರಾಂತ ರಾಗಿದ್ದರೆ ಇಂದಿಗೆ ಒಂದು ಪಕ್ಷದಲ್ಲಿ ನನಗೆ ತಮ್ಮ ಸಂದರ್ಶನವೆಲ್ಲಾಗಬಹುದೋ ಅಪ್ಪಣೆಯಾಗಬೇಕು' ಎಂದಳು.

ಜಗತ್ಸಿಂಹನು ಸ್ವಲ್ಪ ಹೊತ್ತು ಆಲೋಚಿಸಿ, ಬಳಿಕ, 'ಇಂದಿನ ಮೊದ ಲ್ಗೊಂಡು ಹದಿನೈದನೆಯ ದಿವಸದಲ್ಲಿ ಇದೇ ಮಂದಿರದಲ್ಲಿ ನನ್ನನ್ನು ನೋಡುವೆ, ಹಾಗೆ ನೋಡದಿದ್ದರೆ ಮತ್ತಾವಾಗಲೂ ನೀನೆನ್ನನ್ನು ನೋಡಲಾರೆ' ಎಂದನು.

ದೇವರು ನಿಮ್ಮನ್ನು ರಕ್ಷಿಸಲೆಂದು ಹೇಳಿ ವಿಮಲೆಯು ಪುನಃ ಪ್ರಣಾಮ ವನ್ನು ಮಾಡಿದಳು. ರಾಜಕುಮಾರನು ಅನಿವಾರ್ಯವಾದ ತೃಷಾಕಾತರ* ಲೋಚನಗಳಿಂದ ಯುವತಿಯನ್ನು ಪುನಃಪುನಃ ದೃಷ್ಟಿಸಿ ನೋಡಿ ಅಶ್ವಾರೂಢನಾಗಿ ಹೊರಟುಹೋದನು.

---

## ಮೂರನೆಯ ಪರಿಚ್ಛೇದ

## ಮೊಗಲ ಮತ್ತು ಪಠಾನ ಜನರು

ನಿಶೀಥಕಾಲದಲ್ಲಿ ಜಗತ್ಸಿಂಹನು ಶೈಲೇಶ್ವರ ಮಂದಿರದಿಂದ ಹೊರಟು ಹೋದನು. ಅವನನ್ನು ಕುರಿತಾಗಲಿ ಅಥವಾ ಮಂದಿರದಲ್ಲಿದ್ದ ಮನೋ ಮೋಹಿನಿಯರ ಸಮಾಚಾರದಲ್ಲಾಗಲಿ ಉಂಟಾಗಿರುವ ಪಾಠಕ ಮಹಾಶಯರ ಕುತೂಹಲವನ್ನು ಪ್ರಕೃತಕ್ಕೆ ನಾವು ನಿವಾರಣೆಮಾಡಲಾರೆವು. ರಜಪೂತನಾದ ಜಗತ್ಸಿಂಹನು ಆವಕಾರಣ ವಂಗದೇಶಕ್ಕೆ ಬಂದಿದ್ದನೋ, ಮತ್ತು ಆವ ನಿಮಿತ್ತ ವಾಗಿ ಏಕಾಂಗಿಯಾಗಿ ಅವನಾ ಮಾರ್ಗದಲ್ಲಿ ಹೋಗುತ್ತಿದ್ದನೋ ಅದನ್ನು ತಿಳಿಸಲು ಆ ಕಾಲದಲ್ಲಿ ವಂಗದೇಶಕ್ಕೆ ಸಂಬಂಧಪಟ್ಟ ರಾಜಕೀಯ ಘಟನಾವಳಿ ಎಂದರೆ ಚರಿತ್ರೆಯನ್ನು ಸಂಕ್ಷೇಪವಾಗಿ ಈ ಪರಿಚ್ಛೇದದಲ್ಲಿ ವಿವರಿಸುವೆವು. ಅತಏವ, ಈ ಪರಿಚ್ಛೇದವು ಚರಿತ್ರೆಯ ಸಂಬಂಧವಾಗಿರುವುದು. ಪಾಠಕರಿಗೆ ತಾಳ್ಮೆ ಇಲ್ಲದಿದ್ದರೆ, ಈ ಪರಿಚ್ಛೇದವನ್ನೋದದೆ ಬಿಡಬಹುದು; ಆದರೆ ತಾಳ್ಮೆ ಯಿಂದೋದುವುದು ಒಳ್ಳೆಯದೆಂದು ನಮ್ಮ ಬುದ್ಧಿಗೆ ತೋರುತ್ತದೆ.

ಪೂರ್ವ ವಂಗದೇಶದಲ್ಲಿ ಬಖ್ತಿಯರ್ ಖಿಲ್ಜಿಯೆಂಬುವನು ಮುಸಲ್ಮಾನರ ಜಯ ಧ್ವಜವನ್ನು ಸ್ಥಾಪಿಸಿದ ಬಳಿಕ ಪಠಾನ ಜನರು ನಿರ್ಬಾಧಕವಾಗಿ ಕೆಲವು ಶತಾಬ್ದಗಳ

* ತೃಷಾಕಾತರ=ತೃಷೆಯಿಂದ ಹಲುಬಿಸುವ.

ವರೆಗೂ ಆ ದೇಶವನ್ನಾಳುತ್ತಿದ್ದರು. ಒಂಬೈನೂರು ಮೂವತ್ತೆರಡನೆಯ ವಂಗಾಬ್ದದಲ್ಲಿ (ಕ್ರಿ. ಶ. ೧೫೨೬) ವಿಖ್ಯಾತನಾದ ಸುಲ್ತಾನ ಬೇಬರಸು ರಣ ಕ್ಷೇತ್ರದಲ್ಲಿ ಪಠಾನರ ಬಾದಷಹ ಇಬ್ರಾಹಿಂ ಲೋಡಿಯನ್ನು ಸೋಲಿಸಿ, ಮೊಗಲ ರಾಜ್ಯದ ಸಿಂಹಾಸನಾಧಿರೂಢನಾದನು. ಆದರೆ ಆ ಕಾಲದಲ್ಲಿಯೇ ವಂಗದೇಶವು ಒಮ್ಮೊಗವಾಗಿ ತೈಮೋರಲಂಗನ ವಂಶದವರ ಶಾಸನಾಧೀನವಾಗಲಿಲ್ಲ.

ಆವವರೆಗೆ ಮೊಗಲ ಚಕ್ರವರ್ತಿಗಳ ಕುಲತಿಲಕಾಯಮಾನನಾದ ಅಕ್ಬರ ಬಾದಷಹನ ಅಭ್ಯುದಯವಾಗಲಿಲ್ಲವೋ ಅದುವರೆಗೂ ವಂಗದೇಶದಲ್ಲಿ ಸ್ವತಂತ್ರ ಪಠಾನ ರಾಜರುಗಳು ರಾಜತ್ವವನ್ನು ಮಾಡುತ್ತಿದ್ದರು. ಗ್ರಹಚಾರ ಕ್ರೂರಕಾಲ ಒದಗಲು, ಪಠಾನರಲ್ಲೊಬ್ಬ ನಿರ್ಬೋಧನಾದ ದಾವುದಖಾನನೆಂಬಾತನು ಮಲಗಿದ್ದ ಸಿಂಹದ ಮೈಮೇಲೆ ಕೈಹಾಕಿದ ಹಾಗೆ ಬಾದಷಹನನ್ನು ಕೆಣಕಿ ಸ್ವಯಂಕೃತಾಪ ರಾಧಕ್ಕೆ ಫಲರೂಪವಾಗಿ ಅಕ್ಬರನ ಸೇನಾಪತಿಯಾದ ಮೊನಾಯಿಂಖಾನನಿಂದ ಪರಾಜಿತನಾಗಿ, ೯೮೨ನೆಯ ವರ್ಷದಲ್ಲಿ (ಕ್ರಿ.ಶ. ೧೫೭೨) ಸಪರಿವಾರವಾಗಿ ಉತ್ಕಲ (Orissa)ದೇಶಕ್ಕೆ ಓಡಿಹೋದನು. ಆಗಲಾ ವಂಗದೇಶವು ಮೊಗಲ ಭೂಪಾಲರ ಕೈವಶವಾಯಿತು. ಪಠಾನರು ಉತ್ಕಲದೇಶದಲ್ಲಿ ಸಂಸ್ಥಾಪಿತರಾದರು. ಅಲ್ಲಿಂದ ಅವರನ್ನು ಹೊರಡಿಸುವುದು ಮೊಗಲರಿಗೆ ಕಷ್ಟಸಾಧ್ಯವಾಯಿತು. ಒಂಬೈನೂರ ತೊಂಬತ್ತಾರನೆಯ ವರ್ಷದಲ್ಲಿ ದಿಲ್ಲೀಶ್ವರನ ಪ್ರತಿನಿಧಿಯಾದ ಖಾನ್‌ಜಹಾನನು ಪಠಾನರ ಜನರನ್ನು ಎರಡನೆಯ ತಡವೆ ಸೋಲಿಸಿ, ಉತ್ಕಲದೇಶವನ್ನು ತನ್ನ ಪ್ರಭು ವಿನ ಶಾಸನಕ್ಕೊಳಪಡಿಸಿದನು. ಅದಾದ ಬಳಿಕ, ಮತ್ತೊಂದು ದಾರುಣವಾದ ಉಪದ್ರವವುಂಟಾಯಿತು. ಅಕ್ಬರ ಬಾದಷಹನಿಂದ ವಂಗದೇಶದಲ್ಲಿ ಪಗದಿಯ ವಿಚಾರ ದಲ್ಲಿ ಮಾಡಲ್ಪಟ್ಟ ಹೊಸ ಏರ್ಪಾಡುಗಳಿಂದ ಜಹಗೀರದಾರರಿಗೂ ಜಮಿನಾನುದಾರ ರಿಗೂ ಬಹಳ ಅಸಂತುಷ್ಟಿಯುಂಟಾಯಿತು. ಅವರು ತಮ್ಮ ತಮ್ಮ ಪೂರ್ವಾಧಿಪತ್ಯ ವನ್ನು ಕಾಪಾಡಿಕೊಳ್ಳುವುದಕ್ಕೆ ಸಲುವಾಗಿ ಖಡ್ಗಹಸ್ತರಾಗಿ ಎದ್ದರು. ಅದರಿಂದ ಅತ್ಯಂತ ದುರ್ದಮ್ಯವಾದ* ರಾಜವಿದ್ರೋಹವುಂಟಾಗುತ್ತಲೇ ಸಮಯ ನೋಡಿ ಕೊಂಡಿದ್ದ ಉತ್ಕಲದೇಶದ ಪಠಾನ ಜನರು ಪುನಃ ತಲೆಯೆತ್ತಿ, ಕತಲೂಖಾನ ನೆಂಬೊಬ್ಬ ಪಠಾನನನ್ನು ಅಧಿಪತಿಯಾಗಿ ಮಾಡಿಕೊಂಡು ಪುನರಪಿ ಉತ್ಕಲದೇಶ ವನ್ನು ತಮ್ಮ ಸ್ವಾಧೀನಪಡಿಸಿಕೊಂಡರು. ಉತ್ಕಲದೇಶದ ಮೇರೆಯ ಆಚೆಗೆ ಇದ್ದ ಮೇದನಿಪುರವೂ ವಿಷ್ಣುಪುರವೂ ಅವರ ಅಧಿಕಾರಕ್ಕೊಳಗಾದುವು.

ಕಾರ್ಯದಲ್ಲಿ ದಕ್ಷನಾದ ಅಜಿಂಖಾನನಾಗಲೀ, ಅವನ ತರುವಾಯ ಶಹಬಾಸಖಾನನಾಗಲೀ ಶತ್ರು ಕೈವಶವಾಗಿದ್ದ ದೇಶವನ್ನು ಪುನರುದ್ಧಾರಮಾಡಲು ಸಮರ್ಥರಾಗದೆ ಹೋದರು. ಕಡೆಗೆ ಆಯಾಸ ಸಾಧ್ಯವಾಗಿದ್ದಾ ಕಾರ್ಯಸಾಧನಕ್ಕೆ ಸಲುವಾಗಿ ಹಿಂದೂ ರಣವೀರನೊಬ್ಬನು ಕಳುಹಿಸಲ್ಪಟ್ಟನು.

* ದುರ್ದಮ್ಯವಾದ=ಅಡಗಿಸಲು ಕಷ್ಟವಾದ.

ಮಹಾಮತಿವಂತನಾಗಿದ್ದ ಅಕ್ಬರನು ಅವನ ಹಿಂದೆ ಆಳಿದ ರಾಜರುಗಳಿಗಿಂತ ಸರ್ವಾಂಶದಲ್ಲಿಯೂ ವಿಶೇಷ ವಿಜ್ಞನಾಗಿದ್ದವನು ಈ ದೇಶದ ರಾಜಕಾರ್ಯ ವನ್ನು ಸಾಧಿಸುವುದರಲ್ಲೀ ದೇಶೀಯರೇ ವಿಶೇಷ ಸಮರ್ಥರೆಂದೂ, ಅನ್ಯ ದೇಶೀ ಯರು ಅಷ್ಟೊಂದು ಸಮರ್ಥರಲ್ಲವೆಂದೂ, ಯುದ್ಧದಲ್ಲಿಯೂ ರಾಜ್ಯಶಾಸನ ದಲ್ಲಿಯೂ ರಜಪೂತ ಜನರು ಮಹಾದಕ್ಷಾಗ್ರಗಣ್ಯರೆಂದೂ ನಂಬಿದ್ದನು. ಅತಏವ ಅವನೀ ದೇಶೀಯರನ್ನೇ ವಿಶೇಷವಾಗಿ, ರಜಪೂತ ಜನರನ್ನೇ ದೊಡ್ಡ ದೊಡ್ಡ ರಾಜ ಕಾರ್ಯದಲ್ಲಿ ನಿಯಮಿಸುತ್ತಿದ್ದನು.

ಪ್ರಕೃತ ಕಥಾ ಸಂದರ್ಭದಲ್ಲಿ ಉಚ್ಚಪದಾಭಿಷಿಕ್ತರಾಗಿದ್ದ ರಜಪೂತರಲ್ಲಿ ಮಹಾರಾಜಾ ಮಾನಸಿಂಹನೊಬ್ಬನಾಗಿದ್ದುದಲ್ಲದೆ, ಆತನು ಅಕ್ಬರ ಬಾದಷಹನ ಮಗನ ಶ್ಯಾಲಕನಾಗಿಯೂ* ಇದ್ದನು. ಅಜಿಂಖಾನನೂ ಶಹಬಾಸಖಾನನೂ ಉತ್ಕಲದೇಶವನ್ನು ಜಯಿಸಲಸಮರ್ಥರಾದುದನ್ನು ಕಂಡು ಅಕ್ಬರನು ಶೂರ ನಾದಾ ಮಹಾರಾಜಾ ಮಾನಸಿಂಹನನ್ನು ವಂಗ ಮತ್ತು ವಿಹಾರ(Behar)ದೇಶ ಗಳಿಗೆ ಶಾಸನಕರ್ತನನ್ನಾಗಿ ನಿಯಮಿಸಿ ಕಳುಹಿಸಿದ್ದನು.

ಒಂಬೈನೂರು ತೊಂಬತ್ತೇಳನೆಯ ವರ್ಷದಲ್ಲಿ ಮಾನಸಿಂಹನು ಪಾಟ್ಣಾ ನಗರಕ್ಕೆ ಬಂದು, ಅಲ್ಲೆದ್ದಿದ್ದ ಅನೇಕ ಕಾಟಕಾಯಿ ಜನರ ಉಪದ್ರುವವನ್ನು ಶಾಂತಿ ಮಾಡಿದನು. ಮಾರನೆಯ ವರ್ಷ ಉತ್ಕಲದೇಶವನ್ನು ಜಯಿಸಲು ಹೊರಟನು. ಮಾನಸಿಂಹನು ಮೊದಲು ಪಾಟ್ಣಾನಗರಕ್ಕೆ ಬಂದು ಅಲ್ಲಿರಬೇಕೆಂಬ ಅಭಿಪ್ರಾಯ ದಿಂದ ವಂಗದೇಶದ ಆಳ್ವಿಕೆಗೆ ಸಲುವಾಗಿ ಸೈದಖಾನನೆಂಬುವನನ್ನು ತನಗೆ ಪ್ರತಿನಿಧಿಯಾಗಿ ನೇಮಕಮಾಡಿದ್ದನು. ನಿಯಮಿಸಲ್ಪಟ್ಟಾ ಸೈದಖಾನನು ವಂಗದೇಶಕ್ಕೆ ಹೋಗಿ ಅಲ್ಲಿಗೆ ರಾಜಧಾನಿಯಾಗಿದ್ದ ತಾಂಡಾ(Tanda)ನಗರ ದಲ್ಲಿರುತ್ತಿದ್ದನು. ಪ್ರಕೃತ ಯುದ್ಧಾಕಾಂಕ್ಷಿಯಾಗಿ ಮಾನಸಿಂಹನು ಉತ್ಕಲಾಭಿ ಮುಖವಾಗಿ ಹೊರಟವನು ತನಗೆ ಪ್ರತಿನಿಧಿಯಾಗಿದ್ದಾ ಸೈದಖಾನನಿಗೆ ಸೈನ್ಯ ಸಮೇತನಾಗಿ ವರ್ಧಮಾನಕ್ಕೆ (Burdwan) ಬಂದು ತನ್ನನ್ನು ಸೇರುವಹಾಗೆ ಬರೆದಿದ್ದನು.

ಮಾನಸಿಂಹನು ವರ್ಧಮಾನಕ್ಕೆ ಬಂದು ನೋಡಲಾಗಿ ಸೈದಖಾನನು ಅಲ್ಲಿಗೆ ಬಂದಿರಲಿಲ್ಲ. ಸೈದಖಾನನು ಸೈನ್ಯವನ್ನೆಲ್ಲ ಸಂಗ್ರಹಮಾಡುವುದಕ್ಕೆ ಸಾವ ಕಾಶವಾಗುವುದೆಂದೂ ಅಷ್ಟೊಂದು ದಿನಕ್ಕೆ ವರ್ಷಾಕಾಲವು ಬರುವುದರಿಂದ ವರ್ಷಾ ಕಾಲವು ಪೂರೈಸುವವರೆಗೂ ಮಾನಸಿಂಹನು ಸೈನ್ಯವನ್ನು ಹಾಗೆಯೇ ಸನ್ನದ್ಧವಾ ಗಿಟ್ಟುಕೊಂಡಿದ್ದರೆ, ತಾನು ವರ್ಷಾಪ್ರಭಾತದಲ್ಲಿ ಸೇನಾ ಸಮೇತನಾಗಿ ರಾಜ ಸನ್ನಿಧಾನಕ್ಕೆ ಬಂದು ಸೇರುವೆನೆಂದೂ ಪತ್ರವನ್ನು ಬರೆದು ದೂತನ ಸಂಗಡ ಕಳುಹಿ

---

* ಆ ಕಾಲದಲ್ಲಿ ರಜಪೂತರು ತಮ್ಮ ಹೆಣ್ಣುಮಕ್ಕಳನ್ನು ಕೊಟ್ಟು ದಿಲ್ಲಿಯ ಅರಸರೊಂದಿಗೆ ಸಂಬಂಧಮಾಡುತ್ತಿದ್ದರು. ಶ್ಯಾಲಕ=ಭಾವಮೈದುನ.

ದ್ದನು. ರಾಜನು ಉಪಾಯಾಂತರವಿಲ್ಲದೆ ಸೈದಖಾನನ ಪರಾಮರ್ಶಾನುವರ್ತಿಯಾಗಿ ದಾರುಕೇಶ್ವರ ನದಿಯ ತೀರದಲ್ಲಿರುವ ಜಹನ್ನಾಬಾದೆಂಬ ಗ್ರಾಮದಲ್ಲಿ ಶಿಬಿರವನ್ನು ಸ್ಥಾಪಿಸಿಕೊಂಡು ಸೈದಖಾನನ ಆಗಮನವನ್ನೆದುರುನೋಡುತಿದ್ದನು.

ಅಲ್ಲಿರುವ ಕಾಲದಲ್ಲಿ ಕತಲೂಖಾನನೆಂಬ ಪಠಾನಾಧಿಪನಾ ಕಾಲವಿಳಂಬವನ್ನು ಕಂಡು ಸಾಹಸಿಕನಾಗಿ ಮಂದಾರಣಕ್ಕೆ ಸಮೀಪದಲ್ಲಿ ಸೈನ್ಯ ಸಮೇತನಾಗಿ ಬಂದು ಳಿದು ದೇಶವನ್ನೆಲ್ಲಾ ಕೊಳ್ಳೆಹೊಡೆಯುತ್ತಿದ್ದನೆಂದೂ ಮಾನಸಿಂಹನು ವರ್ತಮಾನವನ್ನು ಕೇಳಿದವನು ಉದ್ವಿಗ್ನ* ಚಿತ್ತನಾಗಿ ಶತ್ರುಗಳೆಲ್ಲಿದ್ದಾರೆ, ಅವರ ಬಲಾಬಲವೆಂತಹವದು ಎಂಬಿವೇ ಮುಂತಾದ ನಿಜವಾದ ಸಮಾಚಾರವನ್ನು ತಿಳಿದುಕೊಂಡು ಬರಲು ತನ್ನ ಸೈನ್ಯಾಧ್ಯಕ್ಷನೊಬ್ಬನನ್ನು ಕಳುಹುವುದುಚಿತವೆಂದು ಯೋಚಿಸಿ, ಯುದ್ಧಕ್ಕೋಸ್ಕರ ಅತ್ಯುತ್ಸಾಹಪಶಿಷ್ಟನಾಗಿ ಬಂದಿದ್ದ ತನ್ನ ಪ್ರಿಯ ಪುತ್ರನಾದ ಜಗತ್ಸಿಂಹನು ದುಸ್ಸಾಹಸಿಕವಾದಾ ಕಾರ್ಯಭಾರವನ್ನು ವಹಿಸಲು ಉತ್ಸುಕನಾಗಿದ್ದನೆಂದು ತಿಳಿದು, ಅವನನ್ನು ಒಂದು ನೂರು ಕುದುರೆ ಸವಾರರೊಡನೆ ಶತ್ರುಗಳಿರುವ ದಿಕ್ಕಿಗೆ ಕಳುಹಿದ್ದನು. ರಾಜಕುಮಾರನು ಕಾರ್ಯಸಿದ್ಧಿ ಮಾಡಿಕೊಂಡು ಹಿಂದಿರುಗಿ ಬಂದನು. ಅವನು ಕಾರ್ಯನಿರ್ವಾಹಮಾಡಿಕೊಂಡು ಹಿಂದಿರುಗಿ ತಂದೆಯ ಬಳಿಗೆ ಹೋಗುತಿದ್ದಾಗ ದಾರಿಯಲ್ಲಿ ನಮ್ಮ ಪಾಠಕ ಮಹಾಶಯರಿಗೆ ಅವನ ಪರಿಚಯವಾದುದು.

---

## ನಾಲ್ಕನೆಯ ಪರಿಚ್ಛೇದ

### ಯೌವನ ಸೇನಾಪತಿ

ಜಗತ್ಸಿಂಹನು ಶೈಲೇಶ್ವರ ಮಂದಿರದಿಂದ ಹೊರಟು ತನ್ನ ತಂದೆಯ ಬಿಡಾರಕ್ಕೆ ಹೋಗಿ ಸೇರಿದ ಬಳಿಕ ಮಹಾರಾಜ ಮಾನಸಿಂಹನು ಪುತ್ರನ ಮುಖದಿಂದ, ಪ್ರಾಯಃ ಐವತ್ತು ಸಾವಿರ ಪಠಾನರು ಧರಪುರ ಗ್ರಾಮಕ್ಕೆ ಸಮೀಪದಲ್ಲಿ ಉಳಿದುಕೊಂಡು ಗ್ರಾಮಗಳನ್ನೆಲ್ಲಾ ಕೊಳ್ಳೆ ಹೊಡೆಯುತ್ತಿದ್ದರೆಂದೂ, ಅಲ್ಲಲ್ಲಿ ದುರ್ಗಗಳನ್ನು ನಿರ್ಮಾಣಮಾಡಿ ಅವುಗಳಲ್ಲಿ ಆಶ್ರಯಮಾಡಿಕೊಂಡು ಏಕಪ್ರಕಾರ ಅಧಿಕಾರಮಾಡುತ್ತ ನಿರಾತಂಕವಾಗಿದ್ದರೆಂದೂ ತಿಳಿದನು. ಮಾನಸಿಂಹನು ಪಠಾನ ಜನರ ದುರ್ವೃತ್ತಿಯನ್ನು ಸಂಪೂರ್ಣವಾಗಿ ದಮನಮಾಡುವುದು ಆವಶ್ಯಕವಾದುದಾಗಿದ್ದರೂ, ಪ್ರಕೃತದಲ್ಲದು ದುಸ್ಸಾಧ್ಯವಾದ ಕೆಲಸವೆಂದು ತಿಳಿದು, ಕರ್ತವ್ಯಾಕರ್ತವ್ಯವನ್ನು ನಿರ್ಧಾರಣೆಮಾಡಲು ಸಂಗಡ ಬಂದಿದ್ದ ಸೇನಾಪತಿಗಳನ್ನೆಲ್ಲಾ ಕರೆದು, ಅವರಿಗೆ ವೃತ್ತಾಂತವನ್ನೆಲ್ಲಾ ವಿವರವಾಗಿ ತಿಳಿಯಹೇಳಿ ಅವರನ್ನು ಕುರಿತು, 'ಎಲೈ ಸೇನಾಪತಿಗಳಿರಾ! ದಿನಪ್ರತಿಯಲ್ಲಿಯೂ ಗ್ರಾಮ

* ಉದ್ವಿಗ್ನ=ಕಳವಳವುಳ್ಳ.

ಗ್ರಾಮ, ಪಟ್ಟಣಪಟ್ಟಣ, ದೇಶದೇಶ ಈ ಮೇರೆ ಒಟ್ಟೊಟ್ಟಾಗಿ ನಮ್ಮ ಪ್ರಭುವಾದ ದಿಲ್ಲೀಶ್ವರನ ಕೈಯಿಂದ ತಪ್ಪಿಹೋಗುತ್ತಿದೆ; ಈಗ ಪಠಾಣರನ್ನು ಶಾಸನ ಮಾಡ ಬೇಕಾದುದು ಅತ್ಯಾವಶ್ಯಕವಾಗಿದೆ; ಆದರೆ ಆವರೀತಿ ಅವರ ನಾಶವಾಗಬೇಕು? ಪ್ರಕೃತ ಅವರು ಸಂಖ್ಯೆಯಲ್ಲಿ ನಮಗಿಂತಲೂ ಬಲವಂತರಾಗಿದ್ದಾರೆ ಮತ್ತು ದುರ್ಗ ಗಳಲ್ಲಿ ಆಶ್ರಯಿಸಿ ಯುದ್ಧವನ್ನು ಮಾಡುವವರಾಗಿದ್ದಾರೆ; ಒಂದುವೇಳೆ ಅವರು ಯುದ್ಧದಲ್ಲಿ ಪರಾಜಿತರಾದರೂ ಅವರಿಗೆ ವಿಶೇಷ ನಷ್ಟವಾಗದು; ಅವರನ್ನು ಒಂದೇ ತಡವೆಗೆ ಸ್ಥಾನಚ್ಯುತರನ್ನಾಗಿ ಮಾಡುವುದಕ್ಕೂ ಆಗುವುದಿಲ್ಲ; ದುರ್ಗ ಗಳಲ್ಲಿ ಸೇರಿಕೊಂಡಿರುವುದರಿಂದ ನಿರಾಪದರಾಗಿರುವುದಕ್ಕೆ ಅವರಿಗೆ ಅನುಕೂಲ ವಾಗಿದೆ; ನೀವೆಲ್ಲರೂ ವಿವೇಚನೆಯನ್ನು ಮಾಡಿ ನೋಡಿರಿ; ರಣರಂಗದಲ್ಲಿ ನಾವು ಸೋಲಿಸಲ್ಪಟ್ಟರೆ ಶತ್ರುಗಳ ಅಧಿರಾಜ್ಯದ ಮಧ್ಯದಲ್ಲಿ ನಿರಾಶ್ರಯರಾಗಿ ಸಂಪೂರ್ಣವಾಗಿ ವಿನಷ್ಟರಾಗುತ್ತೇವೆ; ಆಲೋಚನೆಯಿಲ್ಲದೆ ಅಸಾಧ್ಯವಾದ ಕಾರ್ಯಕ್ಕೆ ಪ್ರವರ್ತಿಸುವುದು ನ್ಯಾಯವಲ್ಲ. ಅನ್ಯಾಯವಾಗಿ ನಮ್ಮ ದಿಲ್ಲೀಶ್ವರರ ಅಷ್ಟೊಂದು ಸೈನ್ಯ ನಾಶಕ್ಕೆ ಕಾರಣವಾಗಿ, ಕಡೆಗೆ ಉತ್ಕಲದೇಶವನ್ನು ಜಯಿಸುವ ಆಶೆಯು ಒಂದೇ ತಡವೆಗೆ ಲೋಪವಾಗಿ ಹೋಗುವುದು; ಆದುದರಿಂದ ಹಾಗೆ ವರ್ತಿಸುವುದು ಅನುಚಿತವಾದುದು; ಸೈದಖಾನನ ಆಗಮನವನ್ನೆದುರುನೋಡು ತ್ತಿರುವುದು ಯುಕ್ತವೆಂದು ತೋರುತ್ತದೆ; ಆದರೆ ಈ ಮಧ್ಯಕಾಲದಲ್ಲಿ ವೈರಿ ಶಾಸನವನ್ನು ಮಾಡದಿರಕೂಡದು; ಅವುದಾದರೂ ಉಪಾಯದಿಂದ ಶತ್ರುವನ್ನು ತಡೆದಿಡಬೇಕು; ಅದಕ್ಕೆ ನಿಮ್ಮ ಆಲೋಚನೆಯೇನು? ಹೇಳಿರಿ" ಎಂದು ಕೇಳಿದನು.

ವೃದ್ಧ ಸೇನಾಪತಿಗಳೆಲ್ಲರೂ ಏಕಮತವಾಗಿ ಸೈದಖಾನನು ಬರುವದನ್ನೆದುರು ನೋಡುತ್ತಿರುವುದೇ ಕರ್ತವ್ಯವೆಂದು ಹೇಳಿದರು. ಅದನ್ನು ಕೇಳಿ ಮಾನ ಸಿಂಹನು 'ನನ್ನ ಅಭಿಪ್ರಾಯದಲ್ಲಿ ಸೈನ್ಯಗಳನ್ನೆಲ್ಲಾ ನಷ್ಟಪಡಿಸುವುದಕ್ಕಿಂತ ಅಲ್ಪ ಸಂಖ್ಯೆಯನ್ನುಳ್ಳದೊಂದು ಸೈನ್ಯವನ್ನು ಒಬ್ಬ ಸೇನಾಪತಿಯೊಡನೆ ಕಳುಹಿಸ ಬೇಕಾಗಿ ತೋರುತ್ತದೆ; ಆರನ್ನು ಕಳುಹಬಹುದು?' ಎಂದು ಕೇಳಿದನು.

ಹಳೆ ಮೊಗಲರ ಸೈನಿಕನೊಬ್ಬನು, 'ಮಹಾರಾಜರೆ! ನಮ್ಮ ಸೇನೆಯನ್ನೆಲ್ಲಾ ಕಳುಹಿದರೂ ಸಾಕಾಗದೆಂದು ಯೋಚಿಸುವ ಸ್ಥಳಕ್ಕೆ ಅಲ್ಪಸಂಖ್ಯೆಯುಳ್ಳ ಸೇನೆ ಯನ್ನು ಕಳುಹಿಸುವುದರ ಮೂಲಕ ಆವ ಕಾರ್ಯಸಾಧನವಾಗುವುದು?' ಎಂದನು.

ಮಾನಸಿಂಹನು, 'ಅಲ್ಪ ಸೈನ್ಯವನ್ನು ರಣಾಂಗಣದಲ್ಲಿ ಶತ್ರುವಿನೆದುರಿಗೆ ನಿಂತು ಯುದ್ಧಮಾಡಲು ಕಳುಹಿಸುವುದು ಯುಕ್ತವಲ್ಲ; ಅಲ್ಪಸಂಖ್ಯಾಕರಾದ ಸೈನಿಕರು ಅಲ್ಲಲ್ಲಿ ಔತುಕೊಂಡಿದ್ದು, ಗ್ರಾಮಪೀಡನಾಸಕ್ತರಾದ ಪಠಾಣರ ಸಾಮಾನ್ಯ ದಳದವರನ್ನಡಗಿಸಲು ಸಮರ್ಥರಾಗಬಹುದು' ಎಂದನು. ಅದಕ್ಕಾ ಮೊಗಲನು, 'ನಿಜವಾದ ಮೃತ್ಯುವಿನ ಮುಖಕ್ಕೆ ಸೇನಾಪತಿ ಯಾವನು ತಾನೇ ಹೋಗುವನು? ಎಂದನು.

ಮಾನಸಿಂಹನು ಭ್ರೂಭಂಗಿಮಾಡಿ* 'ಏನು! ಇಷ್ಟೊಂದು ರಜಪೂತ ಮತ್ತು ಮೊಗಲರ ಮಧ್ಯೆ ಮೃತ್ಯುವನ್ನು ತೃಣಗಣಾಯಮಾನವಾಗಿ ತಿಳಿಯುವವರಾರೂ ಇಲ್ಲವೆ!' ಎಂದನು.

ಆ ಮಾತನ್ನು ಕೇಳುತಲೆ, ಏಳೆಂಟು ಮಂದಿ ಮೊಗಲರೂ ರಾಜಪೂತರೂ ಎದ್ದು ನಿಂತು, 'ಮಹಾರಾಜ! ದಾಸರಾದ ನಾವು ಹೊರಡಲು ಸಿದ್ಧರಾಗಿದ್ದೇವೆ' ಎಂದರು. ಜಗತ್ಸಿಂಹನೂ ಅಲ್ಲಿದ್ದನು. ಅವನು ಎಲ್ಲರಿಗಿಂತಲೂ ವಯಸ್ಸಿನಲ್ಲಿ ಕಿರಿಯನಾಗಿದ್ದನು. ಎಲ್ಲರೂ ಮಾತನಾಡಿದ ಬಳಿಕ ಅವನೂ, 'ಅಪ್ಪಣೆಯಾದರೆ ಭೃತ್ಯನಾದ ನಾನು ದಿಲ್ಲೀಶ್ವರರ ಕಾರ್ಯಸಾಧನೆಯಲ್ಲಿ ಯತ್ನಪಡುವೆನು ಎಂದನು.

ರಾಜಾ ಮಾನಸಿಂಹನು ವಿಸ್ಮಿತವದನನಾಗಿ, 'ಆಗಕೂಡದೇಕೆ? ರಾಜಪೂತರು, ಮೊಗಲರು' ಎಂಬ ಹೆಸರು ನಿರ್ನಾಮವಾಗಿ ಹೋಗುವುದಕ್ಕೆ ಇನ್ನೂ ಅನೇಕ ಕಾಲ ವಿಳಂಬವಿದೆಯೆಂದು ತಿಳಿಯುತ್ತೇನೆ; ನೀವಿಷ್ಟೊಂದು ಮಂದಿ ಜನರೂ ಹೊರಡಲು ಸಿದ್ಧರಾಗಿರುವಾಗ ಆರನ್ನಿಟ್ಟುಕೊಂಡು ಆರನ್ನು ಕಳುಹಿಸಲಿ?' ಎಂದನು.

ರಾಜಸಮುಖದಲ್ಲಿದ್ದವರಲ್ಲೊಬ್ಬನು, 'ಮಹಾರಾಜರೆ! ಅಷ್ಟೊಂದು ಜನರೂ ಈ ಕಾರ್ಯದಲ್ಲಿ ಉದ್ಯುಕ್ತರಾಗಿರುವುದು ಒಳ್ಳೆಯದೇ ಆಯಿತು; ಅದರಿಂದ ಸೇನೆಯ ವ್ಯಯವನ್ನು ಕಡಿಮೆಮಾಡಬಹುದು. ಸ್ವಲ್ಪ ಸೇನೆಯನ್ನು ತೆಗೆದುಕೊಂಡು ಹೋಗಲಿಷ್ಟಪಡುವವರಾರೋ ಅಂತಹವರನ್ನೇ ಕಳುಹಬಹುದು' ಎಂದು ಹೇಳಿದನು.

ರಾಜನು 'ಅದುತ್ತಮ ಆಲೋಚನೆ' ಎಂದು ಹೇಳಿ, ಮೊದಲು ಎದ್ದು ನಿಂತುಕೊಂಡಿದ್ದವನನ್ನು ಕುರಿತು, 'ನೀನೆಷ್ಟೊಂದು ಸೈನ್ಯವನ್ನು ತೆಗೆದುಕೊಂಡು ಹೋಗಲಿಷ್ಟಪಡುವೆ?' ಎಂದನು. ಅದಕ್ಕವನು, 'ಹದಿನೈದು ಸಾವಿರ ಪದಾತಿ ಬಲದಿಂದ ರಾಜಕಾರ್ಯವನ್ನು ನಿರ್ವಾಹಮಾಡಿಕೊಂಡು ಬರುವೆನು' ಎಂದನು. ರಾಜನು, 'ಹದಿನೈದು ಸಾವಿರ ಜನರನ್ನು ಕೊಟ್ಟರೆ ಉಳಿಯುವವರು ಬಹಳ ಕಡಿಮೆಯಾಗುವುದರಿಂದ ಅಷ್ಟೊಂದು ಸೈನ್ಯವನ್ನು ಕೊಡುವುದಕ್ಕಾಗುವುದಿಲ್ಲ, ಹತ್ತು ಸಾವಿರ ಜನರನ್ನು ತೆಗೆದುಕೊಂಡು ಹೋಗತಕ್ಕ ವೀರರಾರು?' ಎಂದು ಕೇಳಿದನು.

ಸೇನಾಪತಿಗಳೆಲ್ಲರೂ ಸೊಲ್ಲಿಲ್ಲದವರಾಗಿದ್ದರು. ಕಡೆಗೆ ರಾಜನಿಗೆ ಪ್ರಿಯಪಾತ್ರನಾಗಿದ್ದ ಯಶೋವಂತಸಿಂಹನೆಂಬೊಬ್ಬ ರಾಜಪೂತ ವೀರನು, ರಾಜಾಜ್ಞೆಯನ್ನು ನೆರವೇರಿಸಲು ಅಪ್ಪಣೆಯನ್ನು ಬೇಡಿದನು. ರಾಜನು ಹೃಷ್ಟಚಿತ್ತನಾಗಿ ಎಲ್ಲರನ್ನೂ ದೃಷ್ಟಿಸಿ ನೋಡುತಿದ್ದನು. ಕುಮಾರನಾದ ಜಗತ್ಸಿಂಹನು ರಾಜದೃಷ್ಟಿ

* ಭ್ರೂಭಂಗಿ=ಹುಬ್ಬು ಗಂಟು.

ಯನ್ನೆದುರುನೋಡುತ ನಿಂತಿದ್ದವನು ರಾಜದೃಷ್ಟಿಯು ತನ್ನಮೇಲೆ ಬಿದ್ದಕೂಡಲೇ ವಿನೀತಭಾವದಿಂದ, 'ಮಹಾರಾಜರೆ! ರಾಜಾನುಗ್ರಹವಾದರೆ ಈ ಭೃತ್ಯನು ಐದು ಸಾವಿರ ದಂಡಿನಿಂದ ಕತಲೂಖಾನನನ್ನು ಸುವರ್ಣರೇಖೆಯ ಆಚೆಗೆ ಓಡಿಸಿ ಬಿಡುವೆನು' ಎಂದೊಪ್ಪಿಕೊಂಡನು.

ಅದನ್ನು ಕೇಳಿ ರಾಜಾ ಮಾನಸಿಂಹನು ಮೌನವಾಗಿದ್ದನು. ಸೇನಾಪತಿಗಳೆಲ್ಲರೂ ಒಬ್ಬರಿಗೊಬ್ಬರು ರಹಸ್ಯವಾಗಿ ಮಾತನಾಡಿಕೊಂಡರು. ಅನಂತರ ರಾಜನು ತನ್ನ ಮಗನನ್ನು ಕುರಿತು, 'ಪುತ್ರ! ನೀನು ರಾಜಪೂತ ಕುಲಕ್ಕೆ ಶ್ರೇಷ್ಠನೇ ಅಹುದು—ಆದರೆ ನಿನ್ನ ಸಾಹಸವು ಸ್ವಲ್ಪ ಅಯುಕ್ತವಾಗಿ ತೋರುವುದು' ಎಂದನು.

ಜಗತ್ಸಿಂಹನು ಕೈಮುಗಿದುಕೊಂಡು, 'ನಾನು ಮಾಡುವ ಪ್ರತಿಜ್ಞೆಯನ್ನು ನೆರವೇರಿಸದೆ ಬಾದಷಹನ ಸೈನ್ಯವನ್ನು ವ್ಯರ್ಥಮಾಡುವವನಾದರೆ, ಮಹಾರಾಜರಲ್ಲಿ ದಂಡನೀಯನಾಗುವೆನು' ಎಂದು ವಿಜ್ಞಾಪಿಸಿದನು.

ರಾಜನು ಹಾಗೆಯೇ ಸ್ವಲ್ಪ ಆಲೋಚಿಸಿ, ಬಳಿಕ, 'ನೀನು ನಿನ್ನ ರಾಜಪೂತ ಕುಲಧರ್ಮವನ್ನು ಪ್ರತಿಪಾಲನಮಾಡುವುದಕ್ಕೆ ನಾನೆಂದೂ ಅಡ್ಡಿಯಾಗಿರಲಾರೆನು; ನೀನೇ ಈ ಕಾರ್ಯಸಿದ್ಧಿಗೋಸ್ಕರ ಪ್ರಯಾಣಮಾಡು' ಎಂದು ಹೇಳಿ, ಕುಮಾರನನ್ನು ಬಾಷ್ಪಾಕುಲ*ಲೋಚನಗಳಿಂದ ನೋಡಿ ಗಾಢಾಲಿಂಗನೆಮಾಡಿ, ಅನಂತರ ಅಪ್ಪಣೆಯನ್ನು ಕೊಟ್ಟು ಕಳುಹಿದನು. ಸೇನಾಪತಿಗಳೆಲ್ಲರೂ ತಮ್ಮ ತಮ್ಮ ಬಿಡಾರಕ್ಕೆ ಹೊರಟುಹೋದರು.

---

## ಐದನೆಯ ಪರಿಚ್ಛೇದ

### ಮಂದಾರಣದುರ್ಗ

ಜಗತ್ಸಿಂಹನು ವಿಷ್ಣುಪುರದಿಂದ ಜಹನ್ನಾಬಾದಿಗೆ ತಂದೆಯ ಬಳಿಗೆ ಹಿಂದಿರುಗಿ ಹೋದ ಮಾರ್ಗದ ಗುರುತನ್ನು ಈಗಲೂ ನೋಡಬಹುದು. ಆ ಮಾರ್ಗಕ್ಕೆ ಸ್ವಲ್ಪ ದಕ್ಷಿಣ ದಿಕ್ಕಿನಲ್ಲಿ ಮಂದಾರಣವೆಂಬ ಗ್ರಾಮವಿದೆ. ಮಂದಾರಣ ಗ್ರಾಮವು ಈಗ ಒಂದು ಹಳ್ಳಿಯಾಗಿದೆ. ಆ ಕಾಲದಲ್ಲದು ಮಹಾ ಸೌಷ್ಠವಶಾಲಿಯಾದ ದೊಡ್ಡ ನಗರವಾಗಿದ್ದಿತು. ಜಗತ್ಸಿಂಹನು ಶೈಲೇಶ್ವರ ಮಂದಿರದಲ್ಲಿ ನೋಡಿದ್ದ ರಮಣಿಯರಾ ಗ್ರಾಮಾಭಿಮುಖವಾಗಿ ಹೊರಟುಹೋದರು.

ಮಂದಾರಣದಲ್ಲಿ ಕೆಲವು ಪೂರ್ವಕಾಲದ ಕೋಟೆಗಳಿದ್ದುವು. ಅದುಕಾರಣವೇ ಅದಕ್ಕೆ ಮಂದಾರಣದುರ್ಗವೆಂದು ಹೆಸರಾಗಿರಬಹುದು. ಆ ನಗರದ ಮಧ್ಯದಲ್ಲಿ ಆಮೋದರವೆಂಬ ನದಿಯು ಪ್ರವಹಿಸುತಿದ್ದಿತು. ಆ ನದಿಯೊಂದು ಸ್ಥಳದಲ್ಲಿ ವಕ್ರ

* ಬಾಷ್ಪಾಕುಲ= ಕಣ್ಣೀರು ತುಂಬಿದ.

ವಾಹಿನಿಯಾಗಿ ಪ್ರವಹಿಸುತಿದ್ದಿತು. ಆ ಸ್ಥಳದಲ್ಲಿ ಭೂಮಿಯು ತ್ರಿಕೋಣಾಕಾರವಾಗಿ ಆ ತ್ರಿಕೋಣದ ಎರಡು ಪಾರ್ಶ್ವವೂ ನದಿಯಿಂದ ತೊಳೆಯಲ್ಪಟ್ಟು, ಮೂರನೆಯ ದಿಕ್ಕಿನಲ್ಲಿ ಮನುಷ್ಯನಿರ್ಮಿತವಾದ ಕಲ್ಲುಕೋಟೆಯೊಂದಿದ್ದಿತು. ತ್ರಿಕೋಣಾಕಾರ ವಾದಾ ಭೂಖಂಡದ ಅಗ್ರಭಾಗದಲ್ಲಿ ಎಂದರೆ, ನದಿಯು ವಕ್ರವಾಹಿನಿಯಾಗಲು ಪ್ರಾರಂಭವಾಗುವ ಸ್ಥಳದಲ್ಲೊಂದು ಮಹತ್ತಾದ ಅರಮನೆಯು ಜಲದಿಂದೆದ್ದು ಗಗನವನ್ನು ಮೇಲಕ್ಕೆತ್ತಲೆಳಸುವಂತೆ ಪ್ರಕಾಶಿಸುತಿದ್ದಿತು. ಅರಮನೆಯು ಆಮೂಲಶಿರಃಪರ್ಯಂತವೂ ಕೃಷ್ಣಶಿಲೆಯಿಂದ ನಿರ್ಮಿತವಾದುದು. ಉಭಯ ಪಾರ್ಶ್ವಗಳಲ್ಲಿಯೂ ಅರಮನೆಯ ಭಿತ್ತಿಯನ್ನು ಅಲೆಗಳಿಂದ ಹೊಡೆಯುತ್ತ ಆವೋದರವು ಪ್ರವಹಿಸುತಿದ್ದಿತು. ಅದ್ಯಾಪಿ ಪ್ರಯಾಣೀಕರು ಮಂದಾರಣದುರ್ಗದಲ್ಲಿ ಅಸಾಧಾರಣವಾದಾ ಅರಮನೆಯ ಕಂಭಗಳು ನಿಂತಿರುವುದನ್ನು ನೋಡಬಹುದು. ಈಗ ಅರಮನೆಯ ನೆಲಕಟ್ಟು ಮಾತ್ರ ಉಳಿದಿದೆ. ಮೇಲಕಟ್ಟಣವು ಕಾಲಕರಾಳ* ಸ್ಪರ್ಶದಿಂದ ಧೂಳಿಯ ರಾಶಿಯಾಗಿ ಬಿದ್ದುಹೋಗಿದೆ. ಅದರ ಮೇಲೆ ತಿಂತರೀ ಮಾಧವೀ ಮುಂತಾದ ವೃಕ್ಷ ಲತಾದಿಗಳು ಕಾನನಾಕಾರವಾಗಿ ಬೆಳೆದು ಭುಜಂಗ ಭಲ್ಲೂಕಾದಿ ಹಿಂಸ್ರ ಜಂತುಗಳಿಗೆ ಆಶ್ರಯವಾಗಿದೆ. ನದಿಯಾಚೆಯ ದಡದಲ್ಲಿಯೂ ಅನೇಕ ದುರ್ಗಗಳಿದ್ದುವು. ಅವುಗಳ ಪ್ರಸಕ್ತಿಯು ಅದ್ಯತನ ಕಥೆಗೆ ಸಂಬಂಧಪಿಲ್ಲ.

ಬಂಗಾಳಾ ಪಠಾನ ಅರಸುಗಳಿಗೆ ಶಿರೋಭೂಷಣನಾಗಿದ್ದ ಹುಸೇನ್ ಷಹನ ವಿಖ್ಯಾತ ಸೇನಾಪತಿಯಾಗಿದ್ದ ಇಸ್ಮಾಯಿಲ್ ಘಾಜಿಯೆಂಬವನು ದುರ್ಗವನ್ನು ಕಟ್ಟಿದವನು. ಆದರೆ ಕಾಲಕ್ರಮದಲ್ಲಿ ಜಯಧರಸಿಂಹನೆಂಬೊಬ್ಬ ಸೈನಿಕನು ದುರ್ಗವನ್ನು ಜಹಗೀರಾಗಿ ಪಡೆದನು. ಒಂಬೈನೂರು ತೊಂಬತ್ತೆಂಟನೆಯ ವರುಷದಲ್ಲಿ ಜಯಧರಸಿಂಹನ ವಂಶಸ್ಥನಾದ ವೀರೇಂದ್ರಸಿಂಹನೆಂಬುವನು ಅಲ್ಲಿ ವಾಸವಾಗಿದ್ದನು.

ವೀರೇಂದ್ರಸಿಂಹನು ಯೌವನಕಾಲದಲ್ಲಿ ತನ್ನ ತಂದೆಯೊಡನೆ ಒಳ್ಳೆಯ ನಡತೆಯಿಂದಿರಲಿಲ್ಲ. ಅವನು ಸ್ವಾಭಾವಿಕವಾಗಿ ಡಾಂಭಿಕನಾಗಿಯೂ ತಾಳ್ಮೆಯಿಲ್ಲದ ಮುಂಗೋಪಿಯಾಗಿಯೂ ಇದ್ದನಲ್ಲದೆ ತಂದೆಯ ಅಪ್ಪಣೆಯ ಪ್ರಕಾರ ಆವಾಗಲೂ ನಡೆಯುತಿರಲಿಲ್ಲವಾದಕಾರಣ ತಂದೆಗೂ ಮಗನಿಗೂ ಆಗಾಗ್ಗೆ ವಿವಾದವಾಗುತಿರುವುದು. ಮಗನ ವಿವಾಹಕ್ಕೆ ಸಲುವಾಗಿ ತಂದೆಯಾದ ವೃದ್ಧ ಜಹಗೀರದಾರನು ನೆರೆಯಲ್ಲಿದ್ದ ಮತ್ತೊಬ್ಬ ಜಮೀನುದಾರನೊಂದಿಗೆ ಸಂಬಂಧವನ್ನು ಬಳೆಯಿಸಲು ಗೊತ್ತುಮಾಡಿಕೊಂಡಿದ್ದನು. ಕನ್ಯೆಯ ತಂದೆಗೆ ಗಂಡು ಮಕ್ಕಳಿರಲಿಲ್ಲವಾದುದರಿಂದ ಆ ವಿವಾಹದಿಂದ ವೀರೇಂದ್ರನ ಸಂಪತ್ತು ವೃದ್ಧಿಯಾಗುವ ಸಂಭವವಿದ್ದಿತು. ಅದಲ್ಲದೆ ಕನ್ಯೆಯೂ ರೂಪವತಿಯಾಗಿದ್ದುದರಿಂದ ಸಂಬಂಧಮಾಡುವುದುಚಿತವೆಂದು ವೃದ್ಧನಾದ ತಂದೆಯು ನಿಶ್ಚೈಸಿ ಅದಕ್ಕೆಲ್ಲಾ

* ಕರಾಳ=ಭಯಂಕರವಾದ ಕೋರೆಹಲ್ಲು.

ಸಾಮಗ್ರಿಯನ್ನು ಸಿದ್ಧಮಾಡಿಕೊಂಡಿದ್ದನು. ಆದರೆ ವೀರೇಂದ್ರನು ಆ ಸಂಬಂಧದಲ್ಲಿ ಇಷ್ಟಪಲ್ಲದೆ ತನ್ನ ಗ್ರಾಮದಲ್ಲಿದ್ದ ಪತಿ ಪುತ್ರ ವಿಹೀನೆಯಾಗಿದ್ದೊಬ್ಬ ದರಿದ್ರಳಾದ ಹೆಂಗಸಿನ ಮಗಳನ್ನು ತಂದೆಗೆ ತಿಳಿಯದಹಾಗೆ ಮದುವೆಮಾಡಿಕೊಂಡು, ಪುನಃ ಮತ್ತೊಂದು ಮದುವೆಯನ್ನು ಮಾಡಿಕೊಳ್ಳಲಿಷ್ಟಪಡಲಿಲ್ಲ. ವೃದ್ಧ ಜನಕನು ರೋಷಪರವಶನಾಗಿ ಮಗನನ್ನು ಮನೆಯಿಂದ ಹೊರಡಿಸಿಬಿಟ್ಟನು. ಯುವಕನಾದ ವೀರೇಂದ್ರನು ಪಿತೃಗೃಹದಿಂದ ಬಹಿಷ್ಕೃತನಾಗಿ, ಸೈನಿಕ ವೃತ್ತಿಯನ್ನು ಅವಲಂಬಿಸಬೇಕೆಂಬ ಆಸೆಯಿಂದ ದಿಲ್ಲಿಗೆ ಹೊರಟು ಹೋದನು. ಆ ಕಾಲದಲ್ಲಿ ಅವನ ಸಹಧರ್ಮಿಣಿಯು ಅಂತಃಸತ್ವೆಯಾಗಿದ್ದ* ಕಾರಣ, ಅವಳನ್ನು ಸಂಗಡ ಕರೆದುಕೊಂಡು ಹೋಗಲು ಅಸನುಕೂಲವಾಗಿ ಅವಳನ್ನು ಅವಳ ತಾಯಿಯ ಕುಟೀರದಲ್ಲಿ ಬಿಟ್ಟು ಹೊರಟುಹೋದನು.

ಇತ್ತಲಾಗಿ ಪುತ್ರನು ದೇಶಾಂತರಕ್ಕೆ ಹೋದ ಬಳಿಕ ವೃದ್ಧನಾದ ಜಹಗೀರದಾರನ ಅಂತಃಕರಣದಲ್ಲಿ ಪುತ್ರವಿಚ್ಛೇದದಿಂದ ವ್ಯಾಕುಲವುಂಟಾಯಿತು. ಬಳಿಕ ಗತಾನುಶೋಚನಾಪರನಾಗಿ ಮಗನ ಸಮಾಚಾರವನ್ನು ತಿಳಿಯಲು ಯತ್ನಪಟ್ಟನು. ಆದರೆ ಕೃತಕಾರ್ಯನಾಗದೆ, ಪುತ್ರನನ್ನು ಪುನಃ ನೋಡುವ ಆಸೆಯನ್ನು ತೊರೆದು ಪುತ್ರವಧುವನ್ನು† ಆ ಬಡಹೆಂಗಸಿನ ಮನೆಯಿಂದ ಸಾದರದೊಡನೆ ಕರೆಯಿಸಿಕೊಂಡು, ತನ್ನ ಮನೆಯಲ್ಲಿಟ್ಟುಕೊಂಡು ಪೋಷಿಸುತ್ತಿದ್ದನು. ವೀರೇಂದ್ರಸಿಂಹನ ಪತ್ನಿಯು ಉಪಯುಕ್ತ ಕಾಲದಲ್ಲಿ ಒಂದು ಕನ್ಯಾರತ್ನವನ್ನು ಹಡೆದು ಕೆಲವು ದಿನಗಳಲ್ಲಿಯೇ ಪರಲೋಕಪ್ರಾಪ್ತಿಯನ್ನು ಹೊಂದಿದಳು.

ವೀರೇಂದ್ರನು ದಿಲ್ಲಿಗೆ ಹೋಗಿ ಮೊಗಲ ಚಕ್ರವರ್ತಿಯ ರಜಪೂತ ಸೈನ್ಯದಲ್ಲಿ ಸೈನಿಕನಾಗಿ ನಿಯಮಿಸಲ್ಪಟ್ಟನು. ಅಲ್ಪಕಾಲದಲ್ಲೇ ನಿಜಬಾಹುಬಲದಿಂದ ಉಚ್ಚಪದಸ್ಥನಾಗಿ ಕೆಲವು ವರುಷಗಳಲ್ಲಿ ಧನವನ್ನೂ ಯಶಸ್ಸನ್ನೂ ಸಂಪಾದಿಸಿ, ತಂದೆಗೆ ಲೋಕಾಂತರಪ್ರಾಪ್ತಿಯಾದುದನ್ನು ಕೇಳಿ ದುಃಖಪಟ್ಟು, ವಿದೇಶಪರ್ಯಟನವೂ‡ ಪರಾಧೀನವೃತ್ತಿಯೂ ನಿಷ್ಪ್ರಯೋಜನವಾದವುವೆಂದು ತಿಳಿದು ತನ್ನ ಮನೆಗೆ ಹಿಂದಿರುಗಿ ಬಂದನು. ವೀರೇಂದ್ರನ ಸಂಗಡ ದಿಲ್ಲಿಯಿಂದ ಅನೇಕಾನೇಕ ಸಹಚರರು ಬಂದರು. ಅವರಲ್ಲೊಬ್ಬ ಪರಿಚಾರಿಕೆಯೂ ಮತ್ತೊಬ್ಬ ಪರಮಹಂಸನೆಂದರೆ ಸಂನ್ಯಾಸಿಯೂ ಬಂದಿದ್ದರು. ಪರಿಚಾರಿಕೆಯ ಹೆಸರು ವಿಮಲೆ; ಪರಮಹಂಸನ ಹೆಸರು ಅಭಿರಾಮಸ್ವಾಮಿ.

ವಿಮಲೆಯು ಗೃಹಕಾರ್ಯಗಳನ್ನು ಮಾಡುತ್ತಿದ್ದಳಲ್ಲದೆ, ವಿಶೇಷವಾಗಿ ವೀರೇಂದ್ರನ ಕನ್ಯೆಯ ಲಾಲನ ಪಾಲನೆ ಮಾಡುವುದರಲ್ಲಿ ನಿಯುಕ್ತೆಯಾಗಿದ್ದಳು. ಅವಳು ಅರಮನೆಯಲ್ಲಿದ್ದುಕೊಂಡಿರುವುದಕ್ಕೆ ಮತ್ತಾವ ಕಾರಣವೂ ಕಂಡುಬರಲಿಲ್ಲವಾದುದರಿಂದ ಅವಳನ್ನು ಹುಡುಗಿಯ ಸಹಚಾರಣಿ ಅಥವಾ ದಾಸಿಯೆಂದು

* ಅಂತಃಸತ್ವೆ=ಗರ್ಭಿಣಿ. †ಪುತ್ರವಧೂ=ಸೊಸೆ. ‡ವಿದೇಶಪರ್ಯಟನ=ದೇಶಾಂತರ ಸಂಚಾರ.

ಮೇಲೆ ಹೇಳಬೇಕಾಯಿತು. ಆದರೆ ವಿಮಲೆಯಲ್ಲಿ ದಾಸಿಯ ವೃತ್ತಿಯ ಲಕ್ಷಣ ಗಳಾವವೂ ಇರಲಿಲ್ಲ; ಕಂಚುಬರಲೂ ಇಲ್ಲ. ಪೌರಜನರೆಲ್ಲರೂ ವಿಮಲೆಯನ್ನು ಮನೆಯ ಯಜಮಾನಿಯಂತೆ ಗೌರವಿಸುತ್ತಿದ್ದರು. ಅವಳ ಮುಖಕಾಂತಿಯನ್ನು ನೋಡಿದರೆ ಅವಳು ಯೌವನದಲ್ಲಿ ಪರಮಸುಂದರಿಯಾಗಿದ್ದಳೆಂದು ಬೋಧೆ ಯಾಗುತ್ತಿದ್ದಿತಲ್ಲದೆ, ಪ್ರಭಾತದಲ್ಲಿ ಅಸ್ತಂಗತನಾಗುವ ಚಂದ್ರನ ಹಾಗೆ ರೂಪ ಲಾವಣ್ಯಗಳು ಆ ವಯಸ್ಸಿನಲ್ಲಿಯೂ ಕಾಣಿಸುತ್ತಿದ್ದುವು. ಅಭಿರಾಮಸ್ವಾಮಿ ಯೆಂಬ ಸಂನ್ಯಾಸಿಗೆ ಗಜಪತಿವಿದ್ಯಾದಿಗ್ಗಜನೆಂಬೊಬ್ಬ ಶಿಷ್ಯನಿದ್ದನು. ಅವನಿಗೆ ಅಲಂಕಾರಶಾಸ್ತ್ರದಲ್ಲಿ ಅದ್ಭುತವ್ಯುತ್ಪತ್ತಿ ಇದ್ದಿತೋ ಇಲ್ಲವೋ ಅದು ಹೇಳ ಲಸಾಧ್ಯವಾಗಿದ್ದರೂ ಅವನಿಗೆ ತಾನು ರಸಿಕಶಿರೋಮಣಿಯೆಂದು ಪ್ರಖ್ಯಾತನಾಗ ಬೇಕೆಂಬ ಆಸೆಯು ಅತಿಪ್ರಬಲವಾಗಿದ್ದಿತು. ಅವನು ವಿಮಲೆಯನ್ನು ನೋಡಿ ತನ್ನ ಪ್ರೌಢಿಮೆಯನ್ನು ಅವಳ ವರ್ಣನೆಯಲ್ಲಿ ತೋರಬೇಕೆಂದೆಳಸಿ, ಆ ದಾದಿಯು ಭಾಂಡಸ್ಥ* ಘೃತದೋಪಾದಿಯಲ್ಲಿದ್ದಳೆಂದೂ ಮದನಾಗ್ನಿಯು ಶೀತಳವಾಗುತ ಬಂದಹಾಗೆಲ್ಲಾ ಅವಳ ದೇಹವೂ ಅಷ್ಟಷ್ಟು ದೃಢವಾಗುತ ಬರುವುದೆಂದೂ ಆಗಿಂದಾಗ್ಗೆ ವರ್ಣಿಸುತಿರುವನು. ಇಲ್ಲಿ ಸೂಚಿಸಬೇಕಾದುದೇನಂದರೆ ಗಜಪತಿ ವಿದ್ಯಾದಿಗ್ಗಜನು ಉಕ್ತರೀತಿ ಪ್ರೌಢವಾದ ಪಾಂಡಿತ್ಯವನ್ನು ತೋರಿದ ದಿನ ವಿಮಲೆಯು ಅವನ ಪ್ರೌಢಿಮೆಗೆ ಮೆಚ್ಚಿ, ತಲೆದೂಗಿ, ಅವನಿಗೆ ರಸಿಕರಾಜ ರಸೋಪಾಧ್ಯಾಯನೆಂಬ ಹೆಸರನ್ನು ಕೊಟ್ಟಳು.

ವಿಮಲೆಯು ಸಭ್ಯತೆಯಲ್ಲಿಯೂ, ನಾಗರಿಕತೆಯಲ್ಲಿಯೂ, ವಾಗ್ವಿಜೃಂಭಣೆ ಯಲ್ಲಿಯೂ ನಿಪುಣೆಯಾಗಿದ್ದಳು. ಆ ಗುಣಾತಿಶಯಗಳು ಸಾಮಾನ್ಯ ಪರಿಚಾರಿಕೆ ಯರಲ್ಲಿರತಕ್ಕ ಸಂಭವವಿಲ್ಲ. ಅನೇಕರು ವಿಮಲೆಯು ಚಕ್ರವರ್ತಿಯ ಜನಾನಾ ವಾಸಿನಿಯಾಗಿದ್ದವಳೆಂದು ಹೇಳುತ್ತಿದ್ದರು. ಅದು ನಿಜವೋ ಸುಳ್ಳೋ ವಿಮಲೆಗೆ ತಿಳಿದಿರಬೇಕು. ಆದರೆ ಆದರ ವಿಚಾರವನ್ನು ಕುರಿತು ಅವಳಾವಾಗಲೂ ಚರ್ಚೆ ಮಾಡಿದವಳಾಗಿ ಕಾಣಲಿಲ್ಲ.

ವಿಮಲೆಯು ವಿಧವೆಯೋ, ಸಧವೆಯೋ? ಬಲ್ಲವರಾರು? ಅವಳೇನೋ ಆಭರಣಗಳಿಂದಲಂಕೃತೆಯಾಗಿರುವಳು; ಏಕಾದಶಿ ಮುಂತಾದ ಉಪವಾಸಗಳನ್ನು ಮಾಡುತಿರಲಿಲ್ಲ. ಸುಮಂಗಲಿಯ ಹಾಗೆ ಸಕಲಾಚರಣೆಗಳನ್ನೂ ನಡೆಯಿ ಸುತ್ತಿದ್ದಳು.

ವಿಮಲೆಯು ದುರ್ಗೇಶನಾದ ವೀರೇಂದ್ರನ ನಂದಿನಿ†ಯಾದ ತಿಲೋತ್ತಮೆ ಯನ್ನು ಆಂತರಿಕ ಸ್ನೇಹ ವಿಶ್ವಾಸಗಳಿಂದ ನೋಡುತಿದ್ದಳೆಂಬುದನ್ನು ಅವರಿಬ್ಬರೂ ಶೈಲೇಶ್ವರನ ಮಂದಿರದಲ್ಲಿದ್ದಾಗ ವ್ಯಕ್ತಪಡಿಸಿದ್ದಾಳೆ. ತಿಲೋತ್ತಮೆಯೂ ಅವಳ ವಿಚಾರದಲ್ಲಿ ಅದೇ ರೀತಿಯಾಗಿ ಅನುರಾಗಿಣಿಯಾಗಿದ್ದಳು. ವೀರೇಂದ್ರನ ಸಹಚರಿ

* ಭಾಂಡಸ್ಥ=ಗಡಿಗೆಯಲ್ಲಿರುವ. † ನಂದಿನಿ=ಮಗಳು.

ಯಾಗಿದ್ದ ಅಭಿರಾಮಸ್ವಾಮಿಯು ಸರ್ವದಾ ಕೋಟೆಯಲ್ಲಿ ಅವನೊಂದಿಗೆ ವಾಸವಾಗಿರುತ್ತಿರಲಿಲ್ಲ; ಆಗಾಗ್ಗೆ ದೇಶಸಂಚಾರಕ್ಕೆ ಹೋಗಿ ಒಂದೆರಡು ತಿಂಗಳು ವಿದೇಶಪರ್ಯಟನದಲ್ಲಿಯೂ ಒಂದೊಂದು ತಿಂಗಳು ಮಂದಾರಣದಲ್ಲಿಯೂ ಕಾಲಹರಣ ಮಾಡುತ್ತಿದ್ದನು. ದುರ್ಗವಾಸಿಗಳೂ ಇತರ ಜನರೂ ಅಭಿರಾಮಸ್ವಾಮಿಯು ವೀರೇಂದ್ರನಿಗೆ ದೀಕ್ಷಾಗುರುವೆಂದು ಹೇಳುತಿದ್ದರು. ವೀರೇಂದ್ರಸಿಂಹನು ಅಭಿರಾಮಸ್ವಾಮಿಗೆ ಮಾಡುತಿದ್ದ ಸಮ್ಮಾನ ಆದರ ಮುಂತಾದುದನ್ನು ನೋಡಿದರೆ ಹಾಗೆಯೇ ಇರಬಹುದೆಂದು ತೋರುತಿದ್ದಿತು. ವೀರೇಂದ್ರನು ಸಾಂಸಾರಿಕವಾದ ಸಕಲ ಕಾರ್ಯಗಳನ್ನೂ ಅಭಿರಾಮಸ್ವಾಮಿಯೊಡನೆ ಆಲೋಚಿಸದೆ ಮಾಡುತ್ತಿರಲಿಲ್ಲ; ಗುರುದತ್ತವಾದಾ ಬುದ್ಧಿವಾದಗಳಾವಾಗಲೂ ಪ್ರಾಯಃ ಸಫಲವಾಗುತ್ತಿದ್ದುವು. ವಸ್ತುತಃ, ಅಭಿರಾಮಸ್ವಾಮಿಯು ಬಹುದರ್ಶಿಯಾಗಿಯೂ ತೀಕ್ಷ್ಣಬುದ್ಧಿಯುಳ್ಳವನಾಗಿಯೂ ಇದ್ದನು. ಅವನ ಸಂನ್ಯಾಸವ್ರತಧರ್ಮದಿಂದ ಅನೇಕ ಸಾಂಸಾರಿಕ ಇಹವ್ಯಾಪಾರಗಳ ವಿಚಾರದಲ್ಲಿ ಅರಿಷಡ್ವರ್ಗಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಸಾಮರ್ಥ್ಯವುಳ್ಳವನಾಗಿದ್ದನು. ಹೀಗಿರುತ್ತ, ತಾಳ್ಮೆಯಿಲ್ಲದ ಡಾಂಭಿಕನಾದ ವೀರೇಂದ್ರನ ಅಭಿಸಿದ್ಧಿಗಳಿಗಿಂತಲೂ ಅಭಿರಾಮಸ್ವಾಮಿಯ ಬುದ್ಧಿವಾದಗಳು ಫಲಪ್ರದವಾಗುವುದೇನಾಶ್ಚರ್ಯ!

ವಿಮಲೆ ಮತ್ತು ಅಭಿರಾಮಸ್ವಾಮಿ ಇವರಿಬ್ಬರಲ್ಲದೆ, ಆಶಮನಿಯೆಂಬ ಹೆಸರಿನ ಮತ್ತೊಬ್ಬ ದಾಸಿಯೂ ದಿಲ್ಲಿಯಿಂದ ವೀರೇಂದ್ರಸಿಂಹನ ಸಂಗಡ ಮಂದಾರಣದುರ್ಗಕ್ಕೆ ಬಂದಿದ್ದಳು.

---

## ಆರನೆಯ ಪರಿಚ್ಛೇದ

### ಅಭಿರಾಮಸ್ವಾಮಿಯ ಬುದ್ಧಿವಾದಗಳು

ತಿಲೋತ್ತಮೆಯೂ ವಿಮಲೆಯೂ ಸುರಕ್ಷಿತವಾಗಿ ಶೈಲೇಶ್ವರ ಮಂದಿರದಿಂದ ಅರಮನೆಗೆ ಬಂದು ಸೇರಿದರು. ಅವರು ಬಂದು ಸೇರಿದ ಮೂರು ನಾಲ್ಕು ದಿವಸಗಳ ತರುವಾಯ ಒಂದು ದಿನ ವೀರೇಂದ್ರಸಿಂಹನು ಅವನ ಕಾರ್ಯಾಲಯದಲ್ಲಿ ಸಿಂಹಾಸನದಮೇಲೆ ಕುಳಿತಿದ್ದ ಸಮಯದಲ್ಲಿ ಅಭಿರಾಮಸ್ವಾಮಿಯು ಅಲ್ಲಿಗೆ ಬಂದನು. ವೀರೇಂದ್ರಸಿಂಹನೆದ್ದು ಪ್ರಣಾಮವನ್ನು ಮಾಡಿದನು. ಅಭಿರಾಮಸ್ವಾಮಿಯು ವೀರೇಂದ್ರಸಿಂಹನು ಕೊಟ್ಟ ಕುಶಾಸನದಮೇಲೆ ಕುಳಿತುಕೊಂಡ ಬಳಿಕ ವೀರೇಂದ್ರನು ಅವನ ಅಪ್ಪಣೆಯ ಪ್ರಕಾರ ಕುಳಿತುಕೊಂಡನು. ಅಭಿರಾಮಸ್ವಾಮಿಯು ವೀರೇಂದ್ರನನ್ನು ಕುರಿತು: 'ವೀರೇಂದ್ರ! ಇಂದು ನಿನ್ನೊಡನೆ ಕೆಲವು ವಿಶೇಷ ಸಂಗತಿಗಳನ್ನು ಕುರಿತು ಮಾತನಾಡಬೇಕಾಗಿದೆ' ಎಂದನು.

ವೀರೇಂದ್ರ—ಆಗಲಿ, ಅಪ್ಪಣೆಯಾಗಬಹುದು.

ಅಭಿರಾಮಸ್ವಾಮಿ—ಈಗ ಮೊಗಲರಿಗೂ ಪಠಾನರಿಗೂ ಮಹತ್ತರವಾದೊಂದು ಯುದ್ಧವು ಸಂಪ್ರಾಪ್ತವಾಗಿದೆ.

ವೀರೇಂದ್ರ—ಅಹುದು. ಒಂದು ಗುರುತರವಾದ ಘಟನೆಯುಂಟಾಗುವ ಸಂಭವವೂ ಕಾಣುತ್ತದೆ.

ಅಭಿರಾಮಸ್ವಾಮಿ—ಸಂಭವವೇ ಅಹುದು, ನೀನೇನನ್ನು ಮಾಡತಕ್ಕದೆಂದು ನಿಶ್ಚೈಸಿರುವೆ?

ವೀರೇಂದ್ರ—(ದರ್ಪದಿಂದ) 'ಶತ್ರುಗಳು ಬಂದರೆ ನನ್ನೀ ಬಾಹುಬಲದಿಂದ ಸೋಲಿಸುವೆನು' ಎಂದು ಹೇಳಿದನು.

ಪರಮಹಂಸನು ಹೆಚ್ಚು ಮೃದುಭಾವದಿಂದ ಹೇಳತೊಡಗಿದನು :— 'ವೀರೇಂದ್ರ! ಅದು ನಿನ್ನಂತಹ ವೀರನಿಗೆ ಯೋಗ್ಯವಾದ ಪ್ರತ್ಯುತ್ತರವೇ ಅಹುದು; ಆದರೆ ವೀರತ್ವ ಮಾತ್ರದಿಂದಲೇ ಜಯಲಾಭವಾಗುವುದಿಲ್ಲವೆಂದು ತಿಳಿಯಬೇಕು. ಯಥಾರೀತಿಯಾಗಿ ಸಂಧಿವಿಗ್ರಹಗಳನ್ನು ನಡೆಯಿಸಿದರೆ ಜಯಲಾಭವಾಗುವುದು. ನೀನಾದರೋ ಸ್ವತಃ ವೀರಾಗ್ರಗಣ್ಯನು, ಆದರೆ ನಿನ್ನ ಸೈನ್ಯವು ಸಾವಿರ ಪದಾತಿಗಳಿಗಿಂತ ಹೆಚ್ಚಾಗಿಲ್ಲ; ಒಂದು ಸಾವಿರ ಸೇನೆಯನ್ನು ತೆಗೆದುಕೊಂಡು ಹೋಗಿ, ಅದಕ್ಕೆ ಶತಗುಣ ಹೆಚ್ಚಾದ ಸೈನ್ಯವನ್ನು ವೀರನಾವನು ಜಯಿಸಿದ್ದಾನೆ? ಮೊಗಲರೂ ಪಠಾನರೂ ಸೇನಾಬಲದಲ್ಲಿ ನಿನಗಿಂತ ಶತಗುಣ ಬಲಿಷ್ಠರಾಗಿದ್ದಾರೆ; ಅವರಲ್ಲಿ ಒಂದು ಪಕ್ಷದವರ ಸಹಾಯವಿಲ್ಲದೆ ಅಪರ ಪಕ್ಷದವರ ಕೈಯಿಂದುದ್ಧಾರವಾಗಲಸಾಧ್ಯವಾಗಿ ಕಾಣುತ್ತದೆ; ಹೀಗೆ ಹೇಳಿದೆನೆಂದು ಕೋಪವಶನಾಗಬೇಡ; ಸ್ಥಿರಮನಸ್ಕನಾಗಿ ವಿವೇಚನೆಯನ್ನು ಮಾಡು; ಹಾಗೂ ಯೋಚಿಸಬೇಕಾದುದೇನೆಂದರೆ, ಉಭಯ ಪಕ್ಷದವರೊಂದಿಗೂ ಶತ್ರುಭಾವದಿಂದಿದ್ದರೆ ಪ್ರಯೋಜನವೇನು? ಶತ್ರುವಿರುವುದೇ ಮಹಾ ಹಾನಿಕರವಾದುದು; ಇಬ್ಬರು ಶತ್ರುಗಳಿರುವುದಕ್ಕಿಂತ ಒಬ್ಬ ಶತ್ರುವಿರುವುದು ಒಳ್ಳೆಯದಲ್ಲವೆ? ಅತಏವ ನನ್ನ ಅಭಿಪ್ರಾಯದಲ್ಲಿ ಪಕ್ಷಾಪಕ್ಷವನ್ನು ನೋಡಿ ವಹಿಸುವುದುಚಿತವೆಂದು ಕಾಣುವುದು.

ವೀರೇಂದ್ರನು ಬಹುಕ್ಷಣಗಳವರೆಗೂ ಯೋಚನೆಯನ್ನು ಮಾಡಿ, ಬಳಿಕ- 'ನಾನಾರ ಪಕ್ಷಾವಲಂಬನೆ ಮಾಡಬೇಕೆಂದು ನಿಮ್ಮಿಷ್ಟ'ವೆಂದು ಕೇಳಿದನು. ಅದಕ್ಕೆ ಅಭಿರಾಮಸ್ವಾಮಿಯು—"ಯತೋಧರ್ಮಸ್ತತೋ ಜಯಃ." 'ಆವ ಪಕ್ಷವನ್ನು ಅವಲಂಬಿಸಿದರೆ ಅಧರ್ಮವಲ್ಲವೆಂದು ತೋರುವುದೋ, ಆ ಪಕ್ಷವನ್ನು ಸೇರಬೇಕು; ರಾಜವಿದ್ರೋಹವು ಮಹಾಪಾತಕವಾದುದಾದಕಾರಣ ರಾಜಪಕ್ಷವನ್ನೇ ಅವಲಂಬಿಸು' ಎಂದುತ್ತರವನ್ನು ಕೊಟ್ಟನು.

ವೀರೇಂದ್ರನು ಪುನಃ ಸ್ವಲ್ಪ ಚಿಂತಿಸಿ, 'ರಾಜರಾರು? ಮೊಗಲರೂ ಪಠಾನರೂ ಉಭಯರೂ ರಾಜತ್ವಕ್ಕೋಸ್ಕರ ವಿವಾದ ಮಾಡುತ್ತಿದ್ದಾರೆ' ಎಂದನು.

ಅಭಿರಾಮಸ್ವಾಮಿ—ಆವನು ಕರಗ್ರಾಹಿಯೋ* ಅವನೇ ರಾಜ.

ವೀರೇಂದ್ರ—ಹಾಗಾದರೆ, ಅಕ್ಬರಷಹನೊ?

ಅಭಿರಾಮಸ್ವಾಮಿ—ಆವಶ್ಯಕವಾಗಿ; ಅದಕ್ಕೆ ಸಂದೇಹವೇನು?

ಆ ಮಾತನ್ನು ಕೇಳಿ ವೀರೇಂದ್ರನು ಅಸಂತೋಷವನ್ನು ತೋರ್ಪಡಿಸುವ ಮುಖಭಂಗಿಯನ್ನು ಮಾಡಿದನು. ಕ್ರಮವಾಗಿ ಅವನ ಕಣ್ಣುಗಳು ಆರಕ್ತವರ್ಣವಾದುವು. ಅಭಿರಾಮಸ್ವಾಮಿಯು ಆಕಾರೇಂಗಿತ ಚಿಹ್ನೆಗಳನ್ನು ನೋಡಿ, 'ವೀರೇಂದ್ರ! ಕ್ರೋಧವನ್ನು ಬಿಡು. ನಾನು ನಿನಗೆ ದಿಲ್ಲೀಶ್ವರನ ಪಕ್ಷವನ್ನವಲಂಬಿಸೆಂದು ಹೇಳಿದೆನೇ ಹೊರತು, ಮಾನಸಿಂಹನ ಅನುಗತನಾಗೆಂದು ಹೇಳಲಿಲ್ಲ' ಎಂದನು.

ವೀರೇಂದ್ರನು ತನ್ನ ಬಲಗೈಯನ್ನು ಮುಂದಕ್ಕೆ ಚಾಚಿ, ಎಡಗೈಯಿನೊಂದು ಬೆರಳಿಂದ ಅದನ್ನು ತೋರುತ್ತ ಅಭಿರಾಮಸ್ವಾಮಿಯನ್ನು ಕುರಿತು, 'ತಮ್ಮ ಪಾದಪದ್ಮಗಳ ಆಶೀರ್ವಾದವಿದ್ದರೆ, ಈ ಹಸ್ತವನ್ನು ಮಾನಸಿಂಹನ ರಕ್ತದಲ್ಲಿ ತೊಳೆಯುವೆನು' ಎಂದು ಹೇಳಿದನು. ಅಭಿರಾಮಸ್ವಾಮಿಯು, 'ಸ್ಥಿರಚಿತ್ತನಾಗು, ರಾಗಾಂಧನಾಗಿ ಸ್ವಕಾರ್ಯವನ್ನು ನಷ್ಟಮಾಡಬೇಡ; ಮಾನಸಿಂಹನು ಮೊದಲು ಮಾಡಿದ ಅಪರಾಧಕ್ಕೆ ಆವಶ್ಯಕವಾಗಿ ದಂಡಿಸು; ಆದರೆ ಅಕ್ಬರಬಾದಷಹನ ಸಂಗಡ ವೈರವೇತಕ್ಕೆ?' ಎಂದನು.

ವೀರೇಂದ್ರನು ಕ್ರೋಧಾನ್ವಿತನಾಗಿ, 'ಅಕ್ಬರಬಾದಷಹನ ಪಕ್ಷಾವಲಂಬನೆಯನ್ನು ಮಾಡಿದರೆ, ಆವ ಸೇನಾಪತಿಗೆ ಅಧೀನನಾಗಿ ಯುದ್ಧವನ್ನು ಮಾಡಬೇಕಾಗುವುದು? ಆರ ಅನುಗಾಮಿಯಾಗಬೇಕು? ಮಾನಸಿಂಹನಲ್ಲವೆ! ಗುರುಗಳೆ! ಈ ದೇಹವಿರುವವರೆಗೂ ಆ ಕಾರ್ಯವು ವೀರೇಂದ್ರಸಿಂಹನಿಂದಾಗತಕ್ಕುದಲ್ಲ' ಎಂದನು.

ಅದನ್ನು ಕೇಳಿ ಅಭಿರಾಮಸ್ವಾಮಿಯು ವಿಷಣ್ಣವದನ†ವುಳ್ಳವನಾಗಿ ನೀರವವಾಗಿದ್ದು‡ ಕೆಲವು ನಿಮಿಷಗಳಾದ ಬಳಿಕ ಪುನಃ ವೀರೇಂದ್ರನನ್ನು ಕುರಿತು, 'ಹಾಗಾದರೆ, ಪಠಾನರಿಗೆ ಸಹಾಯವನ್ನು ಮಾಡಿದರೆ ನಿನಗೆ ಶ್ರೇಯಸ್ಸಾಗುವುದೆಂದು ತಿಳಿಯುವೆಯೊ?' ಎಂದು ಕೇಳಿದನು. ಅದಕ್ಕೆ ವೀರೇಂದ್ರನು, 'ಪಕ್ಷಾಪಕ್ಷ ಪ್ರಭೇದಮಾಡುವುದು ಆವಶ್ಯಕವೇನು?' ಎಂದು ಕೇಳಿದನು.

ಅಭಿರಾಮಸ್ವಾಮಿ—ಅಹುದು. ಪಕ್ಷಾಪಕ್ಷ ಪ್ರಭೇದಮಾಡಬೇಕಾದುದು ಶ್ರೇಯಸ್ಸೇ ಅಹುದು.

ವೀರೇಂದ್ರ—ಹಾಗಾದರೆ, ನಾನು ಪಠಾನರಿಗೆ ಸಹಕಾರಿಯಾಗುವುದು ಶ್ರೇಯಸ್ಸು.

---

* ಕರಗ್ರಾಹಿ=ಕಂದಾಯ ಅಥವಾ ಕಪ್ಪವನ್ನು ತೆಗೆದುಕೊಳ್ಳುವವನು. † ವಿಷಣ್ಣವದನ=ಬಾಡಿದ ಮುಖ. ‡ ನೀರವವಾಗಿ=ಮೌನವಾಗಿ, ಮಾತಿಲ್ಲದೆ.

ಅಭಿರಾಮಸ್ವಾಮಿಯು ದೀರ್ಘನಿಶ್ವಾಸವನ್ನು ಬಿಟ್ಟು ಪುನಃ ಮೌನವಾಗಿದ್ದನು. ಆವನ ಕಣ್ಣುಗಳಲ್ಲಿ ನೀರು ತುಂಬಿತು. ಅದನ್ನು ನೋಡಿ ವೀರೇಂದ್ರನು ಆಶ್ಚರ್ಯಗೊಂಡು, 'ಗುರುಗಳೆ? ಕ್ಷಮಿಸಿ, ತಿಳಿಯದೆ ನಾನಾವ ಅಪರಾಧವನ್ನು ಮಾಡಿದೆನೋ ಅಪ್ಪಣೆಯಾಗಬೇಕು' ಎಂದನು.

ಅಭಿರಾಮಸ್ವಾಮಿಯು ಉತ್ತರೀಯದ ಸೆರಗಿನಿಂದ ಕಣ್ಣೊರಸಿಕೊಂಡು, 'ವೀರೇಂದ್ರ? ಕೇಳು. ನಾನು ಕೆಲವು ದಿನಗಳಿಂದ ಜ್ಯೋತಿಷ್ಯವನ್ನು ಗುಣಿಸುತ್ತಿದ್ದೆನು; ನಿನ್ನ ಮಗಳು ನಿನಗಿಂತ ನನಗೆ ಹೆಚ್ಚು ವಿಶ್ವಾಸಪಾತ್ರಳಾಗಿರುವುದನ್ನು ನೀನು ಬಲ್ಲೆ! ಅದುಸಲುವಾಗಿ ಅವಳ ಸಂಬಂಧವಾಗಿ ಬಹುವಿಧ ಗಣಿತ ಶಾಸ್ತ್ರವನ್ನು ಗುಣಿಸಿದೆನು' ಎಂದನು. ಅದಂ ಕೇಳಿ ವೀರೇಂದ್ರನ ಮುಖವು ವಿಶುಷ್ಕವಾಗಿ* ಆತುರದಿಂದವನು ಪರಮಹಂಸನನ್ನು ಕುರಿತು, 'ಗುಣಿಸುವುದರಲ್ಲೇನು ಕಂಡುಬಂದಿತು?' ಎಂದು ಕೇಳಿದನು. ಅಭಿರಾಮಸ್ವಾಮಿಯು, 'ಆ ಗುಣಾಕಾರದಲ್ಲಿ ಮೊಗಲರ ಸೇನಾಪತಿಯಿಂದ ತಿಲೋತ್ತಮೆಗೆ ಮಹತ್ತಾದ ಅಮಂಗಳವುಂಟಾಗುವುದೆಂದು ತಿಳಿಯಬಂದಿತು' ಎಂದನು. ವೀರೇಂದ್ರನ ಮುಖವು ತೀರ ವಿವರ್ಣವಾಯಿತು. ಅಭಿರಾಮಸ್ವಾಮಿಯು ಮುಂದೆ ಹೇಳತೊಡಗಿದನು:—'ಮೊಗಲರು ನಮಗೆ ವಿಪಕ್ಷರಾದರೆ ಅವರಿಂದ ತಿಲೋತ್ತಮೆಗೆ ಅಮಂಗಳವು ಸಂಭವಿಸುವುದು; ಹಾಗಲ್ಲದೆ, ಅವರು ಸ್ವಪಕ್ಷದವರಾದರೆ, ಆ ಸಂಭವವಿಲ್ಲ; ಈ ಕಾರಣದಿಂದ ನೀನು ಮೊಗಲರ ಪಕ್ಷವನ್ನು ವಹಿಸಬೇಕೆಂದು ಹೇಳಿದೆನು; ನನ್ನೀ ಮನೋಗತವನ್ನು ವ್ಯಕ್ತಪಡಿಸಿ ನಿನಗೆ ಸಂಕಟವನ್ನುಂಟುಮಾಡಬೇಕೆಂದು ನನಗಿಷ್ಟವಿರಲಿಲ್ಲ; ಮನುಷ್ಯ ಯತ್ನವು ವಿಫಲವಾಗುವುದು; ಅದಕ್ಕೆ ಸಂದೇಹವಿಲ್ಲ; ಲಲಾಟ ಲಿಪಿಯು ಅವಶ್ಯಕವಾಗಿ ಘಟಿಸುವುದು; ಹಾಗಲ್ಲದಿದ್ದರೆ, ನೀನೇಕ ಇಷ್ಟೊಂದು ಸ್ಥಿರಪ್ರತಿಜ್ಞೆಯುಳ್ಳವನಾಗುತ್ತಿದ್ದೆ?' ಎಂದು ಹೇಳಿದನು.

ವೀರೇಂದ್ರನು ಮೌನವಾಗಿದ್ದನು. ಪುನಃ ಅಭಿರಾಮಸ್ವಾಮಿಯು, 'ವೀರೇಂದ್ರ! ಬಾಗಿಲಲ್ಲಿ ಪಠಾನಾಧಿಪ ಕತಲೂಖಾನನ ದೂತನೊಬ್ಬನು ಬಂದು ನಿಂತಿರುವನು; ನಾನವನನ್ನು ನೋಡಿ ನಿನ್ನ ಬಳಿಗೆ ಬಂದೆನು; ನಾನು ನಿಷೇಧಿಸಿದುದರಿಂದ ದ್ವಾರಪಾಲಕರವನನ್ನು ನಿನ್ನ ಬಳಿಗೆ ಕರೆತರಲಿಲ್ಲ; ಪ್ರಕೃತ ನಾನು ಹೇಳತಕ್ಕುದೆಲ್ಲಾ ಪೂರ್ತಿಯಾಯಿತು; ಆ ದೂತನನ್ನು ಕರೆಯಿಸಿ, ಉಚಿತವಾದ ಪ್ರತ್ಯುತ್ತರವನ್ನು ಹೇಳಿ ಕಳುಹಿಸು' ಎಂದನು.

ವೀರೇಂದ್ರನು ನಿಟ್ಟುಸಿರನ್ನು ಬಿಟ್ಟು, ತಲೆಯೆತ್ತಿ, 'ಗುರುದೇವ! ನಾನಾವ ಪರ್ಯಂತ ತಿಲೋತ್ತಮೆಯನ್ನು ನೋಡಿರಲಿಲ್ಲವೋ, ಆವರೆಗೂ ಅವಳೆನ್ನ ಮಗಳೆಂದು ಸ್ಮರಣೆಯಲ್ಲಿರಲಿಲ್ಲ; ಈಗ ತಿಲೋತ್ತಮೆಯನ್ನು ಬಿಟ್ಟರೆ ನನಗೇ

* ವಿಶುಷ್ಕ=ಹೆಚ್ಚು ಕಂದಿದುದಾಗಿ.

ಪ್ರಪಂಚದಲ್ಲಿ ಮತ್ತಾರೂ ಇಲ್ಲ; ತಮ್ಮ ಆಜ್ಞೆಯು ಶಿರೋಧಾರ್ಯವಾದುದು; ಅಗತ್ಯವಾಗಿ ಶಿರಸಾವಹಿಸುವೆನು. ಹಿಂದೆ ಆಗಿಹೋದುದನ್ನು ಇಂದಿನಿಂದ ಮರೆತುಬಿಡುವೆನು. ನಾನು ಮಾನಸಿಂಹನ ಅನುಗಾಮಿಯಾಗುವೆನು' ಎಂದು ಹೇಳಿ, ಸೇವಕನನ್ನು ಕುರಿತು ದ್ವಾರಪಾಲಕನಿಗೆ ಆ ದೂತನನ್ನು ಕರೆತರುವಹಾಗೆ ಹೇಳೆಂದು ಅಪ್ಪಣೆಮಾಡಿದನು.

ವೀರೇಂದ್ರನ ಅಪ್ಪಣೆಯ ಪ್ರಕಾರ ದ್ವಾರಪಾಲಕನಿಂದ ಕತಲೂಖಾನನ ದೂತನು ಕರೆತರಲ್ಪಟ್ಟನು. ದೂತನು ಕತಲೂಖಾನನು ಕಳುಹಿದ್ದೊಂದು ಕಾಗದವನ್ನು ವೀರೇಂದ್ರನ ಕೈಯಲ್ಲಿ ಕೊಟ್ಟನು. ಕಾಗದದ ಅಭಿಪ್ರಾಯ ವೇನೆಂದರೆ:—"ವೀರೇಂದ್ರನು ಒಂದು ಸಾವಿರ ಕುದುರೆಯನ್ನೂ ಐದು ಸಾವಿರ ಸ್ವರ್ಣಮುದ್ರೆಯನ್ನೂ ಕತಲೂಖಾನನ ಶಿಬಿರಕ್ಕೆ ಕಳುಹಬೇಕೆಂದೂ ಹಾಗೆ ಕಳುಹದಿದ್ದರೆ, ಕತಲೂಖಾನನ ಇಪ್ಪತ್ತು ಸಾವಿರ ಸೈನ್ಯವು ಮುಂದಾರಣಕ್ಕೆ ಕೂಡಲೇ ಕಳುಹಿಸಲ್ಪಡುವುದೆಂದೂ" ಭಯಪ್ರದರ್ಶನಪೂರ್ವಕವಾಗಿ ಬರೆಯಲ್ಪಟ್ಟಿದ್ದಿತು. ವೀರೇಂದ್ರನಾ ಕಾಗದವನ್ನೋದಿಕೊಂಡು ದೂತನನ್ನು ಕುರಿತು: 'ದೂತ! ನಿನ್ನ ಪ್ರಭುವಿಗೆ ಸೈನ್ಯವನ್ನು ಕಳುಹಬಹುದೆಂದು ಹೇಳು' ಎಂದು ಹೇಳಿಕಳುಹಿದನು. ದೂತನು ನತಶಿರನಾಗಿ ಹೊರಟುಹೋದನು.

ವಿಮಲೆಯು ಮರೆಯಲ್ಲಿ ನಿಂತು ವೃತ್ತಾಂತವನ್ನೆಲ್ಲಾ ಆದ್ಯಂತವಾಗಿ ಕೇಳುತ್ತಿದ್ದಳು.

---

## ಏಳನೆಯ ಪರಿಚ್ಛೇದ

### ಅಸಾವಧಾನತೆ*

ಯಾವ ಭಾಗದಲ್ಲಿ ಅರಮನೆಯ ತಳಹದಿಯನ್ನು ತೊಳೆಯುತ ಆಮೋದರ ನದಿಯು ಕಲಕಲ ರವದಿಂದ ಪ್ರವಹಿಸುತ್ತಿದ್ದಿತೋ, ಅರಮನೆಯಾ ಭಾಗದಲ್ಲಿ ಮಹಡಿಯಮೇಲೆ ವಾತಾಯನದಲ್ಲಿ† ಕುಳಿತುಕೊಂಡು ತಿಲೋತ್ತಮೆಯು ನದಿಯ ಜಲಾವರ್ತವನ್ನು‡ ನೋಡುತ್ತಿದ್ದಳು. ಆಗ ಸಾಯಾಹ್ನ ಕಾಲವಾಗಿದ್ದಿತು. ಪಶ್ಚಿಮ ಗಗನದಲ್ಲಿ ಅಸ್ತಾಚಲಗತನಾಗಿದ್ದ ದಿನಮಣಿಯ ಮ್ಲಾನವಾದ ಕಿರಣಗಳಿಂದ ಸಂಸಕ್ತವಾಗಿ ಸ್ವರ್ಣಮಯವಾದ ಕಾಂತಿಯನ್ನು ತಾಳಿದ ಮೇಘಪಙ್ಕ್ತಿಗಳ ಸಮೇತ ಪ್ರಕಾಶಿಸುತ್ತಿದ್ದ ನೀಲಾಂಬರದ ಪ್ರತಿಬಿಂಬವು ಹರಿಯುತಿದ್ದ ನೀರಿನಲ್ಲಿ ಪ್ರತಿಬಿಂಬಿತವಾಗಿ ಅಲೆಗಳಿಂದ ಕಂಪಿತ ವಾಗುತ್ತಿದ್ದಿತು. ನದಿಯ ಆಚೆಯ ದಡದಲ್ಲಿದ್ದ ಎತ್ತರವಾದುಪ್ಪರಿಗೆಗಳೂ

---

* ಅಸಾವಧಾನತೆ=ಎಚ್ಚರಿಕೆಯಿಲ್ಲದಿರುವುದು, ಅಜಾಗ್ರತೆ. † ವಾತಾಯನ=ಕಿಟಿಕಿ, ಗವಾಕ್ಷ. ‡ ಜಲಾವರ್ತ=ನೀರಿನ ಸುಳಿ.

ಉನ್ನತವಾದ ತರು, ಲತೆ ಮುಂತಾದುವೂ ನಿರ್ಮಲಾಕಾಶಪಟದಲ್ಲಿ ಚಿತ್ರಿತವಾಗಿದ್ದಂತೆ ಪ್ರಕಾಶವಾಗುತ್ತಿದ್ದುವು. ದುರ್ಗದೊಳಗೆ ಮಯೂರ ಸಾರಸಾದಿ ಕಲರವವುಳ್ಳ ಪಕ್ಷಿಗಳು ಪ್ರಫುಲ್ಲ ಚಿತ್ತದಿಂದ ಮನೋಹರವಾದ ಧ್ವನಿಗಳನ್ನು ಮಾಡುತ್ತಿದ್ದುವು. ಅಲ್ಲಲ್ಲಿ ರಜನಿಯ ಪ್ರಾರಂಭದಲ್ಲಿ ಸ್ವಕೀಯವಾದ ಕೋಟರಾನ್ವೇಷಣದಲ್ಲಿ* ವ್ಯಸ್ತವಾದ† ವಿಹಂಗಮವು ನೀಲಾಂಬರದಲ್ಲಿ ಶಬ್ದ ವಿಹೀನವಾಗಿ ಹಾರಾಡುತ್ತಿದ್ದಿತು. ಆಮ್ರಕಾನನದಲ್ಲಿ ಸಂಚರಿಸಿ ಆಮೋದರ ನದಿಯ ನೀರಿನ ಸ್ಪರ್ಶದಿಂದ ಶೀತಲವಾಗಿಯೂ ಪರಿಮಳಯುಕ್ತವಾಗಿಯೂ ಇದ್ದ ಮಂದ ಮಾರುತವು ತಿಲೋತ್ತಮೆಯ ಅಲಕಕುಂತಲ‡ವನ್ನೂ ಅಂಸಾರೂಢ§ವಾದ ಚಾರುವಾಸಸ$ನ್ನೂ ಅಲುಗಾಡಿಸುತಿದ್ದಿತು.

ತಿಲೋತ್ತಮೆಯು ಅತ್ಯಂತ ಸುಂದರಿಯಾಗಿದ್ದಳು. ಪಾಠಕರಿಗೆ ಆ ಸುಂದರಿಯ ರೂಪಾನುಭವವನ್ನು ಮಾಡಿಕೊಡಬೇಕೆಂದು ನಾವು ಬಹಳ ಆಸೆ ಪಡುತ್ತೇವೆ. ಆದರೆ ಆ ರೂಪರಾಶಿಯನ್ನು ಇತರರಿಗೆ ಅನುಭವ ಮಾಡಿಕೊಡುವ ಬಗೆ ಹೇಗೆ? ಪಾಠಕ ಮಹಾಶಯರೆ! ನೀವು ನಿಮ್ಮ ಯೌವನ ಕಾಲದಲ್ಲಾವಳಾದರೂ ಸ್ಥಿರ ಪ್ರಕೃತಿಯುಳ್ಳವಳಾಗಿಯೂ ಕೋಮಲ ಪ್ರಕೃತಿಯುಳ್ಳವಳಾಗಿಯೂ ಇದ್ದ ಯುವತಿಯಲ್ಲಿ ನೂತನವಾಗಿ ಪ್ರಾದುರ್ಭವಿಸುತಿದ್ದ ಲಾವಣ್ಯವನ್ನು ಪ್ರೇಮಭರಿತವಾದ ಕಣ್ಣುಗಳಿಂದ ನೋಡಿರುವಿರಾ! ಆವಳ ರೂಪಲಾವಣ್ಯಗಳು ಸಕೃದ್ವೀಕ್ಷಣ¶ಮಾತ್ರದಿಂದ ಹೃದಯ ಕುಹರದಲ್ಲಿ ನೆಲೆಗೊಂಡು ವಿಸ್ಮೃತವಾಗಲಾರವೋ, ಆವ ಮನೋಮೋಹಿನಿಯ ಮೂರ್ತಿಯು ಕಿಶೋರ|| ವಯಸ್ಸಿನಲ್ಲಿಯೂ, ಯೌವನದಲ್ಲಿಯೂ, ಪ್ರಗಲ್ಭ ವಯಸ್ಸಿನಲ್ಲಿಯೂ, ಕಾರ್ಯದಲ್ಲಿಯೂ, ವಿಶ್ರಾಮದಲ್ಲಿಯೂ, ಜಾಗ್ರದವಸ್ಥೆಯಲ್ಲಿಯೂ, ನಿದ್ರಾವಸ್ಥೆಯಲ್ಲಿಯೂ ಪುನಃಪುನಃ ಸ್ಮೃತಿ ಮಾರ್ಗದಲ್ಲಿ ಸ್ವಪ್ನದಂತೆ ಸ್ಮರಣೆಗೆ ಬರುತ್ತ ಹೃದಯದಲ್ಲಿ ಯಾತಾಯಾತ£ ಮಾಡುತ್ತಿದ್ದರೂ, ತತ್ಸಂಬಂಧದಿಂದ ಚಿತ್ತಮಾಲಿನ್ಯವನ್ನುಂಟು ಮಾಡುವ ಆಲಸ್ಯವು ಹುಟ್ಟುವುದಿಲ್ಲವೋ ಅಂತಹ ರಮಣೀಮಣಿಯನ್ನು ನೋಡಿರುವಿರಾ? ಹಾಗೆ ನೋಡಿದ್ದರೇನೇ, ನಿಮ್ಮ ಮನಸ್ಸಿಗೆ ತಿಲೋತ್ತಮೆಯ ರೂಪಲಾವಣ್ಯಗಳು ಸ್ವಾನುಭೂತವಾಗುವುವು. ತಿಲೋತ್ತಮೆಯ ಆಕಾರವು ಸೌಂದರ್ಯಪ್ರಭಾಪ್ರಾಚುರ್ಯದಿಂದ ಮನಸ್ಸಿನಲ್ಲಿ ಕಾಮನಾ ಪ್ರಬೋಧಕವಾದುದಾಗಿರಲಿಲ್ಲ. ಅವಳಾ ಆಕಾರವು ಲೀಲಾಲಾವಣ್ಯಾದಿಗಳ ಪಾರಿಪಾಟ್ಯದಿಂದ ಹೃದಯ ಮಧ್ಯದಲ್ಲಿ ವಿಷದ ಹಲ್ಲನ್ನು ಊರತಕ್ಕುದಾಗಿರಲಿಲ್ಲ; ಅವಳ ಆಕಾರವು ಕೋಮಲತೆ ಮಾಧು

* ಕೋಟರಾನ್ವೇಷಣದಲ್ಲಿ = ಗೂಡನ್ನು ಹುಡುಕುವುದರಲ್ಲಿ. † ವ್ಯಸ್ತವಾದ = ಹಲುಬುವ, ಚಿಂತೆಯುಳ್ಳ. ‡ ಅಲಕಕುಂತಲ = ಮುಂಗುರುಳು. § ಅಂಸಾರೂಢ = ಭುಜದಮೇಲೆ ಬಿದ್ದಿದ್ದ. $ ಚಾರುವಾಸಸು = ಮನೋಹರವಾದ ಸೆರಗು. ¶ ಸಕೃದ್ವೀಕ್ಷಣ = ಒಂದುತಡವೆ ನೋಡುವುದು. || ಕಿಶೋರ = ಹದಿನೈದು ವರ್ಷಕ್ಕೆ ಕಡಿಮೆಯಾದ ವಯಸ್ಸು. £ ಯಾತಾಯಾತ = ಬಂದು ಹೋಗುವುದು.

ಯರ್ಾದಿ ಗುಣಗಳಿಂದ ಮನಸ್ಸನ್ನು ಸಂತೋಷಪಡಿಸುತ್ತಿದ್ದಿತು. ಅವಳಾ ಆಕಾರವು ಸಂಧ್ಯಾ ಸಮೀರಣ*ದಿಂದ ಕಂಪಿತವಾದ ವಸಂತಲತೆಯೋಪಾದಿಯಲ್ಲಿ ಮನದಲ್ಲಿ ಮೃದುವಾಗಿ ಚಲಿಸುವಂತಹುದಾಗಿದ್ದಿತು.

ತಿಲೋತ್ತಮೆಯು ವಯಸ್ಸಿನಲ್ಲಿ ಹದಿನಾರು ವರುಷದವಳಾಗಿದ್ದಳು; ಅದುಕಾರಣ ಅವಳ ದೇಹವು ಪೂರ್ಣಪ್ರಾಯದವಳಾದ ರಮಣಿಯ ದೇಹದಂತೆ ಸಂಪೂರ್ಣತೆಯನ್ನು ಹೊಂದಿರಲಿಲ್ಲ. ದೇಹಪ್ರಮಾಣದಲ್ಲಿಯೂ ಮುಖದಲ್ಲಿಯೂ ಸ್ವಲ್ಪ ಸ್ವಲ್ಪ ಬಾಲೆಯ ಭಾವವು ಕಂಡುಬರುತ್ತಿದ್ದಿತು. ಲಲಾಟವು ಸುಘಟಿತ ವಾಗಿಯೂ ಸುಂದರವಾದುದಾಗಿಯೂ ಇದ್ದಿತು; ಅಲ್ಪವಾಗಿರಲಿಲ್ಲ; ಅತಿ ವಿಶಾಲವಾಗಿಯೂ ಇರಲಿಲ್ಲ; ಅರ್ಧರಾತ್ರಿಯ ಬೆಳದಿಂಗಳಿಂದ ಶೋಭಾಯಮಾನ ವಾದ ನದಿಯೋಪಾದಿಯಲ್ಲಿ ಪ್ರಶಾಂತ ಭಾವಪ್ರಕಾಶಕವಾಗಿದ್ದಿತು. ಅವಳ ಲಲಾಟದ ಉಭಯ ಪಾರ್ಶ್ವಗಳಲ್ಲಿಯೂ ಅತಿನಿಬಿಡ ಕೃಷ್ಣವರ್ಣವುಳ್ಳ ಕುಂಚಿತವಾದ ಮುಂಗುರುಳು, ಭ್ರೂಯುಗ್ಮ, ಕಪಾಲ, ಗಂಡಸ್ಥಳ, ಭುಜ, ವಕ್ಷಸ್ಥಳ ಇವುಗಳಮೇಲೆ ಬಿದ್ದು ಅಲುಗಾಡುತ್ತಿದ್ದಿತು. ಮಸ್ತಕದ ಹಿಂಭಾಗದಲ್ಲಿ ಅಂಧಕಾರದಂತೆ ಕೇಶರಾಶಿಯು ತುರುಬುಕಟ್ಟಿ ಸೊಗಸಾದೊಂದು ಮುಕ್ತಾ ಹಾರದಿಂದ ಕಟ್ಟಲ್ಪಟ್ಟಿದ್ದಿತು. ಆ ಲಲಾಟದ ತಲದಲ್ಲಿ ಭ್ರೂಯುಗ್ಮವು ಧನುರಾ ಕಾರವಾಗಿ ನಿಬಿಡವರ್ಣವಾಗಿ ಚಿತ್ರಕಾರನಿಂದ ತಿದ್ದಲ್ಪಟ್ಟಿದ್ದಂತಿದ್ದಿತು. ಆದರೆ ಮತ್ತೊಂದು ತಿಲಾಂಶದಷ್ಟು ಸ್ಥೂಲವಾಗಿದ್ದರೆ ದೋಷರಹಿತವಾದುದಾಗಿರು ತ್ತಿದ್ದಿತು. ಪಾಠಕ ಮಹಾಶಯರೆ! ನಿಮಗೆ ಚಂಚಲ ದೃಷ್ಟಿಯಲ್ಲಿ ಆಸೆಯಿಲ್ಲವೆ? ಹಾಗಿದ್ದರೆ ನಿಮಗೆ ತಿಲೋತ್ತಮೆಯು ಮನೋರಂಜಿನಿಯಾಗಲಾರಳು. ತಿಲೋತ್ತಮೆಯ ಕಣ್ಣುಗಳು ಅತಿ ಶಾಂತವಾದುವು. ಮಿಂಚಿನಹಾಗೆ ಚಂಚಲ ಕಟಾಕ್ಷವುಳ್ಳವುಗಳಾಗಿರಲಿಲ್ಲ; ಅವಳ ಮುದ್ದಾದ ಕಣ್ಣುಗಳೆರಡೂ ಅತಿ ವಿಶಾಲ ವಾಗಿಯೂ ಶಾಂತವಾಗಿಯೂ ಜ್ಯೋತಿರ್ಮಯವಾಗಿಯೂ ಇರುವುವು. ಅವುಗಳ ವರ್ಣವಾದರೋ, ಉಷಃಕಾಲದಲ್ಲಿ ಸೂರ್ಯೋದಯಕ್ಕೆ ಸ್ವಲ್ಪ ಮೊದಲು ಚಂದ್ರಾಸ್ತ ಸಮಯದಲ್ಲಿ ಆಕಾಶವು ಧಾರಣೆಮಾಡುವ ವರ್ಣದಂತೆ ಕೋಮಲ ವಾದ ನೀಲವರ್ಣವಾಗಿದ್ದಿತು. ಈ ಪ್ರಕಾರ ಪ್ರಶಸ್ತವಾಗಿಯೂ ಕೋಮಲ ವಾಗಿಯೂ ಇದ್ದಾ ಕಣ್ಣುಗಳಿಂದ ತಿಲೋತ್ತಮೆಯು ಒಮ್ಮೆ ದೃಷ್ಟಿಸಿ ನೋಡಿದರೆ, ಆ ದೃಷ್ಟಿಯಲ್ಲಿ ಸ್ವಲ್ಪವಾದರೂ ಕಾಪಟ್ಯವು ತೋರದು. ತಿಲೋತ್ತಮೆಯು ಅಪಾಂಗದೃಷ್ಟಿಯಿಂದ ಎಂದರೆ, ಆರೆನೋಟದಿಂದ ನೋಡುವ ರೀತಿಯನ್ನರಿತಿರಲಿಲ್ಲ; ಅವಳಾ ದೃಷ್ಟಿಯ ಸರಳತೆಯು ಅವಳ ಮನಸ್ಸಿನ ಸರಳತೆಯನ್ನೂ ನಿಸ್ಸಂಶಯ ವಾದವಳ ನಿಷ್ಕಾಪಟ್ಯವನ್ನೂ ತೋರ್ಪಡಿಸುತ್ತಿದ್ದಿತು. ಆವನಾದರೂ ಅವಳ ಮುಖ ವನ್ನು ನೋಡಿದರೆ, ಅವಳಾಕೂಡಲೇ ಅಧೋಮುಖಿಯಾಗಿರುವಳು; ಇತರ

* ಸಮೀರಣ=ತಂಗಾಳಿ, ವಾಯು.

ವಿಧವಾಗಿ ದೃಷ್ಟಿಸಿ ನೋಡಳು. ನಾಸಿಕವು ಎಸಳಾಗಿ ಚಂಪಕಪುಷ್ಪಕ್ಕೆ ಸಮಾನ ವಾಗಿದ್ದಿತು. ಓಷ್ಠಾಧರಗಳೆರಡೂ ಎರಡು ಗುಲಾಬಿ ಹೂಗಳು ರಸದಲ್ಲಿ ಮುಳುಗಿ ತೇಲುವಂತೆ ಸ್ವಲ್ಪ ಚಿಕ್ಕವಾಗಿ ದುಂಡಾಗಿ ಮಂದಸ್ಮಿತಯುಕ್ತವಾಗಿರುವುವು. ಆ ಓಷ್ಠಾಧರಗಳಲ್ಲಿ ತಾದೃಶ ಮಂದಸ್ಮಿತವನ್ನು ನೋಡಿದವರಾದರೆ, ನೀವು ಯೋಗಿ ಯಾಗಿದ್ದರೂ, ಮುನಿಯಾಗಿದ್ದರೂ, ಯೌವನಸ್ಥರಾಗಿದ್ದರೂ, ವೃದ್ಧರಾಗಿದ್ದರೂ ಅದನ್ನೆಂದಿಗೂ ಮರೆಯಲಾರಿರಿ; ಆದರೂ ಆ ಮಂದಸ್ಮಿತದಲ್ಲಿ ಸರಳತೆಯೂ ಬಾಲೆಯ ಭಾವವೂ ಹೊರತು ಮತ್ತಾವ ಕೌಟಿಲ್ಯವೂ ಕಾಣುತಿರಲಿಲ್ಲ.

ತಿಲೋತ್ತಮೆಯ ಶರೀರವು ಅಂಗಸೌಷ್ಠವವುಳ್ಳದುದಾಗಿ ಸುಘಟಿತವಾಗಿ ದ್ದರೂ ಪೂರ್ಣತೆಯನ್ನು ಹೊಂದಿರಲಿಲ್ಲ. ವಯಸ್ಸು ಸಾಲದಿರುವುದರಿಂದಲೋ ಅಥವಾ ಶರೀರದ ಸ್ವಾಭಾವಿಕ ಸ್ಥಿತಿಯಿಂದಲೋ ಸುಂದರವಾದವಳಾ ದೇಹವು ಸೂಕ್ಷ್ಮವಾಗಿದ್ದಿತೇ ಹೊರತು ಸ್ಥೂಲವಾಗಿರಲಿಲ್ಲ. ಸೂಕ್ಷ್ಮವಾದಾ ಶರೀರದ ಎಲ್ಲಾ ಭಾಗವೂ ದುಂಡುದುಂಡಾಗಿ ಸುಲಲಿತವಾಗಿದ್ದಿತು. ದುಂಡಾದ ಕೈಗಳಲ್ಲಿ ರತ್ನವಲಯವೂ, ದುಂಡಾದ ಬಾಹುಗಳಲ್ಲಿ ವಜ್ರಖಚಿತವಾದ ಬಾಜೀಬಂದೂ, ದುಂಡಾದ ಬೆರಳಿನಲ್ಲಿ ಮುದ್ರೆಯುಂಗುರವೂ, ದುಂಡಾದ ಕಟಿಯಲ್ಲಿ ರತ್ನಮೇಖ ಲೆಯೂ, ಚಲುವಾದ ಭುಜಗಳಮೇಲೆ ಸ್ವರ್ಣಹಾರವೂ, ಸುಘಟಿತ ಕಂಠದಲ್ಲಿ ರತ್ನಕಂಠಿಯೂ ಪ್ರಕಾಶಿಸುತ್ತಿದ್ದುವು.

ತಿಲೋತ್ತಮೆಯು ಏಕಾಕಿನಿಯಾಗಿ ವಾತಾಯನದಲ್ಲಿ ಕುಳಿತೇನನ್ನು ಮಾಡುತ್ತಿರುವಳು? ಸಾಯಾಹ್ನದ ಗಗನದ ಕಾಂತಿಯನ್ನು ನೋಡುತ್ತಿರುವಳೆ? ಹಾಗಿದ್ದರೆ, ನೆಲದಮೇಲೆ ದೃಷ್ಟಿಯುಳ್ಳವಳಾಗಿರುವಳೇಕೆ? ನದಿಯ ತೀರದಲ್ಲಿ ಹುಟ್ಟಿರುವ ಕುಸುಮಗಳಿಂದ ಸುವಾಸಿತವಾದ ತಂಗಾಳಿಯನ್ನು ಸೇವಿಸುತ್ತಿರು ವಳೆ? ಹಾಗಿದ್ದರೆ ಮುಖದಮೇಲೆ ಬಿಂದು ಬಿಂದುವಾಗಿ ಬೆವರ್ನೀರು ಏನುಗುವು ದೇಕೆ? ಗೋವುಗಳು ಮೇಯುವುದನ್ನು ನೋಡುವಳೆ? ಅದಿರಲಾರದು; ಗೋವುಗಳೆಲ್ಲವೂ ಒಂದೊಂದಾಗಿ ಮನೆಗೆ ಬಂದಿವೆ. ಕೋಕಿಲೆಹಕ್ಕಿಯ ಕೊರಳನ್ನು ಕೇಳುವಳೆ? ಹಾಗಾದರೆ ಮುಖವು ಬಳಲಿರುವುದಕ್ಕೆ ಕಾರಣವೇನು? ತಿಲೋತ್ತಮೆಯು ಆವದನ್ನೂ ನೋಡುವುದಿಲ್ಲ; ಆವದನ್ನೂ ಕೇಳುವುದಿಲ್ಲ. ಚಿಂತೆಯನ್ನು ಮಾಡುತ್ತಿರುವಳು.

ದಾಸಿಯು ದೀಪವನ್ನು ತಂದಿಟ್ಟಳು. ತಿಲೋತ್ತಮೆಯು ಚಿಂತಿಸುವುದನ್ನು ಬಿಟ್ಟು, ಒಂದು ಪುಸ್ತಕವನ್ನು ತೆಗೆದುಕೊಂಡು ದೀಪದ ಬಳಿ ಬಂದು ಕುಳಿತು ಕೊಂಡಳು. ಅವಳಿಗೋದುವುದಕ್ಕೆ ಬರುವುದು. ಅಭಿರಾಮಸ್ವಾಮಿಯ ಬಳಿ ಸಂಸ್ಕೃತವನ್ನೋದಿದ್ದಳು. ಓದುತ್ತಿದ್ದ ಪುಸ್ತಕವು ಕಾದಂಬರಿ. ಸ್ವಲ್ಪ ಓದಿ ವಿರಕ್ತೆಯಾಗಿ ಕಾದಂಬರಿಯನ್ನೊತ್ತಟ್ಟು ಮಡಗಿದಳು. ಮತ್ತೊಂದು ಪುಸ್ತಕ ವನ್ನು ತೆಗೆದುಕೊಂಡಳು; ಅದು ಸುಬಂಧುಕೃತ ವಾಸವದತ್ತ; ಸ್ವಲ್ಪ

ಅದನ್ನೋದಿದಳು ; ಅನಂತರ ಸ್ವಲ್ಪ ಯೋಚಿಸಿದಳು ; ಪುನಃ ಓದಿದಳು ; ಪುನಃ ಯೋಚನೆಯಲ್ಲಿ ಮಗ್ನೆಯಾದಳು. ವಾಸವದತ್ತವೂ ಮನಸ್ಸಿಗೊಪ್ಪಲಿಲ್ಲ. ಅದನ್ನು ಬಿಟ್ಟು ಗೀತಗೋವಿಂದವನ್ನೋದುವುದಕ್ಕೆ ಪ್ರಾರಂಭಿಸಿದಳು. ಗೀತಗೋವಿಂದವು ಸ್ವಲ್ಪ ಆಹ್ಲಾದಕರವಾಗಿದ್ದಿತು. ಅದರಲ್ಲಿ, “ಮುಖರಮಧೀರಂ ತ್ಯಜಮಂಜೀರಂ ರಿಪುಮಿವ ಕೇಳಿಷು ಲೋಲಂ*” ಎಂಬೀ ಚರಣವನ್ನೋದಿ, ಲಜ್ಜಾಯುಕ್ತೆಯಾಗಿ ಸ್ವಲ್ಪ ನಕ್ಕು, ಪುಸ್ತಕವನ್ನು ಕೆಳಗಿಟ್ಟು ಬಳಿಕ ನಿಷ್ಕರ್ಮಳಾಗಿ ಶಯ್ಯೆಯಮೇಲೆ ಬಂದು ಕುಳಿತಳು. ಸಮೀಪದಲ್ಲೊಂದು ಲೇಖನಿಯೂ ಮತ್ತೊಂದು ಮಶಿಯ ಪಾತ್ರವೂ ಇದ್ದುವು. ಮನಸ್ಸು ಪರಾಧೀನವಾಗಿ ಮತ್ತೆಲ್ಲಿಯೋ ಹೋಗಿದ್ದಿತು. ಮರದವಳಾಗಿದ್ದಂತೆ ಲೇಖನಿಯನ್ನು ತೆಗೆದುಕೊಂಡು ಮಶಿಯಪಾತ್ರದಲ್ಲದ್ದಿ ಮಂಚದಮೇಲೆ ಅನ್ಯೈಚ್ಛಿಕವಾಗಿ ಒಂದಕ್ಕೊಂದು ಹೊಂದಿಕೆಯಿಲ್ಲದೆ ಬರೆಯಲಾರಂಭಮಾಡಿ, ಕ–ಮ–ಸ–ಕೊಠಡಿ ಬಾಗಿಲು–ಮ–ರ–ಸುಷ್ಯ ಎಂದು ಮುಂತಾಗಿ ಬರೆದಳು. ಅಸಂಬಂಧವಾದಾ ಲಿಪಿಗಳಿಂದ ಮಂಚದೊಂದು ಭಾಗವೆಲ್ಲಾ ತುಂಬಿ ಹೋಗಿ ಮಶೀಮಯವಾಗಿ ಹೆಚ್ಚು ಬರೆಯಲು ಸ್ಥಳವಿಲ್ಲದೆ ಹೋದುದರಿಂದ, ಎಚ್ಚರಗೊಂಡು, ಅದುವರೆಗೆ ತಾನು ಮಾಡಿದ ಕಾರ್ಯವನ್ನು ನೋಡಿ ಸ್ವಲ್ಪ ನಕ್ಕು, ಬರೆದಿದ್ದುದನ್ನೆಲ್ಲಾ ಓದುವುದಕ್ಕೆ ತೊಡಗಿದಳು. ಏನೆಂದು ಬರೆದಿದ್ದಳು ? ವಾಸವದತ್ತ—ಮಹಾಶ್ವೇತ–ಕ–ಈ–ಪ–ವೃಕ್ಷ–ಪದ್ಮ–ಶಿವ—ಗೀತಗೋವಿಂದ—ಬಳ್ಳಿ—ಎಲೆ–ಕೋಟೆ–ಮತ್ತೇನೆಂದು ಬರೆದಿದ್ದಳು ?

“ಕುಮಾರ ಜಗತ್ಸಿಂಹ” ಎಂದು—

ಅದನ್ನೋದುತ್ತಲೆ, ಲಜ್ಜೆಯಿಂದ ತಿಲೋತ್ತಮೆಯ ಮುಖವು ರಕ್ತವರ್ಣವಾಯಿತು. ಹುಚ್ಚು ಹುಡುಗಿ! ಲಜ್ಜೆಪಡುವುದಕ್ಕೆ ಚಿಕ್ಕಮನೆಯಲ್ಲಾರಿದ್ದರು ?

“ಕುಮಾರ ಜಗತ್ಸಿಂಹ”, “ಕುಮಾರ ಜಗತ್ಸಿಂಹ” ಎಂದು ಒಂದಾವರ್ತಿ, ಎರಡಾವರ್ತಿ, ಮೂರಾವರ್ತಿ, ಅನೇಕಾವರ್ತಿ ಓದಿದಳು. ಬಾಗಿಲಕಡೆ ನೋಡಿ ಪುನಃ ಓದಿದಳು ; ಪುನಃ ನೋಡಿ, ಪುನಃ ಓದಿದಳು —ಕಳ್ಳನು ಕಳವು ಮಾಡುವಾಗ ನೋಡುವ ಹಾಗೆ—

ಆರಾದರೂ ಬಂದರೆ ಕಂಡುಬಿಡುವರೆಂಬ ಭಯದಿಂದ ಹೆಚ್ಚು ಹೊತ್ತು ಓದಲು ಸಾಹಸವುಳ್ಳವಳಾಗಲಿಲ್ಲ. ಬೇಗನೆ ನೀರನ್ನು ತಂದು ಲಿಪಿಯನ್ನೆಲ್ಲಾ ತೊಳೆದಳು. ತೊಳೆದರೂ ಮನಸ್ಸಿನಲ್ಲಿ ಧೈರ್ಯವುಂಟಾಗಲಿಲ್ಲ ; ಬಟ್ಟೆಯಿಂದೊರಸಿದಳು. ಪುನಃ ಮಶಿಯ ಗುರುತುಳಿದಿರಬಹುದೆಂಬ ಶಂಕೆಯಿಂದ ಕಣ್ಣಿರಿಸಿ ನೋಡಿದಳು. ಚಿಹ್ನೆಗಳಾವವೂ ಇರಲಿಲ್ಲ ; ಆದರೂ ಬರೆದಿದ್ದುದೋದುವುದ

---

* Thy sounding bangles, wench, resign,
Lest they the tell tales play.
Thy foes they are, sweet lady mine,
For dal'ance restless they.

ಕ್ಕಾಗುವಂತೆ ತೋರಿತು. ಪುನಃ ನೀರನ್ನು ತಂದು ತೊಳೆದು ಬಟ್ಟೆಯಿಂದೊರಸಿದಳು. ಆದರೂ ಬರೆದಿದ್ದುದು ಬರೆದಿದ್ದಹಾಗೆ ಕಾಣಿಸಿತು, ಏನೆಂದು ?

“ಕುಮಾರ ಜಗತ್ಸಿಂಹ” ಎಂದು.

---

## ಎಂಟನೆಯ ಪರಿಚ್ಛೇದ

## **ವಿಮಲೆಯ ಆಲೋಚನೆ**

ವಿಮಲೆಯು ಅಭಿರಾಮಸ್ವಾಮಿಯ ಕುಟೀರದಲ್ಲಿ ನಿಂತಿದ್ದಳು. ಅಭಿರಾಮಸ್ವಾಮಿಯು ನೆಲದಮೇಲೆ ಯೋಗಾಸನದಲ್ಲಿ ಕುಳಿತಿದ್ದನು. ವಿಮಲೆಯು ತಾನೂ ತಿಲೋತ್ತಮೆಯೂ ಜಗತ್ಸಿಂಹನ ಸಂದರ್ಶನಮಾಡಿದಾಗ ನಡೆದ ಸಂಗತಿಗಳನ್ನೆಲ್ಲಾ ಆದ್ಯಂತವಾಗಿ ಅಭಿರಾಮಸ್ವಾಮಿಗೆ ವರ್ಣಿಸಿ ಹೇಳಿ, ಅನಂತರ ‘ಇಂದಿಗೆ ಹದಿನಾಲ್ಕನೆಯ ದಿನ, ನಾಳೆಗೆ ಪಕ್ಷಪೂರ್ಣವಾಗುವುದು’ ಎಂದು ಹೇಳಿದಳು. ಅದನ್ನು ಕೇಳಿ ಅಭಿರಾಮಸ್ವಾಮಿಯು, ‘ನೀವೀಗ ಮಾಡಿರುವ ಸಂಕಲ್ಪವೇನು ?’ ಎಂದು ಕೇಳಿದನು.

ವಿಮಲೆಯು, ‘ಓಸರಿಸಿದಾಲೋಚನೆಗೆ* ಸಲುವಾಗಿ ತಮ್ಮ ಬಳಿಗೆ ಬಂದೆನು’ ಎಂದಳು. ಅಭಿರಾಮಸ್ವಾಮಿಯು, ‘ನನ್ನ ಅಭಿಪ್ರಾಯದಲ್ಲೀ ವಿಷಯವನ್ನು ಕುರಿತು ಪುನಃ ಆಲೋಚಿಸದಿರಬೇಕೆಂಬುದೇ ಉತ್ತಮ ಬುದ್ಧಿವಾದ’ವೆಂದು ಹೇಳಿದನು.

ವಿಮಲೆಯು ವಿಷಣ್ಣವದನೆಯಾಗಿ ನಿಂತಳು. ಅಭಿರಾಮಸ್ವಾಮಿಯು ವ್ಯಾಕುಲವೇಕೆಂದು ಕೇಳಿದನು. ಅದಕ್ಕೆ ವಿಮಲೆಯು, ‘ತಿಲೋತ್ತಮೆಗೆ ಮುಂದೇನುಪಾಯ ಮಾಡಬೇಕು ?’ ಎಂದಳು.

ಅಭಿರಾಮಸ್ವಾಮಿಯು ವಿಸ್ಮಿತನಾಗಿ, ‘ತಿಲೋತ್ತಮೆಯ ಹೃದಯದಲ್ಲಾಗಲೇ ಅನುರಾಗವು ಹುಟ್ಟಿರುವುದೆ?’ ಎಂದು ಕೇಳಿದನು.

ವಿಮಲೆಯು ಸ್ವಲ್ಪ ಮೌನವಾಗಿದ್ದು ಅನಂತರ, ‘ತಮಗೆ ಮತ್ತೆಷ್ಟೆಂದು ವಿಜ್ಞಾಪಿಸಲಿ? ನಾನೀ ಹದಿನಾಲ್ಕು ದಿನಗಳಿಂದ ಅಹೋರಾತ್ರ ತಿಲೋತ್ತಮೆಯ ಭಾವಗತಿಕಗಳನ್ನು ನೋಡುತ್ತಿದ್ದೇನೆ. ನನ್ನ ಮನಸ್ಸಿಗೆ ತಿಲೋತ್ತಮೆಯ ಹೃದಯದಲ್ಲಿ ಅತಿ ಪ್ರಗಾಢವಾದನುರಾಗೋದಯವಾಗಿರುವಂತೆ ಬೋಧೆಯಾಗುತ್ತದೆ’ ಎಂದಳು.

ಪರಮಹಂಸನು ಸ್ವಲ್ಪ ನಗುಮುಖನಾಗಿ, ‘ನೀವು ಹೆಂಗಸರು, ಮನದಲ್ಲನುರಾಗದ ಚಿಹ್ನೆಯು ತಲೆದೋರಿದ ಮಾತ್ರಕ್ಕೆ ಅದನ್ನತಿಯಾಗಿ ಮಾಡಿ, ಪ್ರಗಾಢವಾದನುರಾಗವೆಂದು ಹೇಳುವಿರಿ; ವಿಮಲೆ! ತಿಲೋತ್ತಮೆಯ ಮುಂದಿನ ಸುಖ

* ಓಸರಿಸಿದಾಲೋಚನೆ = ತರ್ಕ ಅಥವಾ ಸಂಯಮಾದಾಲೋಚನೆ.

ಸೌಭಾಗ್ಯ ವಿಚಾರದಲ್ಲಾಲೋಚಿಸಬೇಡ. ಬಾಲಿಕಾ ಸ್ವಭಾವ ಪ್ರಯುಕ್ತ ಪ್ರಥಮ ಸಂದರ್ಶನದಿಂದ ಮನಸ್ಸಿಗೆ ಚಾಂಚಲ್ಯವುಂಟಾಗಿರಬಹುದು. ಆ ವಿಷಯವನ್ನು ಕುರಿತಾವ ಮಾತನ್ನೂ ಹೇಳದಿದ್ದರೆ ಶೀಘ್ರವಾಗಿ ಜಗತ್ಸಿಂಹನನ್ನು ಮರೆತು ಬಿಡುವಳು' ಎಂದನು.

ವಿಮಲೆಯು, 'ಹಾಗಿಲ್ಲ ಪ್ರಭುವೆ! ಆ ಲಕ್ಷಣಗಳು ಕಾಣುವುದಿಲ್ಲ; ಈ ಎರಡು ವಾರಗಳಲ್ಲಿ ತಿಲೋತ್ತಮೆಯ ಸ್ವಭಾವವು ತೀರಾ ಮಾರುಪಟ್ಟು ಹೋಗಿದೆ; ತಿಲೋತ್ತಮೆಯು ನನ್ನೊಂದಿಗಾಗಲಿ, ಸ್ನೇಹಿತರೊಂದಿಗಾಗಲಿ ಮೊದಲಿನಹಾಗೆ ನಗುತ್ತ ಮಾತನಾಡುವುದಿಲ್ಲ. ಎಲ್ಲದರಲ್ಲಿಯೂ ವಿರಕ್ತೆಯಾಗಿದ್ದಾಳೆ; ಪ್ರಾಯಃ ಮಾತನ್ನೇ ಬಿಟ್ಟಿದ್ದಾಳೆ; ಅವಳ ಪುಸ್ತಕಗಳೆಲ್ಲಾ ಮಂಚದಡಿ ಬಿದ್ದು ಮುಗ್ಗುತ್ತವೆ. ಅವಳು ಲೀಲಾರ್ಥವಾಗಿ ಹಾಕಿದ್ದ ಪುಷ್ಪಲತೆಗಳೆಲ್ಲಾ ಜಲಾಭಾವದಿಂದೊಣಗುತ್ತವೆ; ಅವಳ ಪಕ್ಷಿಗಳೆಲ್ಲವೂ ಆಡಿಸುವರಿಲ್ಲದೆ ನಿರುತ್ಸಾಹಿಗಳಾಗಿವೆ; ಅವಳು ಸ್ವತಃ ಆಹಾರವನ್ನು ತೆಗೆದುಕೊಳ್ಳುವುದಿಲ್ಲ; ರಾತ್ರಿ ನಿದ್ರೆ ಹೋಗುವುದಿಲ್ಲ; ಅಲಂಕಾರಾದಿಗಳನ್ನು ಧರಿಸುವುದಿಲ್ಲ; ಹಿಂದೆಂದೂ ಚಿಂತೆಯಿಲ್ಲದಿದ್ದವಳು ರಾತ್ರಿ ಹಗಲು ಚಿಂತೆಯಲ್ಲಿ ಮುಣುಗಿದ್ದಾಳೆ' ಎಂದು ವಿವರವಾಗಿ ಹೇಳಿದಳು.

ಅಭಿರಾಮಸ್ವಾಮಿಯು ಕೇಳಿ ಸ್ತಬ್ಧನಾಗಿದ್ದು, 'ಬಳಿಕ, ದರ್ಶನ ಮಾತ್ರದಿಂದ ಗಾಢಾನುರಾಗವುಂಟಾಗದೆಂದು ತೋರುತ್ತದೆ; ಆದರೆ ನೀನೇನನ್ನುಮಾಡಬಲ್ಲೆ? ವೀರೇಂದ್ರನು ಆ ಸಂಬಂಧವನ್ನು ಮಾಡುವ ವಿಚಾರದಲ್ಲಿ ಸಮ್ಮತನಾಗನು' ಎಂದು ಹೇಳಿದನು.

ವಿಮಲೆಯು, 'ನಾನಾ ಅನುಮಾನದಿಂದಲೇ ಇದುವರೆಗೂ ಆ ಪ್ರಸ್ತಾಪವನ್ನೆತ್ತಲಿಲ್ಲ! ಶೈಲೇಶ್ವರನ ದೇವಾಲಯದಲ್ಲಿ ಜಗತ್ಸಿಂಹನಿಗೆ ನಮ್ಮ ಪರಿಚಯವನ್ನೂ ಹೇಳಿಲ್ಲ; ಆದರೆ, ನಮ್ಮ ಸಿಂಹಮಹಾಶಯರು (**ಈ ಮಾತನ್ನು ಹೇಳುವಾಗ ವಿಮಲೆಯ ಮುಖದಲ್ಲಿ ಸ್ವಲ್ಪ ಭಾವಾಂತರೋದಯವಾಯಿತು**)—ನಮ್ಮ ಸಿಂಹಮಹಾಶಯರು ಮಾನಸಿಂಹನೊಂದಿಗೆ ಮಿತ್ರತ್ವವನ್ನು ಬೆಳೆಯಿಸಿದರೆ, ಜಗತ್ಸಿಂಹನು ಅವರಿಗೆ ಜಾಮಾತೃನಾಗುವುದರಲ್ಲಿ ಹಾನಿಯೇನು?' ಎಂದಳು.

ಅಭಿರಾಮಸ್ವಾಮಿ—ಮಾನಸಿಂಹನು ಸಮ್ಮತಿಸುವನೇಕೆ?

ವಿಮಲೆ—ಹಾಗೆ ಸಮ್ಮತನಾಗದಿದ್ದರೆ, ಯುವರಾಜನು ಸ್ವತಂತ್ರನಾಗಿ ವರ್ತಿಸುವನು.

ಅಭಿರಾಮಸ್ವಾಮಿ—ಜಗತ್ಸಿಂಹನು ವೀರೇಂದ್ರನ ಮಗಳನ್ನು ಮದುವೆಯಾಗುವನೇಕೆ?

ವಿಮಲೆ—ಕುಲಸಂಬಂಧದ ದೋಷವೆಲ್ಲಿಲ್ಲ? ಜಯಧರಸಿಂಹನ ಪೂರ್ವಪುರುಷರೂ ಯದುವಂಶದವರಾಗಿದ್ದಾರೆ.

ಅಭಿರಾಮಸ್ವಾಮಿ—ಯದುವಂಶದ ಕನ್ನೆಯು ಮುಸಲ್ಮಾನನ ಶ್ಯಾಲಕ ಪುತ್ರನ ವಧುವಾಗಬಹುದೆ?

ವಿಮಲೆಯು ಉದಾಸೀನನನ್ನು* ಸ್ಥಿರದೃಷ್ಟಿಯಿಂದ ನೋಡಿ, 'ಆಗಬಾರ ದೇಕೆ? ಯದುವಂಶಕ್ಕಿಂತ ಮತ್ತಾವ ವಂಶತಾನೇ ಹೀನವಾದುದು?' ಎಂದಳು.

ಆ ಮಾತನ್ನು ಕೇಳುತ್ತಲೇ ಕ್ರೋಧದಿಂದ ಸಂನ್ಯಾಸಿಯ ಕಣ್ಣುಗಳು ಕೆರಳಿ ಕೆಂಪಾಗಿ, ಮಹಾಕಠೋರ ಸ್ವರದಿಂದವನು, 'ಪಾಪಿಯಸಿ, ನೀನು ನಿನ್ನ ಮಂದಭಾಗ್ಯವನ್ನು ಮರೆತಿಲ್ಲ; ದೂರ ಹೋಗು' ಎಂದನು.

---

## ಒಂಬತ್ತನೆಯ ಪರಿಚ್ಛೇದ

### ಕುಲತಿಲಕ

ಜಗತ್ಸಿಂಹನು ತಂದೆಯ ಅಪ್ಪಣೆಯನ್ನು ಪಡೆದು ಸಸೈನ್ಯನಾಗಿ ಬಂದು ನಡಿಯಿಸಿದ ಕಾರ್ಯಗಳಿಂದ ಪಠಾನರ ಸೈನ್ಯದಲ್ಲಿ ಮಹಾಭೀತಿ ಯುಂಟಾಯಿತು. ಕುಮಾರನು ಐದುಸಾವಿರ ಸೈನ್ಯದಿಂದ ಕತಲೂಖಾನನ ಐವತ್ತು ಸಾವಿರ ಸೈನ್ಯವನ್ನು ಸುವರ್ಣರೇಖೆಯ ತೀರದ ಆಚೆಗೋಡಿಸಿಬಿಡುವುದಾಗಿ ಪ್ರತಿಜ್ಞೆಯನ್ನು ಮಾಡಿದ್ದನು. ಆದರೆ ಅಷ್ಟು ದೂರ ಕೃತಕಾರ್ಯನಾಗಲು ಸಾಧ್ಯ ವಾಗಲಿಲ್ಲ. ಆದರೂ, ಆತನು ತಂದೆಯ ಶಿಬಿರದಿಂದ ಬಂದು ಒಂದೆರಡು ವಾರಗಳಲ್ಲಿ ತೋರಿದ ಪ್ರಖ್ಯಾತವಾದ ಯೋದ್ಧೃಪತಿತ್ವದ ಗುಣಾತಿಶಯಗಳನ್ನು ಕೇಳಿ ತಂದೆ ಯಾದ ಮಾನಸಿಂಹನು, "ನಮ್ಮ ಕುಮಾರನಿಂದ, 'ರಾಜಪೂತ'ವೆಂಬ ಹೆಸರಿನ ಪೂರ್ವಗೌರವವು ಪುನರುದ್ದೀಪ್ತವಾಗುವುದರಲ್ಲಿ ಸಂದೇಹವಿಲ್ಲ"ವೆಂದು ಹೇಳಿದನು.

ಜಗತ್ಸಿಂಹನು ಐದು ಸಾವಿರ ಸೈನ್ಯದಿಂದ ಐವತ್ತು ಸಾವಿರ ದಂಡಿನೆದುರಿಗೆ ನಿಂತು ಯುದ್ಧಮಾಡಿ ಶತ್ರುಪರಾಜಯಮಾಡುವುದಸಾಧ್ಯವೆಂದೂ, ಹಾಗೆ ಯುದ್ಧಮಾಡಿದರೆ ತನಗೆ ಪರಾಜಯ ಅಥವಾ ಮೃತ್ಯು ಸಂಭವಿಸುವುದೇ ನಿಶ್ಚಯ ವೆಂದೂ ಚೆನ್ನಾಗಿ ತಿಳಿದಿದ್ದನು. ಅತಏವ, ಸಮ್ಮುಖ ಸಂಗ್ರಾಮಕ್ಕೆ ಯತ್ನ ಪಡದೆ ಸಮ್ಮುಖ ಸಂಗ್ರಾಮವು† ಸಂಭವಿಸದಹಾಗೆ ರಣಪ್ರಣಾಳಿಯನ್ನವಲಂಬಿಸಿ, ತನ್ನ ಚಿಕ್ಕದಾದ ಸೈನ್ಯವನ್ನಾವಾಗಲೂ ಮರೆಯಲ್ಲಿಟ್ಟಿರುವನು. ನಿಬಿಡವಾದ ವನಮಧ್ಯ ದಲ್ಲಾಗಲೀ, ಸಮುದ್ರದ ಅಲೆಗಳಹಾಗೆ ಏರು ತಗ್ಗಾದ ಪ್ರದೇಶಗಳಲ್ಲಾಗಲೀ ಸೈನ್ಯ ಸಮೇತನಾಗಿ ಅಡಗಿರುವನು. ಆ ಪ್ರದೇಶಗಳು ಅನ್ಯರು ಸಮೀಪಕ್ಕೆ ಬಂದು ನೋಡಿದರೂ ಎತ್ತರವಾದ ದಿಣ್ಣೆಗಳ ಅಂತರಾಯದಿಂದ ಅಲ್ಲಿ ಉಳಿದಿರುವವರು ಕಾಣದಹಾಗೆ ಮರೆಯಾಗಿರುವುವು. ಅಂತಹ ಸ್ಥಳದಲ್ಲಿದ್ದು ಸ್ವಲ್ಪ ಸ್ವಲ್ಪ ಸಂಖ್ಯಾಕ ಪಠಾನರ ದಳಗಳನ್ನು ಸಂಧಾನಮಾಡಿ, ಸಮುದ್ರದ ತರಂಗವು ಬಂದು ಬೀಳುವಂತೆ

* ಉದಾಸೀನನನ್ನು = ಸಂನ್ಯಾಸಿಯನ್ನು. † ಸಂಗ್ರಾಮ = ಯುದ್ಧ.

ಅತಿವೇಗದಿಂದ ಸಸೈನ್ಯನಾಗಿ ಹೋಗಿ ಅವರಮೇಲೆ ಬಿದ್ದು ಅವರನ್ನೊಂದೇ ತಡವೆಗೆ ನಿಶ್ಶೇಷರನ್ನಾಗಿ ಮಾಡಿಬಿಡುವನು. ಅವನ ಸಂಗಡ ಅನೇಕ ಅನುಚರರಿದ್ದವರು ಫಲಮೂಲ ಮತ್ಸ್ಯಾದಿಗಳನ್ನು ಮಾರುವವರ ಹಾಗೂ, ಭಿಕ್ಷುಕ, ಉದಾಸೀನ, ಬ್ರಾಹ್ಮಣ, ವೈದ್ಯ ಮುಂತಾದವರ ಹಾಗೂ ವೇಷಧಾರಿಗಳಾಗಿ ಅನೇಕ ಸ್ಥಳಗಳಿಗೆ ಹೋಗಿ, ಪಠಾನರ ಸೇನೆಯ ಬಲಾಬಲ ಗತಿವಿಧಿ ಮುಂತಾದುವುಗಳ ಸಂಧಾನವನ್ನು ಮಾಡಿಕೊಂಡು ಬಂದು ಜಗತ್ಸಿಂಹನಿಗೆ ತಿಳಿಸುವರು. ವರ್ತಮಾನವು ಬರುತ್ತಲೇ ಜಗತ್ಸಿಂಹನು ಜಾಗರೂಕತೆಯಿಂದ ಜಾಗ್ರತೆಯಾಗಿ ಹೋಗಿ ಪಠಾನರು ಬರುವ ಮಾರ್ಗದಲ್ಲಿ ಸೈನ್ಯವನ್ನಿಟ್ಟಿದ್ದು, ಅವರು ಬಂದ ಕೂಡಲೇ ಅವರಿಗೆ ತಿಳಿಯದೆ ಹೋಗಿ ಕೌಶಲದಿಂದವರನ್ನು ಆಕ್ರಮಣಮಾಡುವನು. ಪಠಾನರ ಸಂಖ್ಯೆಯು ಅಧಿಕವಾಗಿದ್ದರೆ, ಅವರಮೇಲೆ ಬೀಳುತ್ತಿರಲಿಲ್ಲ; ಏಕೆಂದರೆ, ಅವನ ಪ್ರಕೃತಾವಸ್ಥೆಯಲ್ಲಿ, ಯುದ್ಧದಲ್ಲಿ ಪರಾಜಿತನಾದರೆ, ತನಗೆಲ್ಲವೂ ನಷ್ಟವಾಗುವ ಸಂಭವವೆಂದು ಚೆನ್ನಾಗಿ ತಿಳಿದಿದ್ದನು. ಅಂತಹ ಸಂದರ್ಭಗಳಲ್ಲಿ ಪಠಾನರ ಸೇನೆಯು ಮುಂದಕ್ಕೆ ಸಾಗಿಹೋಗುವತನಕ ಕಾದಿದ್ದು ಬಳಿಕ ಜಾಗರೂಕತೆಯಿಂದವರ ಹಿಂದೆ ಹೋಗಿ ಅವರ ಆಹಾರಾದಿಗಳನ್ನೂ, ಅಶ್ವ ಫಿರಂಗಿ ಮುಂತಾದುವನ್ನೂ ಅಪಹರಿಸಿಕೊಂಡು ಬಂದು ಬಿಡುವನು. ಪಠಾನರ ಸೈನ್ಯವು ಪ್ರಬಲವಾದುದಾಗಿಲ್ಲದೆ ಅಲ್ಪ ಸಂಖ್ಯೆಯುಳ್ಳದುದಾಗಿದ್ದರೆ, ಅದು ಅನುಕೂಲವಾದ ಸ್ಥಳಕ್ಕೆ ಬರುವ ಪರ್ಯಂತ ಮರೆಯಲ್ಲಿ ಕಾದಿದ್ದು ಅನಂತರ ಸಮಯವರಿತು ಕ್ಷುಧಿತ ವ್ಯಾಘ್ರದೋಪಾದಿಯಲ್ಲಿ ಚೀತ್ಕಾರ ಮಾಡುತ್ತಾ ಓಡಿಹೋಗಿ ಹತಭಾಗ್ಯರಾದಾ ಪಠಾನರನ್ನು ಖಂಡ ಖಂಡವಾಗಿ ಕೈಡಹೊಯ್ದುಬಿಡುವನು. ಅವರಿಗೆ ಶತ್ರುವು ಸಮೀಪದಲ್ಲಿದ್ದುದು ಗೊತ್ತಾಗದೆ ಯುದ್ಧಕ್ಕೆ ಸನ್ನದ್ಧರಾಗದೆ ಅಕಸ್ಮಾತ್ತಾಗಿ ಶತ್ರು ಪ್ರವಾಹದ ಮುಖದಲ್ಲಿ ಬಿದ್ದು ಪ್ರಾಯಃ ಯುದ್ಧವಿಲ್ಲದೆ ಪ್ರಾಣವನ್ನು ಬಿಡುವರು.

ಈ ಪ್ರಕಾರ ಅನೇಕ ಪಠಾನರ ಸೈನ್ಯವು ನಿಪಾತವಾಗಿ ಹೋಯಿತು. ಪಠಾನರು ಅತ್ಯಂತ ವ್ಯಸ್ತಚಿತ್ತರಾಗಿ, ಸಮ್ಮುಖ ಸಂಗ್ರಾಮದಲ್ಲಿ ಜಗತ್ಸಿಂಹನ ಸೈನ್ಯವನ್ನು ವಿನಷ್ಟಮಾಡುವುದಕ್ಕೋಸ್ಕರ ವಿಶೇಷ ಪ್ರಯತ್ನವಿಶಿಷ್ಟರಾದರೂ ಜಗತ್ಸಿಂಹನ ಸೈನ್ಯವಿರುವ ಸ್ಥಳದ ಸಂಧಾನವನ್ನು ಮಾಡಲಾರದವರಾಗಿದ್ದರು. ಜಗತ್ಸಿಂಹನ ಸೈನ್ಯದವರು ಕೇವಲ ಯಮದೂತರಂತೆ ಪಠಾನ ಸೈನಿಕರ ಮೃತ್ಯುಕಾಲದಲ್ಲಿ ಬಂದು ಮುಖತೋರಿ ಮೃತ್ಯುಕಾರ್ಯವನ್ನು ಪೂರೈಸಿಕೊಂಡು ಅಂತರ್ಧಾನವಾಗಿ ಹೋಗಿಬಿಡುವರು. ಜಗತ್ಸಿಂಹನು ಚತುರತಮನಾಗಿದ್ದನು. ತನ್ನ ಐದು ಸಾವಿರ ಸೈನ್ಯವನ್ನು ಒಂದೇ ಸ್ಥಳದಲ್ಲಿಡುತ್ತಿರಲಿಲ್ಲ. ಒತ್ತಟ್ಟು ಸಹಸ್ರ ಪದಾತಿಗಳು, ಬೇರೆ ಕಡೆ ಐನೂರು ಮಂದಿ, ಇನ್ನೂರು ಮಂದಿ, ಮತ್ತೊಂದು ಕಡೆ ಎರಡು ಸಾವಿರ ಈ ರೀತಿಯಾಗಿ ವಿಭಾಗಮಾಡಿ, ಶತ್ರುವಿನ

ಸಂಧಾನ ಸಿಕ್ಕೆಡೆಗೆ ತನ್ನ ಸೈನ್ಯವನ್ನು ಕಳುಹಿಸುವನು. ಕಾರ್ಯವಾದ ಬಳಿಕ ಪುನಃ ಆ ಜನಗಳನ್ನಲ್ಲಿಡುತ್ತಿರಲಿಲ್ಲ. ರಜಪೂತರೆಲ್ಲಿದ್ದಾರೆ, ಎಲ್ಲಿಲ್ಲವೆಂಬುದನ್ನು ಪಠಾಣರು ಗೊತ್ತುಮಾಡಲಾರದೆ ಹೋದರು. ಕತಲೂಖಾನನಿಗೆ ಪ್ರತಿದಿನವೂ ತನ್ನ ಸೈನ್ಯವಿನಾಶದ ಸಮಾಚಾರವೇ ಬರುತಿದ್ದಿತು; ಬೆಳಿಗ್ಗೆ ಮಧ್ಯಾಹ್ನ ಆವಾಗಲೂ ಅಮಂಗಳ ಸಮಾಚಾರವೇ ಬರುತಿದ್ದಿತು; ಫಲತಃ, ಆವ ಕೆಲಸವಿದ್ದರೂ ಪಠಾಣರು ಅಲ್ಪಸಂಖ್ಯೆಯ ದಳದಿಂದ ಕೋಟೆಯನ್ನು ಬಿಟ್ಟು ಹೊರಗೆ ಬರುವುದೇ ದುಸ್ಸಾಧ್ಯವಾಯಿತು; ಕೊಳ್ಳೆಹೊಡೆಯುವುದು ಒಮ್ಮೆಗವಾಗಿ ನಿಂತುಹೋಯಿತು; ಸೇನೆಯವರೆಲ್ಲಾ ದುರ್ಗಗಳನ್ನು ಸೇರಿಕೊಂಡರು. ಆಹಾರವನ್ನು ತಂದುಕೊಳ್ಳುವುದವರಿಗೆ ಕಷ್ಟಕ್ಕೆ ಬಂದಿತು. ಶತ್ರುಪೀಡಿತವಾಗಿದ್ದ ದೇಶವು ಸುಖವಾಗಿರುವ ಸಮಾಚಾರವನ್ನು ಕೇಳಿ, ಮಹಾರಾಜಾ ಮಾನಸಿಂಹನು ಮಗನಿಗೆ ಕಾಗದ ಬರೆದನೇನೆಂದರೆ:—

"ಕುಲತಿಲಕ! ನಿನ್ನ ಪರಾಕ್ರಮದಿಂದ ರಾಜ್ಯಾಧಿಕಾರವು ಪಠಾನ ಶೂನ್ಯವಾಯಿತೆಂದು ತಿಳಿದೆನು. ಅದುಕಾರಣ ನಿನ್ನ ಸಹಾಯಾರ್ಥವಾಗಿ ಮತ್ತೂ ಹತ್ತುಸಾವಿರ ಸೈನ್ಯವನ್ನು ಕಳುಹಿಸಿರುತ್ತೇನೆ."

ಯುವರಾಜನದಕ್ಕೆ ಪ್ರತ್ಯುತ್ತರವನ್ನು ಬರೆದನು :—

"ಮಹಾರಾಜರವರ ಅಭಿಪ್ರಾಯವು ಹೇಗೋ ಹಾಗಾಗಬಹುದು. ಹೆಚ್ಚು ಸೈನ್ಯವು ಬಂದರೆ ಅನುಕೂಲವೇ ಆಯಿತು. ಒಂದುವೇಳೆ ಬಾರದಿದ್ದರೂ ಈ ಭೃತ್ಯನು ಐದು ಸಾವಿರದ ಬಲದಿಂದಲೇ ಕ್ಷತ್ರಿಯಕುಲೋಚಿತ ಪ್ರತಿಜ್ಞೆಯನ್ನು ಪಾಲನೆಮಾಡುವನು."

ಕುಮಾರನು ಸ್ವವೀರ್ಯದಿಂದ ಮತ್ತನಾಗಿ ನಿರ್ಬಾಧಕವಾಗಿ ರಣಕ್ಷೇತ್ರದಲ್ಲಿ ಜಯವನ್ನು ಹೊಂದುತಿದ್ದನು.

ಹೇ ಶೈಲೇಶ್ವರ! ನಿನ್ನ ಮಂದಿರದ ಮಧ್ಯದಲ್ಲಾವ ಸುಂದರಿಯ ಸರಳ ದೃಷ್ಟಿಯಿಂದಾ ಯೋದ್ಧನು ಪರಾಭೂತನಾಗಿದ್ದನೋ, ಆ ಸುಂದರಿಯು ಸೇನೆಯ ಕೋಲಾಹಲದಲ್ಲಿ ಒಮ್ಮೆಯಾದರೂ ಆವನ ನೆನಹುಗೆ ಬರಲಿಲ್ಲವೆ? ಹಾಗೆ ನೆನಸಿಕೊಳ್ಳದಿದ್ದರೆ, ಆ ಜಗತ್ಸಿಂಹನೂ ನಿಜವಾಗಿ ನಿನ್ನ ಹಾಗೆ ಶಿಲಾಮಯನೇ ಅಹುದು, ಸಂದೇಹವಿಲ್ಲ.

# ಹತ್ತನೆಯ ಪರಿಚ್ಛೇದ

## ಆಲೋಚನೆಯಾದ ಬಳಿಕ ಉದ್ಯೋಗ

ಯಾವ ದಿನ ಅಭಿರಾಮಸ್ವಾಮಿಯು ವಿಮಲೆಯ ಮೇಲೆ ಖತಿಗೊಂಡು ನಿಷ್ಠುರೋಕ್ತಿಗಳನ್ನು ಹೇಳಿ ಕುಟೀರದಿಂದವಳನ್ನು ಹೊರಡಿಸಿದನೋ, ಅದಕ್ಕೆ ಮರುದಿನ ಪ್ರದೋಷಕಾಲದಲ್ಲಿ ವಿಮಲೆಯು ತನ್ನ ಸ್ವಂತ ಚಿಕ್ಕಮನೆಯಲ್ಲಿ ಕುಳಿತು ಆಭರಣಗಳಿಂದಲಂಕರಿಸಿಕೊಳ್ಳುತ್ತಿದ್ದಳು. ಮೂವತ್ತೈದು ವರುಷದ ಹೆಂಗಸಾಗಿದ್ದು ಆಭರಣಗಳಿಂದ ಸಿಂಗರಿಸಿಕೊಳ್ಳುವುದೆ? ಕೂಡದೇಕೆ? ವಯಸ್ಸಿನೊಂದಿಗೆ ಯೌವನವೂ ಹೋಗುವುದೋ? ಅದೆಂದಿಗೂ ಹೋಗದು. ಯೌವನವು ರೂಪಪ್ರಣಯಗಳೊಂದಿಗೆ ಹೋಗತಕ್ಕುದು. ಅವಳು ಕುರೂಪಿಯೋ, ಅವಳು ಇಪ್ಪತ್ತು ವರುಷಕ್ಕೇವೇ ವೃದ್ಧಳು. ಅವಳು ಸುರೂಪಿಯೋ, ಅವಳು ಎಲ್ಲಾ ವಯಸ್ಸಿನಲ್ಲಿಯೂ ಯೌವನಸ್ಥಳೇ ಅಹುದು. ಅರಸಿಕೆಯಾದವಳಾವಾಗಲೂ ಪ್ರಾಚೀನೆ; ರಸಿಕೆಯಾದವಳಾವಾಗಲೂ ನವೀನೆ. ವಿಮಲೆಗೆ ಲಾವಣ್ಯವೆಂಬುದು ಈಗಲೂ ಸಕಲಾವಯವಗಳಲ್ಲಿಯೂ ತುಂಬಿದೆ. ಪ್ರಣಯವೂ ರಸಿಕತೆಯೂ ಮನಸ್ಸಿನಲ್ಲಿ ಉಕ್ಕುತ್ತವೆ. ವಯಸ್ಸಾದಹಾಗೆಲ್ಲಾ ಪ್ರಣಯವೂ ರಸಿಕತೆಯೂ ಪರಿಪಾಕವಾಗುತ್ತವೆ. ನಮ್ಮಾ ಹೇಳಿಕೆಯ ನಿಜತ್ವವನ್ನು ಪಾಠಕ ಮಹಾಶಯರು ಸ್ವಲ್ಪ ವಯಸ್ಸಾದ ಬಳಿಕ ಆವಶ್ಯಕವಾಗಿ ಅಂಗೀಕರಿಸುವರು. ಹೆಚ್ಚು ಹೇಳಬೇಕಾದುದಿಲ್ಲವು.

ತಾಂಬೂಲರಾಗ ರಕ್ತವರ್ಣವುಳ್ಳಾ ವಿಮಲೆಯ ಓಷ್ಠಾಧರಗಳನ್ನು ನೋಡಿ, ಅವಳು ಯುವತಿಯಲ್ಲವೆಂದಾವ ಪುರುಷನು ಹೇಳಬಲ್ಲನು? ಕಜ್ಜಳದಿಂದಲಂಕರಿಸಲ್ಪಟ್ಟ ಅವಳಾ ಪ್ರಶಸ್ತವಾದ ಲೋಚನಗಳ ಚಕಿತ ಕಟಾಕ್ಷವನ್ನು ನೋಡಿ, ಆರುತಾನೇ ಅವಳು ಇಪ್ಪತ್ತುನಾಲ್ಕು ವರುಷಕ್ಕಿಂತಲೂ ಕಿರಿಯವಳೆಂದು ಹೇಳದಿರುವರು? ಎಂತಹ ಕಣ್ಣುಗಳು! ವಿಶಾಲವಾಗಿಯೂ, ಉಜ್ವಲವಾಗಿಯೂ, ಚಂಚಲವಾಗಿಯೂ, ಆವೇಶಮಯವಾಗಿಯೂ ಇರುವ ಕಣ್ಣುಗಳು! ಕೆಲವು ಪ್ರಗಲ್ಭ* ಯೌವನ ಕಾಮಿನಿಯರ ಕಣ್ಣುಗಳನ್ನು ನೋಡಿದ ಮಾತ್ರದಿಂದಲೇ, ಮನದಲ್ಲವರು ದರ್ಪಿತರೆಂದೂ ಸುಖಾಭಿಲಾಷೆ ಪರಿಪೂರ್ಣರೆಂದೂ ಬೋಧೆಯಾಗುವುದಲ್ಲವೆ? ವಿಮಲೆಯ ಕಣ್ಣುಗಳು ಅಂತಹವುಗಳಾಗಿದ್ದುವು. ನಾವು ಪಾಠಕ ಮಹಾಶಯರಿಗೆ ನಿಜವಾಗಿ ಹೇಳುತ್ತೇವೆ:—ವಿಮಲೆಯು ಯುವತಿಯಾಗಿದ್ದಳು ಅಥವಾ ಸ್ಥಿರಯೌವನೆಯೆಂದು ಹೇಳಿದರೂ ಹೇಳಬಹುದು. ಚಂಪಕ ವರ್ಣವುಳ್ಳ ಅವಳಾ ಶರೀರದ ಕೋಮಲತೆಯನ್ನು ನೋಡಿದರೆ ಹದಿನಾರು ವರುಷದ ರಮಣಿಯು ಅವಳಿಗಿಂತ ಅಧಿಕ ಕೋಮಲೆಯೆಂದು ಆವ ಪುರುಷನು ಹೇಳ

* ಪ್ರಗಲ್ಭ = ಹೆದರದ, ಧೀರ.

ಬಲ್ಲನು? ವಿಮಲೆಯ ಮನೋಹರವಾದ ಕೇಶಪಾಶವು ಗುಂಗುರು ಗುಂಗುರಾಗಿ ಕರ್ಣಮೂಲದಿಂದ ಹರಿದು ಕಪೋಲಪ್ರದೇಶದ ಮೇಲೆ ಬಿದ್ದಿರುವುದನ್ನು ನೋಡಿ ಆರುತಾನೇ ಯುವತಿಯ ಕಪೋಲದ ಮೇಲೆ ಅಲಕಕೇಶಗುಚ್ಛವು ಬಿದ್ದಿಲ್ಲವೆಂದು ಹೇಳಬಲ್ಲನು? ಪಾಠಕ ಮಹಾಶಯರೆ! ನಾವು ಹೇಳುವಹಾಗೆ ದಯವಿಟ್ಟು ನಿಮ್ಮ ಮನಶ್ಚಕ್ಷುಸನ್ನು ತೆರೆದು ನೋಡಿರಿ. ವಿಮಲೆಯು ದರ್ಪಣ*ದೆದುರಿಗೆ ತನ್ನ ದೀರ್ಘವಾದ ನಿಶಾರಾಶಿಯ ಹಾಗಿರುವ ಕೇಶರಾಶಿಯನ್ನು ಹರಡಿಕೊಂಡು ಕುಳಿತಿರುವುದನ್ನು ನೋಡಿರಿ. ಒಂದು ಹಿಡಿಗೆ ತಕ್ಕಷ್ಟು ಕೇಶಗುಚ್ಛವನ್ನೆಡಗೈಯಲ್ಲಿ ಹಿಡಿದು ಎಡಗಡೆಗೆ ಮುಖವನ್ನೋರೆಮಾಡಿ ಎಷ್ಟೊಂದು ವೈಯ್ಯಾರದಿಂದ ಬಾಚಿಕೊಳ್ಳುತ್ತಿದ್ದಾಳೆ, ನೋಡಿರಿ; ತನ್ನ ಯೌವನಭಾವವನ್ನು ಕನ್ನಡಿಯಲ್ಲಿ ನೋಡಿಕೊಂಡು ಮುಖದಲ್ಲಿ ಮಂದಸ್ಮಿತವಾದ ಭಾವವನ್ನು ತೋರುತ್ತಿರುವುದನ್ನು ನೋಡಿರಿ; ಮಧ್ಯೆ ಮಧ್ಯೆ ವೀಣಾನಾದವನ್ನು ತಿರಸ್ಕರಿಸುವ ಮಧುರಸ್ವರದಿಂದ ಮೃದುಳವಾಗಿ ಸಂಗೀತವನ್ನು ಹಾಡುತ್ತಾಳೆ. ಅದನ್ನು ಲಾಲಿಸಿ ಕೇಳಿರಿ; ಪಾಠಕರೆ! ಪುನಃಪುನಃ ನೋಡಿ, ಕೇಳಿ ಕೇಳಿ, ಬಳಿಕ ಹೇಳಿರಿ, ವಿಮಲೆಗಿಂತಲೂ ಆವ ನವೀನ ಯೌವನ ರಮಣಿಯು ತಾನೇ ನಿಮಗೆ ಹೆಚ್ಚು ಮನೋಮೋಹಿನಿಯಾಗುವಳು?

ವಿಮಲೆಯು ಜಡೆಯನ್ನು ಹಾಕಿಕೊಂಡು ದೀರ್ಘವಾದಾ ವೇಣಿಯನ್ನು ಹಿಂಭಾಗದಲ್ಲಿ ಗಂಟು ಹಾಕದೆ ಬಿಟ್ಟಳು. ಗಂಧವಾರಿಸಿಕ್ತ†ವಾದೊಂದು ಕೈವಸ್ತ್ರದಿಂದ ಮುಖವನ್ನು ಪರಿಷ್ಕಾರವಾಗಿ ಒರಿಸಿಕೊಂಡು, ಗುಲಾಬಿ ಪೂಗ ಕರ್ಪೂರ ಪೂರ್ಣ ತಾಂಬೂಲದಿಂದ ಪುನಃ ಓಷ್ಠಾಧರಗಳನ್ನು ರಂಜನಮಾಡಿಕೊಂಡಳು. ಮುಕ್ತಾಭೂಷಿತವಾದೊಂದು ಕಂಚುಕವನ್ನು ತೊಟ್ಟು ಸರ್ವಾಂಗಗಳಿಗೂ ಕನಕ ರತ್ನಾಭರಣಗಳನ್ನು ಧರಿಸಿಕೊಂಡಳು. ಪುನಃ ಏನೋ ಯೋಚಿಸಿಕೊಂಡು, ಅವುಗಳಲ್ಲಿ ಕೆಲವು ಆಭರಣಗಳನ್ನು ತೆಗೆದಿಟ್ಟು, ಪ್ರವಾಳಗಳಿಂದ ಶೋಭಿತವಾದ ಪಾದುಕೆಗಳನ್ನು ಹಾಕಿಕೊಂಡಳು. ಕಡೆಗೆ ದೀರ್ಘವಾದಾ ಹೆರಳನ್ನೋರೆ ತುರುಬಾಗಿ ಕಟ್ಟಿ, ಯುವರಾಜನು ಕೊಟ್ಟಿದ್ದ ಬಹು ಮೂಲ್ಯವುಳ್ಳ ಮುಕ್ತಾಹಾರವನ್ನದಕ್ಕೆ ಸುತ್ತಿ ಗಂಟು ಹಾಕಿದಳು.

ವಿಮಲೆಯು ಇಂತಿಷ್ಟಲಂಕೃತೆಯಾಗಿ ತಿಲೋತ್ತಮೆಯ ಕೊಟಡಿಗೆ ಹೋದಳು. ತಿಲೋತ್ತಮೆಯು ನೋಡಿ ವಿಸ್ಮಿತೆಯಾಗಿ ನಕ್ಕು, 'ಇದೇನು, ವಿಮಲೆ! ಇಷ್ಟೊಂದು ಶೃಂಗಾರವೇಕೆ?' ಎಂದಳು.

ವಿಮಲೆ—ನಿನಗಾ ಪ್ರಸ್ತಾಪದಿಂದ ಪ್ರಯೋಜನವೇನು?

ತಿಲೋತ್ತಮೆ—ನಿಜವಾಗಿ ಹೇಳು, ಎಲ್ಲಿಗೆ ಹೋಗುವೆ?

ವಿಮಲೆ—ನಾನೆಲ್ಲಿಗಾದರೂ ಹೋಗುವೆನೆಂದು ನಿನಗಾರು ಹೇಳಿದರು?

* ದರ್ಪಣ = ಕನ್ನಡಿ. † ಗಂಧವಾರಿಸಿಕ್ತ = ಅತ್ತರಿಂದ ತೋಯಿಸಿದ.

ತಿಲೋತ್ತಮೆಯು ನಾಚಿಕೆಯಿಂದ ಸುಮ್ಮನಾದಳು. ವಿಮಲೆಯು ಅವಳ ಲಜ್ಜೆಯನ್ನು ನೋಡಿ, ಕನಿಕರಪಟ್ಟು ನಗುತ, 'ನಾನು ಸ್ವಲ್ಪ ದೂರ ಹೋಗಬೇಕಾಗಿದೆ' ಎಂದಳು. ಅದನ್ನು ಕೇಳಿ ತಿಲೋತ್ತಮೆಯ ಮುಖವು ಪ್ರಫುಲ್ಲ ಪದ್ಮದೋಪಾದಿಯಲ್ಲಿ ಹರ್ಷದಿಂದರಳಿ ಮೃದು ಸ್ವರದಿಂದವಳು, 'ಎಲ್ಲಿಗೆ ಹೋಗುವೆ? ಹೇಳು' ಎಂದಳು.

ವಿಮಲೆಯು ಪುನಃ ನಕ್ಕು, 'ಊಹಿಸಿ ನೀನೇ ಹೇಳು' ಎಂದಳು.

ತಿಲೋತ್ತಮೆಯು ವಿಮಲೆಯ ಮುಖವನ್ನು ದೃಷ್ಟಿಸಿ ನೋಡಿದಳು.

ವಿಮಲೆಯು, ಹಾಗಾದರೆ ಕೇಳೆಂದು ಹೇಳಿ ತಿಲೋತ್ತಮೆಯ ಕೈಹಿಡಿದು ಗವಾಕ್ಷದ ಬಳಿಗೆ ಕರೆದುಕೊಂಡು ಹೋಗಿ ಅಲ್ಲಿ ಅವಳ ಕಿವಿಯಲ್ಲಿ ಏಕಾಂತವಾಗಿ, 'ನಾನು ಶೈಲೇಶ್ವರನ ಮಂದಿರಕ್ಕೆ ಹೋಗಿ, ಅಲ್ಲೊಬ್ಬ ರಾಜಕುಮಾರನ ಸಂದರ್ಶನವನ್ನು ಮಾಡುವೆನು' ಎಂದಳು.

ಅದನ್ನು ಕೇಳುತ್ತಲೇ, ತಿಲೋತ್ತಮೆಯ ಶರೀರವು ರೋಮಾಂಚಿತವಾಗಿ ಏನೊಂದುತ್ತರವನ್ನೂ ಹೇಳಲು ತೋಚದವಳಾಗಿ ಸುಮ್ಮನಿದ್ದಳು.

ವಿಮಲೆಯು ಮುಂದೆ ಹೇಳತೊಡಗಿದಳು:—ನಾನು ಅಭಿರಾಮಸ್ವಾಮಿಗಳೊಂದಿಗೆ ಮಾತನಾಡಿದೆನು; ಅವರ ಅಭಿಪ್ರಾಯದಲ್ಲಿ ಜಗತ್ಸಿಂಹನಿಗೆ ನಿನ್ನನ್ನು ಕೊಟ್ಟು ವಿವಾಹವಾಗಕೂಡದೆಂದೂ, ನಿನ್ನ ತಂದೆಯು ಆ ವಿವಾಹಕ್ಕೆ ಸಮ್ಮತನಾಗುವುದಿಲ್ಲವೆಂದೂ, ಈ ಸುದ್ದಿಯು ನಿಮ್ಮ ತಂದೆಯ ಕಿವಿಗೆ ಬಿದ್ದರೆ ನನ್ನ ಪರಿಣಾಮವಾಗುವುದು ದುಸ್ತರವೆಂದೂ ಹೇಳಿದರು.

'ಹಾಗಾದರೆ ಹೋಗಲೇಕೆ?' ಎಂದು ಹೇಳಿ, ತಿಲೋತ್ತಮೆಯು ಅಧೋವದನೆಯಾಗಿ ಅಸ್ಫುಟ ಸ್ವರದಿಂದ ನೆಲವನ್ನು ನೋಡುತ್ತಾ ಪುನಃ, 'ಹಾಗಾದರೆ ಏತಕ್ಕೆ?' ಎಂಬ ಮಾತುಗಳನ್ನು ಸುರಿದಳು.

ವಿಮಲೆ—ಏತಕ್ಕೆ? ನಾನು ಇಂದಿನ ರಾತ್ರಿ ಹೋಗಿ ರಾಜಕುಮಾರನಿಗೆ ನಮ್ಮ ಪರಿಚಯವನ್ನು ಕೊಡುವುದಾಗಿ ವಾಗ್ದಾನಮಾಡಿಲ್ಲವೆ? ಬರಿ ಪರಿಚಯ ಏಂದೇನು ಮಾಡಬಲ್ಲನೋ ಗೊತ್ತಾಗುವುದಿಲ್ಲ; ನಾನೇನೋ ನಮ್ಮ ಪರಿಚಯವನ್ನು ಹೇಳಿಬಿಡುವೆನು; ಅವನು ಕರ್ತವ್ಯಾಕರ್ತವ್ಯವನ್ನು ಆಲೋಚಿಸಿಕೊಳ್ಳುವನು; ಅವನು ನಿಜವಾಗಿ ನಿನ್ನಲ್ಲಿ ಅನುರಕ್ತನಾಗಿದ್ದರೆ....

ತಿಲೋತ್ತಮೆಯು ಮಾತನ್ನು ಪೂರೈಸಗೊಡಿಸದೆ, ವಿಮಲೆಯ ಬಾಯಿಗೆ ಸೆರಗನ್ನು ಹಾಕಿ ಕೈಯಿಂದ ಭದ್ರವಾಗಿ ಮುಚ್ಚಿಕೊಂಡು, 'ನಿನ್ನ ಮಾತನ್ನು ಕೇಳಲೆನಗೆ ನಾಚಿಕೆಯಾಗುತ್ತದೆ; ನಿನ್ನ ಇಷ್ಟವಿದ್ದೆಡೆಗೆ ಹೋಗು, ಆದರೆ ನನ್ನ ವಿಚಾರವನ್ನಾರಿಗೂ ಹೇಳಬೇಡ. ಮತ್ತೊಬ್ಬರ ವಿಚಾರವನ್ನು ಕುರಿತು ನನಗೆ ಹೇಳಬೇಡ'ವೆಂದು ಹೇಳಿದಳು.

ವಿಮಲೆಯು ಪುನಃ ನಕ್ಕು, 'ಹಾಗಿದ್ದರೆ, ಈ ಚಿಕ್ಕವಯಸ್ಸಿನಲ್ಲೇ ಸಮುದ್ರದಲ್ಲಿ ಮುಣುಗಿ ತೇಲೆಂದು ನಿನಗೆ ಹೇಳಿದವರಾರು?' ಎಂದು ಕೇಳಿದಳು.

ತಿಲೋತ್ತಮೆಯು, 'ನೀನು ತೊಲಗಿಹೋಗು—ನಿನ್ನ ಮಾತನ್ನು ಹೆಚ್ಚು ಕೇಳಲಾರೆನು' ಎಂದಳು.

ವಿಮಲೆ—ಹಾಗಾದರೆ ನಾನು ದೇವಮಂದಿರಕ್ಕೆ ಹೋಗುವುದಿಲ್ಲ.

ತಿಲೋತ್ತಮೆ—ನೀನೆಲ್ಲಿಗೂ ಹೋಗಬೇಡೆಂದು ಅಡ್ಡಿಮಾಡಿದೆನೆ? ನಿನ್ನಿಷ್ಟ ವಿದ್ದೆಡೆ ಹೋಗು.

ವಿಮಲೆ—(ನಗುತ ನಗುತ) ಹಾಗಾದರೆ ನಾನು ಹೋಗಕೂಡದೊ?

ತಿಲೋತ್ತಮೆಯು ಪುನಃ ಅಧೋಮುಖಿಯಾಗಿ, 'ಹೋ—ಗು—' ಎಂದು ದೀರ್ಘವಾಗಿ ಸಣ್ಣ ದನಿಯಿಂದುಸುರಿದಳು.

ವಿಮಲೆ—(ಪುನಃ ನಕ್ಕು, ಕೆಲವು ನಿಮಿಷಗಳ ಬಳಿಕ) ಇಗೋ ನಾನು ಹೊರಟೆ. ನಾನು ಬರುವವರೆಗೂ ನೀನು ನಿದ್ರೆ ಹೋಗಬೇಡ.

ಅದನ್ನು ಕೇಳಿ, ತಿಲೋತ್ತಮೆಯು ಸ್ವಲ್ಪ ನಕ್ಕಳು. ವಿಮಲೆಯು ಆ ನಗೆಯಲ್ಲಿ, 'ಹೇಗೆತಾನೇ ನಿದ್ರೆ ಹೋಗುವೆನು?' ಎಂಬ ಭಾವವು ಗರ್ಭಿತವಾಗಿದ್ದಿತೆಂದು ಚೆನ್ನಾಗಿ ತಿಳಿದಳು.

ಹೊರಟುಹೋಗುವಾಗ ವಿಮಲೆಯು ಒಂದು ಕೈಯನ್ನು ತಿಲೋತ್ತಮೆಯ ಭುಜದಮೇಲಿಟ್ಟು, ಮತ್ತೊಂದು ಕೈಯಿಂದವಳ ಗಲ್ಲವನ್ನು ಹಿಡಿದು ಮುಖವನ್ನೆತ್ತಿ ಸರಳಪ್ರೇಮದಿಂದ ಪವಿತ್ರವಾಗಿದ್ದಾ ಮುಖವನ್ನು ನೋಡಿ, ಸ್ನೇಹಭರಿತೆಯಾಗಿ ಮುದ್ದಿಟ್ಟುಕೊಂಡಳು. ಅನಂತರ ವಿಮಲೆಯು ಹೊರಟು ಹೋಗುವ ಕಾಲದಲ್ಲಿ ಅವಳ ಕಣ್ಣಿನಲ್ಲಿ ಕಂಬನಿಯು ತುಂಬಿದುದನ್ನು ತಿಲೋತ್ತಮೆಯು ಕಂಡಳು.

ಆ ಕಾಲದಲ್ಲಿ ಕೊಟಡಿಯ ಬಾಗಿಲಿಗೆ ಆಶ್ಮಾನಿಯು ಬಂದು ವಿಮಲೆಯನ್ನು ಕುರಿತು, 'ಯಜಮಾನರು ನಿನ್ನನ್ನು ಬರಹೇಳಿದರು' ಎಂದು ಹೇಳಿದಳು.

ತಿಲೋತ್ತಮೆಯು ಅದನ್ನು ಕೇಳಿ, ವಿಮಲೆಯ ಕಿವಿಯಲ್ಲಿ, 'ಈ ಅಲಂಕಾರಗಳನ್ನೆಲ್ಲಾ ತೆಗೆದಿಟ್ಟು ಹೋಗು' ಎಂದಳು.

ವಿಮಲೆಯು 'ಭಯವೇನು?' ಎಂದಳು.

ವಿಮಲೆಯು ವೀರೇಂದ್ರಸಿಂಹನ ಶಯನಾಗಾರಕ್ಕೆ* ಹೋದಳು. ಅಲ್ಲಿ ವೀರೇಂದ್ರನು ಮಲಗಿದ್ದನು. ದಾಸಿಯೊಬ್ಬಳು ಪಾದಸೇವೆಯನ್ನು ಮಾಡುತ್ತಿದ್ದಳು. ಮತ್ತೊಬ್ಬಳು ಬೀಸಣಿಗೆಯಿಂದ ಗಾಳಿಯನ್ನು ಬೀಸುತ್ತಿದ್ದಳು. ವಿಮಲೆಯು ಹೋಗಿ ಮಂಚದ ಹತ್ತಿರ ನಿಂತು, 'ನನಗೇನಾಜ್ಞೆ?' ಎಂದು ಕೇಳಿದಳು.

* ಶಯನಾಗಾರ=ಮಲಗುವ ಕೊಟಡಿ.

ವೀರೇಂದ್ರಸಿಂಹನು ತಲೆಯನ್ನೆತ್ತಿ ನೋಡಿ ಚಮತ್ಕೃತನಾಗಿ, 'ವಿಮಲೆ! ನೀನು ಕಾರ್ಯಾಂತರಕ್ಕೆ ಹೋಗುವಹಾಗಿದೆ' ಎಂದನು.

ವಿಮಲೆ—ಅಹುದು, ಆದರೆ ಅಪ್ಪಣೆಯಾದುದೇನು?

ವೀರೇಂದ್ರ—ತಿಲೋತ್ತಮೆಯು ಹೇಗಿದ್ದಾಳೆ? ಶರೀರದಲ್ಲಿ ಸುಸ್ಥವಿಲ್ಲದಿದ್ದವಳು ಈಗ ಸುಸ್ಥವಾಗಿದ್ದಾಳೆಯೆ?

ವಿಮಲೆ—ಚೆನ್ನಾಗಿದ್ದಾಳೆ.

ವೀರೇಂದ್ರನು, 'ಹಾಗಾದರೆ, ನೀನು ಸ್ವಲ್ಪ ಗಾಳಿಯನ್ನು ಹಾಕು; ಆಶ್ಮನಿಯು ಹೋಗಿ ತಿಲೋತ್ತಮೆಯನ್ನು ಕರೆತರಲಿ' ಎಂದು ಹೇಳುತ್ತಲೇ, ಗಾಳಿಯನ್ನು ಬೀಸುತ್ತಿದ್ದ ದಾಸಿಯು ವ್ಯಜನ*ವನ್ನಿಟ್ಟು ಹೊರಟುಹೋದಳು.

ವಿಮಲೆಯು ಆಶ್ಮನಿಯನ್ನು ಬಾಗಿಲಲ್ಲಿ ನಿಂತಿರಲು ಸಂಜ್ಞೆಮಾಡಿದಳು.

ವೀರೇಂದ್ರನು ಮತ್ತೊಬ್ಬ ದಾಸಿಯನ್ನು ಕುರಿತು, 'ನೀನು ಹೋಗಿ ತಾಂಬೂಲವನ್ನು ತೆಗೆದುಕೊಂಡು ಬಾ' ಎಂದು ಹೇಳಿದನು. ಆಗ ಕಾಲೊತ್ತುತ್ತಿದ್ದವಳು ಹೊರಟುಹೋದಳು.

ವೀರೇಂದ್ರ—ವಿಮಲೆ! ಇಂದಿದೇನಿಷ್ಟೊಂದು ಅಲಂಕಾರ?

ವಿಮಲೆ—ಸ್ವಲ್ಪ ಕೆಲಸವಿದೆ.

ವೀರೇಂದ್ರ—ಆವ ಕೆಲಸ? ಹೇಳು, ತಿಳಿಯಬೇಕು.

ವಿಮಲೆಯು, ಹಾಗಾದರೆ ಕೇಳಬಹುದೆಂದು ಹೇಳಿ, ಮನ್ಮಥಶಯ್ಯಾರೂಪವಾದ ಕಣ್ಣುಗಳಿಂದ ವೀರೇಂದ್ರನನ್ನು ಕಣ್ಣೆರಿಸಿನೋಡಿ, ಪುನಃ, 'ಹಾಗಾದರೆ ಕೇಳಬಹುದು, ನಾನೊಂದು ಅಭಿಸಾರ† ನಿಮಿತ್ತವಾಗಿ ಹೋಗುವೆನು' ಎಂದಳು.

ವೀರೇಂದ್ರ—ಯಮನೊಂದಿಗೆ ಅಭಿಸಾರ?

ವಿಮಲೆ—ಮನುಷ್ಯನೊಂದಿಗೆ ಕೂಡದೇಕೆ?

ವೀರೇಂದ್ರ—ಅಂತಹ ಮನುಷ್ಯನಾವನು ಹುಟ್ಟಿದಾನೆ?

ವಿಮಲೆಯು—'ನತದೃಷ್ಟನೊಬ್ಬನು' ಎಂದು ಹೇಳಿ, ಜಾಗ್ರತೆಯಾಗಿ ಹೊರಟುಹೋದಳು.

---

## ಹನ್ನೊಂದನೆಯ ಪರಿಚ್ಛೇದ

## ಆಶ್ಮನಿಯ ದೌತ್ಯ

ಇತ್ತಲಾಗಿ ಆಶ್ಮನಿಯು ಮಾಡಿದ್ದ ಸಂಜ್ಞೆಯ ಪ್ರಕಾರ ಬಾಗಿಲ ಹೊರಗೆ ನಿಂತು ಅವಳನ್ನೆದುರು ನೋಡುತಿದ್ದಳು. ವಿಮಲೆಯು ಬಂದು ಆಶ್ಮನಿಯನ್ನು ಕುರಿತು, 'ಆಶ್ಮನಿ! ನಿನಗೊಂದು ಏಕಾಂತವನ್ನು ಹೇಳುವುದಿದೆ' ಎಂದಳು.

* ವ್ಯಜನ=ಬೀಸಣಿಗೆ. † ಅಭಿಸಾರ—ಸಂಕೇತಮಾಡಿದ ಭೇಟಿ, ಮೇಳನ ಸ್ಥಾನ.

ಆಶ್ಮನಿಯು, 'ನಿನ್ನ ಅಲಂಕಾರ ಮುಂತಾದುದನ್ನು ನೋಡಿ ಇಂದೇನೋ ವಿಶೇಷವಿರಬೇಕೆಂದು ತಿಳಿದೆನು' ಎಂದಳು.

ವಿಮಲೆಯು, 'ಇಂದೊಂದು ಕೆಲಸದ ನಿಮಿತ್ತವಾಗಿ ಸ್ವಲ್ಪ ದೂರ ಹೋಗಿ ಬರಬೇಕಾಗಿದೆ. ಆದರೆ ಸಮಯ ತಪ್ಪದೇ ಸಮರಾತ್ರಿಯಲ್ಲಿ ಒಬ್ಬಳೇ ಹೋಗ ಲಾರೆನು. ನಿನ್ನ ಹೊರತು ಮತ್ತಾರನ್ನೂ ಸಂಗಡ ಕರೆದುಕೊಂಡುಹೋಗಲಿಷ್ಟ ವಿಲ್ಲ; ನೀನೇ ಸಂಗಡ ಬರಬೇಕು' ಎಂದಳು.

ಆಶ್ಮನಿಯು, 'ಎಲ್ಲಿಗೆ ಹೋಗಬೇಕು?' ಎಂದು ವಿಚಾರಿಸಿದಳು.

ವಿಮಲೆಯು, 'ನೀನಾವಾಗಲೂ ಈ ರೀತಿ ವಿಚಾರಿಸಿದವಳಲ್ಲ' ಎಂದಳು.

ಆಶ್ಮನಿಯು ಸ್ವಲ್ಪ ಅಪ್ರತಿಭೆ*ಯಾಗಿ, 'ಹಾಗಾದರೆ ಸ್ವಲ್ಪ ನಿಲ್ಲು ಒಂದು ಕೆಲಸವನ್ನು ಮಾಡಿಕೊಂಡು ಬರುವೆನು' ಎಂದಳು.

ವಿಮಲೆ—ಮತ್ತೊಂದು ಮಾತು, ಕೇಳು, ನೀನು ಮೊದಲು ನೋಡಿದ್ದವ ರಾರನ್ನಾದರೂ ಪುನಃ ನೋಡಿದರೆ ಅವರು ನಿನ್ನನ್ನು ಗುರುತಿಸಬಲ್ಲರೆ?

ಆಶ್ಮನಿ—(ವಿಸ್ಮಿತೆಯಾಗಿ) ಅವರಾರು?

ವಿಮಲೆ—ಕುಮಾರ ಜಗತ್ಸಿಂಹನನ್ನು ನೋಡಿದರೆ ಆತನು ನಿನ್ನನ್ನು ಗುರುತಿಸುವನೆ?

ಆಶ್ಮನಿಯು ಸ್ವಲ್ಪ ಹೊತ್ತು ನೀರವವಾಗಿದ್ದು ಅನಂತರ ಗದ್ಗದ ಸ್ವರದಿಂದ 'ಅಂತಹ ಸಮಯವು ಬರುವುದೆ?' ಎಂದಳು.

ವಿಮಲೆ—ಬಂದರೂ ಬರಬಹುದು.

ಆಶ್ಮನಿ—ಕುಮಾರನು ಅಗತ್ಯವಾಗಿ ಗುರುತಿಸುವನು.

ವಿಮಲೆ—ಹಾಗಾದರೆ, ನೀನು ಬರಕೂಡದು. ಮತ್ತಾರನ್ನು ಕರೆದು ಕೊಂಡು ಹೋಗಲಿ? ಒಬ್ಬಳೇ ಹೋಗುವುದಕ್ಕಾಗುವುದಿಲ್ಲ.

ಆಶ್ಮನಿ—ಕುಮಾರನನ್ನು ನೋಡಲು ಆಸೆಯುಳ್ಳವಳಾಗಿದ್ದೇನೆ.

ವಿಮಲೆ—ನಿನ್ನ ಆಸೆಯು ಹಾಗಿರಲಿ. ಈಗಾರನ್ನು ಕರೆದುಕೊಂಡು ಹೋಗಲಿ?

ವಿಮಲೆಯು ಯೋಚನೆಮಾಡುತ ನಿಂತಳು. ಆಶ್ಮನಿಯು ಇದ್ದಕ್ಕಿದ್ದ ಹಾಗೆ ಬಾಯನ್ನು ಸೆರಗಿನಿಂದ ಮುಚ್ಚಿಕೊಂಡು ನಕ್ಕಳು. ವಿಮಲೆಯು ನೋಡಿ, 'ಕಾರಣವಿಲ್ಲದೆ ನಗಲೇಕೆ?' ಎಂದಳು.

ಆಶ್ಮನಿಯು, 'ನಮ್ಮ ಮನ್ಮಥ ದಿಗ್ಗಜನನ್ನು ನಿನ್ನ ಸಂಗಡ ಕಳುಹಕೂಡ ದೇಕೆಂದು ಯೋಚಿಸಿದೆನು' ಎಂದಳು.

ವಿಮಲೆಯು ನಕ್ಕು, ಉಲ್ಲಾಸದಿಂದ, 'ಅದೇ ಒಳ್ಳೆಯದಾದಾಲೋಚನೆ. ನಮ್ಮ ರಸಿಕರಾಜನನ್ನು ಕರೆದುಕೊಂಡು ಹೋಗುವೆನು' ಎಂದಳು.

* ಅಪ್ರತಿಭೆ=ವಿಭ್ರಮೆ.

ಆಶ್ಮನಿಯು ವಿಸ್ಮಿತೆಯಾಗಿ, 'ಬೇಡ, ನಾನು ಹುಡುಗಾಟಕ್ಕೆ ಹೇಳಿದೆನು ಎಂದಳು. ವಿಮಲೆಯು, 'ಹುಡುಗಾಟವಲ್ಲ; ಆ ಬೆಪ್ಪು ಬ್ರಾಹ್ಮಣನಲ್ಲಿ ನನಗೆ ವಿಶ್ವಾಸವಿಲ್ಲ; ಅಂಧರಿಗೆ ರಾತ್ರಿಗೂ ಹಗಲಿಗೂ ಭೇದವಿಲ್ಲ; ಅವನಿಗಾವುದೂ ಗೊತ್ತಾಗುವುದಿಲ್ಲ; ಆದುದರಿಂದ ಅವನಲ್ಲಿ ಅಪನಂಬಿಕೆಯಿಲ್ಲ; ಆದರೆ ಆ ಬ್ರಾಹ್ಮಣನು ಬರಲಿಷ್ಟಪಡುವನೋ ಇಲ್ಲವೊ?' ಎಂದಳು.

ಆಶ್ಮನಿಯು ಸಕ್ಕು, ಆ ಭಾರವು ನನ್ನ ಮೇಲಿರಲಿ; ನಾನೊಂದುಪಾಯ ವನ್ನು ಹೂಡಿ ಅವನನ್ನು ಕರೆತರುವೆನು; ಅದುವರೆಗೂ ನೀನು ಬಾಗಿಲಲ್ಲಿರು, ಎಂದು ಹೇಳಿ, ನಗುತ ನಗುತ ದುರ್ಗದಲ್ಲೊಂದು ಕುಟೀರಾಭಿಮುಖವಾಗಿ ಹೊರಟುಹೋದಳು.

ಅಭಿರಾಮಸ್ವಾಮಿಯ ಶಿಷ್ಯನೊಬ್ಬ ಗಜಪತಿ ವಿದ್ಯಾದಿಗ್ಗಜನೆಂಬುವನನ್ನು ನಮ್ಮ ಪಾಠಕ ಮಹಾಶಯರಿಗೆ ಮೊದಲೇ ಪರಿಚಯಮಾಡಿಕೊಟ್ಟಿದ್ದೇವಷ್ಟೆ. ಆವ ಕಾರಣದಿಂದ ವಿಮಲೆಯು ಆ ಶಿಷ್ಯನಿಗೆ ರಸಿಕರಾಜರಸೋಪಾಧ್ಯಾಯನೆಂಬ ಹೆಸರನ್ನು ಕೊಟ್ಟಿದ್ದಳೋ ಅದನ್ನೂ ಪಾಠಕ ಮಹಾಶಯರು ಅರಿತಿರುವರು. ಆ ಮಹಾಪುರುಷನೇ ಆಶ್ಮನಿಯುದ್ದೇಶಿಸಿ ಹೋದ ಕುಟೀರಕ್ಕೆ ಅಧಿಕಾರಿ ಯಾಗಿದ್ದನು. ದಿಗ್ಗಜ ಮಹಾಶಯನು ದೈರ್ಘ್ಯ*ದಲ್ಲಿ ಐದು ಮೊಳವಾಗ ಬಹುದು. ಅಡ್ಡಗಲದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಒಂದು ಅಡಿಯಾಗಬಹುದು. ಕಾಲುಗಳು ಪೃಷ್ಠದಿಂದ ಅಂಗುಷ್ಟ ಪರ್ಯಂತ ನಾಲ್ಕು ಮೊಳವಿದ್ದವಲ್ಲದೆ ದಪ್ಪದಲ್ಲಿ ಸ್ವಲ್ಪ ದಪ್ಪದಾದ ಎರಡು ಕಾಷ್ಠಗಳನ್ನು ಹೋಲಬಹುದು. ಆ ಮಹಾಶಯನು ವರ್ಣದಲ್ಲಿ ಅಚ್ಚಕಪ್ಪು. ಕಾಲುಗಳನ್ನು ನೋಡಿದರೆ, ಅಗ್ನಿದೇವನು ಕಾಷ್ಠವೆಂಬ ಭ್ರಮೆಯಿಂದ ಭಕ್ಷಣಮಾಡಲೆತ್ನಿಸಿ, ಸ್ವಲ್ಪವೂ ರಸವಿಲ್ಲದಿದ್ದುದರಿಂದ ಅವುಗಳನ್ನು ಅರ್ಧಾಂಗಾರಮಾಡಿ ಉಗಿದುಬಿಟ್ಟಿದ್ದಂತೆ ತೋರುವುದು. ದಿಗ್ಗಜ ಮಹಾಶಯನು ಎತ್ತರದ ದೆಸೆಯಿಂದ ಸ್ವಲ್ಪ ಕುಗ್ಗಿ, ಅವಯವಗಳಲ್ಲಿ ಮೂಗು ಪ್ರಬಲವಾದುದಾ ಗಿದ್ದಿತು. ಶರೀರದಲ್ಲಿ ಕಡಿಮೆಯಾದ ಮಾಂಸವೆಲ್ಲಾ ತಕ್ಕಮಟ್ಟಿಗೆ ನಾಸಿಕದಲ್ಲಿ ಸರಿಮಾಡಲ್ಪಟ್ಟಿದ್ದಂತೆ ಪ್ರಕಾಶಿಸುತ್ತಿದ್ದನು. ಅವನು ಮುಂಡೆಯನ್ನು ಮುಂಡನ ಮಾಡಿಕೊಂಡಿದ್ದು ದುಡ್ಡಿನ ಪ್ರಮಾಣದ ಶಿಖೆಯ ಸಣ್ಣ ಗಂಟು ನೆತ್ತಿಯಮೇಲೆ ಮುಂದಕ್ಕೆ ಬಿದ್ದಿದ್ದಿತು. ಮುಖದಲ್ಲಿ ಅಂಗಾರಾಕ್ಷತೆಯು ಪ್ರಚುರವಾಗಿದ್ದುದ ರಿಂದ ದೇದೀಪ್ಯಮಾನವಾಗಿದ್ದಿತು.

ಗಜಪತಿಯು ವಿದ್ಯಾದಿಗ್ಗಜನೆಂಬ ಬಿರುದನ್ನು ಔಪಚಾರಿಕವಾಗಾಗಲಿ, ಹಿರಿಯರ ಗೌರವಕ್ಕೋಸ್ಕರವಾಗಾಗಲಿ, ದಾಕ್ಷಿಣ್ಯದ ಮೇಲಾಗಲಿ ಪಡೆದುದಲ್ಲ. ಏಕೆಂದರೆ, ಅವನ ಬುದ್ಧಿಯು ಅತಿ ತೀಕ್ಷ್ಣವಾದುದು. ಬಾಲ್ಯದಲ್ಲಿಯೇ ಶಿವ ಪುರಿಯ ಪಾಠಶಾಲೆಯಲ್ಲಿ ಮುಗ್ಧಬೋಧವೆಂಬ ವ್ಯಾಕರಣವನ್ನೋದುವುದಕ್ಕೆ

* ದೈರ್ಘ್ಯ = ಎತ್ತರ.

ತೊಡಗಿ ಏಳುವರೆ ತಿಂಗಳುಗಳೊಳಗಾಗಿ 'ಸಹರ್ಣೇಘಃ' ಎಂಬ ಸೂತ್ರವನ್ನು ಅದರ ವೃತ್ತಿಯೊಡನೆ ಪೂರ್ತಿಯಾಗಿ ಮುಖಸ್ಥವಾಡಿದ್ದನು. ಪಾಠಶಾಲೆಯ ಭಟ್ಟಾಚಾರ್ಯ ಮಹಾಶಯರ ಅನುಗ್ರಹದಿಂದ ಹದಿನೈದು ವರ್ಷದೊಳಗಾಗಿ ಇಪ್ಪತ್ತು ಮೂವತ್ತು ಸಹಪಾಠಿಯೊಡನೆ ಪಾಠಮಾಡಿ ಶಬ್ದಕಾಂಡವನ್ನು ಮುಗಿಸಿದನು. ಅನಂತರ ಮತ್ತೊಂದು ಕಾಂಡವನ್ನು ಪ್ರಾರಂಭಿಸುವುದಕ್ಕೆ ಮೊದಲು ಅಧ್ಯಾಪಕರಾದ ಭಟ್ಟಾಚಾರ್ಯ ಮಹಾಶಯರು ಶಿಷ್ಯನಿಗೆ ಪೂರ್ವಕಾಂಡದಲ್ಲೆಷ್ಟರ ಮಟ್ಟಿಗೆ ವ್ಯುತ್ಪತ್ತಿಯಾಗಿದೆಯೋ ನೋಡಬೇಕೆಂದು ಶಿಷ್ಯನನ್ನು ಕರೆದು, ''ಮಗು! ರಾಮ ಶಬ್ದದ ಉತ್ತರದಲ್ಲಿ 'ಅಂ' ಪ್ರತ್ಯಯ ಬಂದರೆ ಏನಾಗುವುದು?'' ಎಂದು ಕೇಳಿದರು. ಶಿಷ್ಯನು ಬಹಳ ಹೊತ್ತು ಧ್ಯಾನಿಸಿ ನೋಡಿ, 'ರಾಮಾಂಭಾ' ಎಂದಾಗುವುದೆಂದು ಪ್ರತ್ಯುತ್ತರವನ್ನು ಕೊಟ್ಟನು. ಅಧ್ಯಾಪಕರು ಬಹಳ ಸಂತೋಷಪಟ್ಟು, 'ಮಗು! ನಿನಗೆ ವಿದ್ಯವಾಯಿತು; ಮನೆಗೆ ಹೋಗು; ಇಲ್ಲಿಗೆ ಪಾಠವು ಸಾಂಗವಾಯಿತು; ನಿನಗೆ ಪಾಠ ಹೇಳುವುದಕ್ಕೆ ನನ್ನಲ್ಲಿ ಹೆಚ್ಚು ವಿದ್ಯೆ ಯಿಲ್ಲ'ವೆಂದು ಹೇಳಿದರು.

ಗಜಪತಿಯು ಕೇಳಿ ಸಾಹಂಕಾರಚಿತ್ತನಾಗಿ ಭಟ್ಟಾಚಾರ್ಯರನ್ನು ಕುರಿತು, 'ನನ್ನದೊಂದು ವಿಜ್ಞಾಪನೆ, ಏನೆಂದರೆ—ನನಗೆ ಬಿರುದಾವುದು' ಎಂದು ಕೇಳಿದನು. ಅಧ್ಯಾಪಕರಾದ ಭಟ್ಟಾಚಾರ್ಯರು ಹಾಗೆಯೇ ಚಿಂತಿಸಿ 'ಅಯ್ಯಾ ಶಿಷ್ಯ! ನೀನು ಮಾಡಿರುವ ವಿದ್ಯೋಪಾರ್ಜನೆಗೆ ತಕ್ಕ ಬಿರುದಾವಳಿಗಳಾವವೂ ಇಲ್ಲ. ಅದಕ್ಕೊಂದು ನೂತನವಾದ ಬಿರುದು ಆವಶ್ಯಕವಾಗುವುದಾದುದರಿಂದ ನೀನು ವಿದ್ಯಾದಿಗ್ಗಜನೆಂಬ ಬಿರುದನ್ನು ಗ್ರಹಣಮಾಡು' ಎಂದು ಹೇಳಿದರು. ದಿಗ್ಗಜನು ಹೃಷ್ಟಚಿತ್ತನಾಗಿ ಗುರುಗಳ ಪಾದಗಳಿಗೆರಗಿ ಬಿರುದಿನೊಡನೆ ಮನೆಗೆ ಹೊರಟುಹೋದನು.

ಮನೆಗೆ ಬಂದ ಬಳಿಕ ದಿಗ್ಗಜಪಂಡಿತನು ಮನಸ್ಸಿನಲ್ಲಿ, 'ವ್ಯಾಕರಣದಲ್ಲಿ ಕೃತವಿದ್ಯನಾದೆನು, ಸ್ಮೃತಿಗಳನ್ನು ನೋಡಬೇಕಾದುದು ಆವಶ್ಯಕ; ಅಭಿರಾಮ ಸ್ವಾಮಿಯು ದೊಡ್ಡ ಪಂಡಿತರೆಂದು ಕೇಳಿದ್ದೇನೆ. ಅವರನ್ನು ಬಿಟ್ಟರೆ ನನಗೆ ವಿದ್ಯೆಯನ್ನು ಹೇಳತಕ್ಕವರಾರೂ ಕಾಣುವುದಿಲ್ಲವಾದಕಾರಣ ಅವರಲ್ಲಿ ಹೋಗಿ ಸ್ಮೃತಿಯನ್ನು ನೋಡಬೇಕಾದುದು ಆವಶ್ಯಕ'ವೆಂದು ಸಂಕಲ್ಪಮಾಡಿಕೊಂಡು, ದುರ್ಗದಲ್ಲಿ ಬಂದಿದ್ದುಕೊಂಡಿದ್ದನು. ಅಭಿರಾಮಸ್ವಾಮಿಯು ಅನೇಕರಿಗೆ ಪಾಠವನ್ನು ಹೇಳುತ್ತಿದ್ದನು. ಆರಲ್ಲಿಯೂ ಅವಿಶ್ವಾಸವಿರಲಿಲ್ಲ. ದಿಗ್ಗಜನು ಕಲಿತರೂ ಕಲಿಯದಿದ್ದರೂ ಅಭಿರಾಮಸ್ವಾಮಿಯು ಅವನಿಗೂ ಪಾಠವನ್ನು ಹೇಳುತ್ತಿದ್ದನು.

ಗಜಪತಿ ವಿದ್ಯಾದಿಗ್ಗಜನು ಕೇವಲ ವ್ಯಾಕರಣ, ನ್ಯಾಯಶಾಸ್ತ್ರ, ಸ್ಮೃತಿ ಸಂಹಿತೆ ಇವುಗಳಲ್ಲಿ ಮಾತ್ರವೇ ಪರಿಚಯವುಳ್ಳವನಾಗಿರಲಿಲ್ಲ; ಅಲಂಕಾರಶಾಸ್ತ್ರದಲ್ಲಿಯೂ ಪಾರಂಗತನಾಗಿ ರಸಿಕನಾಗಿದ್ದನು. ಹಿಂದೆ ವಿಮಲೆಗೆ ಉಪಮಾನವಾಗಿ

ಹೇಳಿರುವ ಘೃತಭಾಂಡವೇ ಅದಕ್ಕುದಾಹರಣವಾಗಿದೆ. ಅವನ ರಸಿಕತೆಯನ್ನೂ ಅಲಂಕಾರಶಾಸ್ತ್ರದಲ್ಲಿ ಪಾಂಡಿತ್ಯವನ್ನೂ ಪ್ರಾಯಶಃ ಆಶ್ಮಸಿಯನ್ನುದ್ದೇಶಿಸಿ ಪ್ರಕಾಶಮಾಡುತ್ತಿದ್ದನು. ಅದಕ್ಕೊಂದು ಪ್ರಬಲವಾದ ಕಾರಣವೂ ಇದ್ದಿತು. ಆಗಾಗ್ಗೆ ಗಜಪತಿಯು ಮನಸ್ಸಿನಲ್ಲಿ ತಾನೀ ಭರತಖಂಡದಲ್ಲಿ ಕೃಷ್ಣಲೀಲೆಗೋಸ್ಕರ ಅವತಾರವನ್ನೆತ್ತಿರುವುದೆಂದೂ ಮಂದಾರಣವೇ ಬೃಂದಾವನವೆಂದೂ ವಧೂ ಆಶ್ಮಸಿಯೇ ತನ್ನ ರಾಧೆಯೆಂದೂ ಆಕಾಶದಲ್ಲಿ ವಿಹರಿಸುತ್ತಿರುವನು. ಆಶ್ಮಸಿಯೂ ಬಹಳ ರಸಿಕೆ. ಆ ಮದನಮೋಹನನು ಅವಳಿಗೆ ಸಿಕ್ಕಿದುದು ಒಂದು ವಾನರಕ್ಕೆ ಪ್ರತಿನಿಧಿಯಾಯಿತು. ವಿಮಲೆಯೂ ಅದನ್ನು ತಿಳಿದವಳಾಗಿ ಆಗಿಂದಾಗ ಆ ವಾನರ ನಾಟ್ಯಕ್ಕೆ ಹೋಗುತ್ತಿದ್ದಳು. ದಿಗ್ಗಜನು ಒಮ್ಮೋರ್ಮೆ, 'ಅವಳೇ ನನ್ನ ಚಂದ್ರಾವಳಿ; ನನ್ನ ಉತ್ಪ್ರೇಕ್ಷಾಲಂಕಾರವಾದ ಘೃತಭಾಂಡವನ್ನು ಹೇಗೆ ಚೆಲ್ಲಿದ್ದೇನೆ; ಭಾಗ್ಯವಶತಃ ವಿಮಲೆಯು ನನ್ನಾ ಉಲ್ಲೇಖನವು ನನ್ನ ಸ್ವಂತ ಪಾಂಡಿತ್ಯ ಪ್ರಭಾವದಿಂದ ಕಲ್ಪಿತವಾದುದೆಂದು ತಿಳಿದಿರುವಳೇ ಹೊರತು ನಾನದನ್ನು ಇತರರಿಂದ ಕೇಳಿ ತಿಳಿದುದೆಂದು ಅರಿತಿಲ್ಲ'ವೆಂದು ಮುಂತಾಗಿ ಮನಸ್ಸಿನಲ್ಲಿ ಆಲೋಚಿಸುತ್ತಾ ಸಂತೋಷಿಸುತ್ತಿರುವನು.

ಇಂದು ಮಾಧವನ ಅದೃಷ್ಟಕ್ಕೆ ಪಾರವಿಲ್ಲ; ವೃಕಭಾನುಸುತೆಯಾದ ರಾಧೆಯೇ ಕುಂಜಕುಟೀರಕ್ಕೆ ಬರುತ್ತಾಳೆ!

---

## ಹನ್ನೆರಡನೆಯ ಪರಿಚ್ಛೇದ

### ಆಶ್ಮಸಿಯ ಅಭಿಸಾರ

ದಿಗ್ಗಜ ಗಜಪತಿಯ ಮನೋಮೋಹಿನಿಯಾದ ಆಶ್ಮಸಿಯು ಎಷ್ಟೊಂದು ರೂಪವತಿಯೆಂಬುದನ್ನು ತಿಳಿಯಲು ನಮ್ಮ ಪಾಠಕಮಹಾಶಯರಿಗೆ ವಿಶೇಷ ಕೌತೂಹಲವುಂಟಾಗಿರುವುದಕ್ಕೆ ಸಂದೇಹವಿಲ್ಲವಾದುದರಿಂದ ಅವರ ಆಶೆಯನ್ನು ಪೂರ್ತಿಗೊಳಿಸುವೆವು. ಆದರೆ ಸ್ತ್ರೀವರ್ಣನೆಯ ವಿಷಯದಲ್ಲಿ ನಮ್ಮ ಆಧುನಿಕ ಗ್ರಂಥಕರ್ತರೂ ಪಂಡಿತರೂ ಅವಲಂಬಿಸಿರುವ ಪದ್ಧತಿಯನ್ನು ಬಿಟ್ಟು ನಮ್ಮಂತಹವರು ಬೇರೆ ಪದ್ಧತಿಯನ್ನನುಸರಿಸುವುದು ಅತಿ ಧೃಷ್ಟ*ಕಾರ್ಯವಾದುದರಿಂದ ನೂತನ ಗ್ರಂಥಕರ್ತರ ಪದ್ಧತಿಗನುಸಾರವಾಗಿ ಪ್ರಥಮದಲ್ಲಿ ಮಂಗಳಾಚರಣೆಯನ್ನು ಮಾಡುವುದು ಕರ್ತವ್ಯವು.

ಹೇ ವಾಗ್ದೇವೀ! ಹೇ ಕಮಲಾಸನೆ! ಶರದಿಂದುನಿಭಾನನೆ!† ಅಮಲ ಕಮಲ–ದಳ–ನಿಂದಿತ–ಚರಣೆ! ಭಕ್ತಜನವತ್ಸಲೆ! ನನಗಾ ಚರಣಕಮಲದ ಛಾಯೆಯನ್ನು ದಯಪಾಲಿಸು! ನಾನು ಆಶ್ಮಸಿಯ ರೂಪವನ್ನು ವರ್ಣನೆ ಮಾಡುವೆನು.

---

* ಧೃಷ್ಟ = ಬುದ್ಧಿಗೇಡಿತನ. † ಶರದಿಂದುನಿಭಾನನೆ = ಶರತ್ಕಾಲದ ಚಂದ್ರನಹಾಗೆ ಮುಖವುಳ್ಳವಳೆ.

ಹೇ ಅರವಿಂದಾನನ–ಸುಂದರೀ–ಕುಲ–ಗರ್ವ–ಖರ್ವ–ಕಾರಿಣಿ! ಹೇ ವಿಶಾಲ ರಸಾಲದೀರ್ಘ* ಸಮಾಸಪಟೋಲ† ಸೃಷ್ಟಿಕಾರಿಣಿ! ಕ್ಷಣ ಮಾತ್ರ ನಿನ್ನ ಪದ ನಖಾಗ್ರಭಾಗದಲ್ಲಿ ಸ್ಥಾನವನ್ನು ಕೊಡು, ನಾನು ಆಶ್ಮನಿಯ ರೂಪವರ್ಣನೆಯನ್ನು ಮಾಡುವೆನು. ಸಮಾಸವೆಂಬ ಪಟೋಲವನ್ನೂ, ಸಂಧಿಯೆಂಬ ವೃಂತಾಕ‡ವನ್ನೂ, ಉಪಮಾ ಎಂಬ ಕದಳಿ§ಯನ್ನೂ ರಂಧನಮಾಡಿ¶ ನಿನಗೆ ನೈವೇದ್ಯವಾಗಿ ಸಮರ್ಪಿಸುತ್ತೇನೆ. ಹೇ ಪಂಡಿತ ಕುಲೇಪ್ಸಿತ ಪಯಃಪ್ರಸ್ರವಿಣಿ! ಹೇ ಮೂರ್ಖಜನ ಕ್ವಚಿತ್ ಕೃಪಾಕಾರಿಣಿ! ಹೇ ಅಂಗುಲೀ–ಕಂಡೂಯನ–ವಿಷಮ–ವಿಕಾರ–ಸಮುತ್ಪಾದಿನಿ!‖ ಹೇ ಸರ್ವತಂತ್ರ ಸ್ವತಂತ್ರ –ಪ್ರೌಢ–ಪಂಡಿತ –ಪ್ರವರ –ಪ್ರತಿಷ್ಠಿತ –ಸಂಸ್ಕೃತ–ಪಾಠಶಾಲಾ–ವಿದ್ಯಾಪ್ರದೀಪ–ತೈಲ–ಪ್ರದಾಯಿನಿ!£ ನನ್ನ ಬುದ್ಧಿ ಪ್ರದೀಪವನ್ನು ಒಮ್ಮೆ ಉಜ್ವಲಮಾಡು. ಹೇ ಮಾತೆ! ನಿನಗೆರಡು ರೂಪುಗಳು. ನೀನು ಕಾಳಿದಾಸನಿಗಾವರೂಪದಿಂದ ವರಪ್ರದೆಯೋ, ನಿನ್ನಾವ ಪ್ರಕೃತಿಯ ಪ್ರಭಾವದಿಂದ ರಘುವಂಶ, ಕುಮಾರಸಂಭವ, ಮೇಘದೂತ, ಶಕುಂತಲಾ ಮುಂತಾದ ಗ್ರಂಥಗಳು ಕಲ್ಪಿತವಾದುವೋ, ಆವ ಪ್ರಕೃತಿಯ ಧ್ಯಾನದಿಂದ ವಾಲ್ಮೀಕಿಯು ರಾಮಾಯಣವನ್ನೂ, ಭವಭೂತಿಯು ಮಾಲತೀಮಾಧವವನ್ನೂ, ಭಾರವಿಯು ಕಿರಾತಾರ್ಜುನೀಯವನ್ನೂ ರಚನೆಯಂಗೈದರೋ ಆ ರೂಪದಿಂದ ನನ್ನ ಸ್ಕಂಧಾರೋಹಣಮಾಡಿ@ ನನ್ನ ಮನಸ್ಸಿಗೆ ಕ್ಲೇಶವನ್ನುಂಟುಮಾಡಬೇಡ. ಆವ ಮೂರ್ತಿಯನ್ನು ಭಾವಿಸಿ ಶ್ರೀಹರ್ಷನು ನೈಷಧವನ್ನು ಬರೆದನೋ, ಆವ ಪ್ರಕೃತಿಯ ಪ್ರಸಾದದಿಂದ ಷಡಕ್ಷರನು ರಾಜಶೇಖರವನ್ನು ಬರೆದು ಅಪೂರ್ವ ರೂಪವರ್ಣನೆಯನ್ನು ಮಾಡಿ ಕರ್ನಾಟದೇಶಕ್ಕೆ ಮನೋಮೋಹವನ್ನುಂಟುಮಾಡಿದನೋ, ಆವ ಪ್ರಸಾದದಿಂದ ವಿದ್ಯಾಗುರುಗಳು ಹುಟ್ಟಿ ಪಾಠಶಾಲಾಧ್ಯಕ್ಷರಾಗಿ ಮೂರ್ತಿಗೊಳಿಸಿ ಪ್ರಕಾಶಿಸುತ್ತಿದ್ದಾರೆಯೋ ಅಂತಹ ರೂಪದಿಂದ ಕ್ಷಣ ಮಾತ್ರ ನನ್ನ ಸ್ಕಂಧದಲ್ಲಿ ಆವಿರ್ಭೂತೆಯಾಗು. ನಾನು ಆಶ್ಮನಿಯ ರೂಪವರ್ಣನೆಯನ್ನು ಮಾಡುವೆನು. ಅವಳು ಹೇಗಿದ್ದಳೆಂದರೆ:—

ತಮಗಿಂತಲೂ ಹೆಚ್ಚು ಶೋಭಾಯಮಾನವಾದ ಆಶ್ಮನಿಯ ವೇಣಿಯ ಪ್ರಭಾವವನ್ನು ಕಂಡು ಫಣಿಗಳೆಲ್ಲವೂ ಪರಿತಾಪದಿಂದ ಮನಸ್ಸಿನಲ್ಲಿ ತಾವು

* ರಸಾಲದೀರ್ಘ – ಕಬ್ಬಿನ ಜಲ್ಲೆಯಹಾಗೆ ಉದ್ದವಾದ. † ಸಮಾಸಪಟೋಲ = ಸಮಾಸವೆಂಬ ಪಡವಲಕಾಯಿ. ‡ ವೃಂತಾಕ – ಬದನೇಕಾಯಿ. § ಕದಳಿ – ಬಾಳೇಕಾಯಿ. ¶ ರಂಧನಮಾಡಿ = ಅಡುಗೆ ಮಾಡಿ. ‖ ಅಂಗುಲೀಕಂಡೂಯನ ವಿಷಮವಿಕಾರ ಸಮುತ್ಪಾದಿನಿ = ಹುರುಕನ್ನು ಕೈಬೆರಳಿಂದ ತುರಿಸುವುದರಿಂದ (ಮುಖದಲ್ಲಿ) ಕಷ್ಟವಾದ ವಿಕಾರಗಳನ್ನು ಉಂಟುಮಾಡುವವಳೆ (ಪಂಡಿತರಲ್ಲನೇಕರಿಗೆ ಅರೈಕೆ ಸಾಲದೆ ಮೈಯಲ್ಲಿ ಹುರುಕು ಹೆಚ್ಚಾಗಿ ಸದಾ ಅದರಮೇಲೆ ಕೈಯಾಡುತ್ತಿರುವುದು). £ ಸಂಸ್ಕೃತ ಪಾಠಶಾಲಾ ವಿದ್ಯಾಪ್ರದೀಪ ತೈಲಪ್ರದಾಯಿನಿ = ಪಂಡಿತರು ಇಟ್ಟುಕೊಂಡಿರುವ ಸಂಸ್ಕೃತ ಪಾಠಶಾಲೆಗಳಲ್ಲಿ ಹೇಳಿಕೊಡುವ ವಿದ್ಯೆಯೆಂಬ ದೀಪಕ್ಕೆ ಎಣ್ಣೆಯನ್ನು ಹಾಕುವವಳೆ. @ ಸ್ಕಂಧಾರೋಹಣಮಾಡಿ = ಭುಜವಮೇಲೇರಿ (ಸರಸ್ವತಿಯನ್ನು ಜಿಹ್ವಾಗ್ರದಲ್ಲಿ ಎಂದರೆ ನಾಲಗೆಯ ತುದಿಯಲ್ಲಿ ನರ್ತನ ಮಾಡೆಂದು ಪ್ರಾರ್ಥಿಸತಕ್ಕದು. ಭುಜದಮೇಲೇರೆಂದು ಹೇಳುವುದು ಪರಿಹಾಸ್ಯ).

ಇಂದಿಗೆ ಪರಾಜಿತರಾದಕಾರಣ ಮುಂದೆ ದೇಹವನ್ನು ಧರಿಸಿ ಜನಗಳೆದುರಿಗೆ ತಿರುಗಾಡುವುದು ಬಹಳ ಲಜ್ಜಾಸ್ಪದವಾದುದರಿಂದ ಆರ ದೃಷ್ಟಿಗೂ ಬೀಳದಹಾಗೆ ಡೊಗರುಗಳಲ್ಲಿ ಸೇರಿಕೊಳ್ಳಬೇಕೆಂದು ಯೋಚಿಸಿ ಹುತ್ತಗಳನ್ನು ಹೊಕ್ಕವು. ಬ್ರಹ್ಮನಾ ಪ್ರಮಾದ ಸಂಭವವನ್ನು ನೋಡಿ ತನ್ನೊಳು ತಾನೇ ಸರ್ಪವು ವಲ್ಮೀಕ ಪ್ರವೇಶ ಮಾಡಿಬಿಟ್ಟುದುದರಿಂದ ಮುಂದೆ ಮನುಷ್ಯರನ್ನು ದಂಶನ*ಮಾಡ ತಕ್ಕವರಾರೂ ಇಲ್ಲದಹಾಗಾಗುವುದೆಂದು ಭಯಪಟ್ಟು, ಬಲಾತ್ಕಾರದಿಂದಾ ಸರ್ಪಗಳ ಬಾಲವನ್ನು ಹಿಡಿದೆಳೆದು ಪುನಃ ಭೂಮಿಯಮೇಲೆ ತಂದು ಬಿಟ್ಟನು. ಸರ್ಪವು ನೆಲದಮೇಲೆ ಬರುತಲೇ ಪುನಃ ಜನರಿಗೆ ಮುಖವನ್ನು ತೋರುಬೇಕಾಯಿ ತೆಂಬ ಸಂಕಟದಿಂದ ತಲೆಯನ್ನು ನೆಲಕ್ಕೆ ಅಪ್ಪಳಿಸಿ ಹೊಡೆದುಕೊಳ್ಳಲಾರಂಭಿಸಿತು. ಅಂತಹ ಕೋಮಲವಾದ ತಲೆಯನ್ನು ನೆಲಕ್ಕೆ ಹೊಡೆದು ಹೊಡೆದು ಚಪ್ಪಟೆ ಯಾಗಲು ತದಾರಭ್ಯದಿಂದ ಆ ಪ್ರದೇಶಕ್ಕೆ 'ಹೊಡೆ' ಎಂಬುದಕ್ಕೆ ಬದಲಾಗಿ 'ಹೆಡೆ' ಎಂದು ಹೆಸರಾಯಿತು. ಆಕ್ಮನಿಯ ಮುಖಚಂದ್ರವು ಅಧಿಕ ಸುಂದರ ವಾದುದು. ಅದನ್ನು ನೋಡಿ ಚಂದ್ರನುದಯನಾಗಲು ನಾಚಿಕೊಂಡು ಖಿನ್ನ ನಾಗಿ ಬ್ರಹ್ಮನಲ್ಲಿ ಹೋಗಿ ಹೇಳಿಕೊಂಡನು. ಬ್ರಹ್ಮನು ಭಯವಿಲ್ಲ ಹೋಗಿ ಉದಯನಾಗೆಂದು ಚಂದ್ರನಿಗೆ ಹೇಳಿ, ಇಂದು ಮೊದಲ್ಗೊಂಡು ಹೆಂಗಸರು ಮುಖವನ್ನು ಮುಚ್ಚಿಕೊಂಡಿರಬೇಕೆಂದು ವಿಧಿಸಿದನು; ತದಾರಭ್ಯ ಹೆಂಗಸರಿಗೆ ಅವಕುಂಠನ† ಸೃಷ್ಟಿಯಾಯಿತು. ಆಕ್ಮನಿಯ ಕಣ್ಣುಗಳೆರಡೂ ಎರಡು ಖಂಜನ ಪಕ್ಷಿಗಳಾಗಿದ್ದುವು; ಪಕ್ಷಿಗಳೆರಡೂ ಹಾರಿ ಪಲಾಯನವಾಗುವುವೆಂಬ ಭೀತಿ ಯಿಂದ ವಿಧಾತನು ಪಂಜರಕ್ಕೆ ರೆಪ್ಪೆಯ ರೂಪವಾದ ಕವಾಟವನ್ನು ಮಾಡಿದನು. ಈ ರೀತಿಯಾಗಿ ಕಣ್ಣುಗಳಿಗೆ ರೆಪ್ಪೆಗಳುಂಟಾದುವು. ಆಕ್ಮನಿಯ ನಾಸಿಕವು ಗರುಡನ ಮೂಗಿನಹಾಗೆ ಮಹಾ ವಿಶಾಲವಾಗಿದ್ದಿತು. ಅದನ್ನು ಕಂಡು ಪಕ್ಷಿರಾಜನು ಭಯಪಟ್ಟು ವೃಕ್ಷಾರೋಹಣಮಾಡಿದನು. ತದಾ ರಭ್ಯ ಪಕ್ಷಿಕುಲವು ಮರಗಳಮೇಲೆ ವಾಸಮಾಡುತ್ತಿರುವುದು. ಈ ಪ್ರಕಾರ ಕಾರಣಾಂತರಗಳಿಂದ ದಾಡಿಂಬರಿಯು ದೇಶವನ್ನು ಬಿಟ್ಟು ದೇಶಾಂತರಕ್ಕೆ ಹೋಗಿ ಬಿಟ್ಟಿತು. ಹಸ್ತಿಯು ಕುಂಭಸ್ಥಳದೊಡನೆ ಬ್ರಹ್ಮದೇಶಕ್ಕೆ ಪಲಾಯನವಾಯಿತು. ಉಳಿದುದು ಧವಳಗಿರಿಯೊಂದು ಮಾತ್ರ. ಅದು ತಾನು ಐದು ಮೈಲಿ ಮಾತ್ರ ಎತ್ತರವಾಗಿರುವುದು ಸಾಲದೆಂದೂ ಆರು ಮೈಲಿ ಎತ್ತರವಾಗಬೇಕೆಂದೂ ಕೊರಗಿ ಕೊರಗಿ ತಲೆಗೆ ಉಷ್ಣವೇರಿ ತಾಪ ತಡೆಯಲಾರದೆ ತದವಧಿ ಹಿಮಗಡ್ಡೆಯನ್ನು ತಲೆಯಮೇಲೆ ಏರಿಸಿಕೊಳ್ಳುತ್ತಿರುವುದು, ‡ಇತ್ಯಾದಿ, ಇತ್ಯಾದಿ.

* ದಂಶನ=ಕಚ್ಚುವುದು.
† ಅವಕುಂಠನ=ಗೋಷೆ ಹೆಂಗಸರು ಮುಖದಮೇಲೆ ಹಾಕಿಕೊಳ್ಳುವ ಪರದೆಬಟ್ಟೆ.
‡ ನೂತನ ಕವಿಗಳ ಸ್ವಭಾವೋಕ್ತಿಗಳಿಗೆ ಉದಾಹರಣೆಗಳು.

ದೈವದುರ್ವಿಪಾಕದಿಂದ ಆಶ್ಮನಿಯು ವಿಧವೆಯಾಗಿದ್ದಳು.* ಆಶ್ಮನಿಯು ದಿಗ್ಗಜನ ಕುಟೀರಕ್ಕೆ ಬಂದು ನೋಡಲಾಗಿ ಬಾಗಿಲು ಮುಚ್ಚಿ ಒಳಗೆ ದೀಪ ಉರಿಯುತಿದ್ದಿತು. ಆಶ್ಮನಿಯು, 'ಸ್ವಾಮಿ ಪಂಡಿತರೆ!' ಎಂದು ಕೂಗಿದಳು.

ಉತ್ತರವನ್ನು ಕೊಡಲಿಲ್ಲ.

ಆಶ್ಮನಿ—ಒಳಗಾರು ಬ್ರಾಹ್ಮಣರು?

ಉತ್ತರವಿಲ್ಲ.

ಆಶ್ಮನಿಯು, 'ಎಲ್ಲಿಗೆ ಹೋಗಲಿ! ಆ ಹುಚ್ಚನೇನನ್ನುಮಾಡುತ್ತಿರುವನೊ?' ಎಂದೆಂದುಕೊಂಡು—

'ರಸಿಕರಾಜರಸೋಪಾಧ್ಯಾಯ ಮಹಾಪ್ರಭು!' ಎಂದು ಘಟ್ಟಿಯಾಗಿ ಕೂಗಿದಳು.

ಉತ್ತರವಿಲ್ಲ.

ಆಶ್ಮನಿಯು ಕುಟೀರದ ಬಾಗಿಲ ಕಂಡಿಯಲ್ಲಿಣಿಕಿ ನೋಡಿದಳು. ಬ್ರಾಹ್ಮಣನು ಭೋಜನಮಾಡುತ್ತಿದ್ದುದು ಕಂಡಿತು; ಆದುದರಿಂದವನು ಮಾತನಾಡಲಿಲ್ಲ. ಊಟಮಾಡುವಾಗ ಬ್ರಾಹ್ಮಣನು ಮಾತನಾಡಕೂಡದು; ತತ್ರಾಪಿ ಬೇರೆ ಜಾತಿಯವರ ಸಂಗಡ ಖಂಡಿತವಾಗಿ ಮಾತನಾಡಕೂಡದು. ಆಶ್ಮನಿಯು ಮನಸ್ಸಿನಲ್ಲಿ, 'ಇವನು ಕೇವಲ ನಿಷ್ಠನಲ್ಲವೆ? ನನ್ನ ಸಂಗಡ ಮಾತನಾಡಿ ಪುನಃ ಊಟಮಾಡುವನೆ ನೋಡಬೇಕು' ಎಂದೆಂದುಕೊಂಡು, ಸ್ವಾಮಿ! ರಸಿಕರಾಜ! ಎಂದು ಕೂಗಿದಳು.

ಉತ್ತರವಿಲ್ಲ.

ಆಶ್ಮನಿ—ಓ ರಾಸರಾಜ!

ಉತ್ತರ—ಹುಂ.

ಆಶ್ಮನಿಯು ಬ್ರಾಹ್ಮಣನಿಗೆ ಅನ್ನವು ಗಂಟಲಿಗೆ ಸಿಕ್ಕಿ ಮಾತು ಹೊರಡದಿರಬೇಕೆಂದು ಭಾವಿಸಿ, ಪುನಃ, 'ಓ ರಸಮಾಣಿಕ!' ಎಂದು ಕೂಗಿದಳು.

ಉತ್ತರ—ಹುಂ—

ಆಶ್ಮನಿ—ಮಾತನಾಡುವುದಿಲ್ಲವೆ?

ಉತ್ತರ—ಹೂ—ಉ—ಉಂ—

ಆಶ್ಮನಿ—ಚೆನ್ನಾಯಿತು! ಬ್ರಾಹ್ಮಣನಾಗಿ ಇಷ್ಟಕ್ಕೆ ಬಂದಿತೆ! ನೆಟ್ಟಗೆ ಹೋಗಿ ಸ್ವಾಮಿಗಳಿಗೆ ಹೇಳಿಬಿಡುತ್ತೇನೆ; ಒಳಗೆ ಮತ್ತಾರನ್ನಿಟ್ಟುಕೊಂಡಿದ್ದೀರಿ?

ಬ್ರಾಹ್ಮಣನು ಭಯಪಟ್ಟು ಸುತ್ತಲೂ ನೋಡಿ ಆರೂ ಇಲ್ಲದಿದ್ದುದರಿಂದ ಪುನಃ ಊಟಮಾಡತೊಡಗಿದನು.

ಆಶ್ಮನಿ—ಇದೇನು, ಪುನಃ ಊಟಮಾಡುವುದೆ?

* ವರ್ಣಿತ ವಿಷಯಕ್ಕೆ ಉದಾಹರಣೆ.

ದಿಗ್ಗಜ—ಅದೇನು? ಆವಾಗ ಮಾತನಾಡಿದೆ?

ಆಶ್ಮನಿ—(ಬಹಳ ನಕ್ಕು) ಇಗೋ! ಮಾತನಾಡಲಿಲ್ಲವೆ?

ದಿಗ್ಗಜ—ಸರೀ—ಸರಿ—ಸರಿ; ಪುನಃ ಊಟಮಾಡಕೂಡದು.

ಆಶ್ಮನಿ—ಕೂಡದು, ಹಾಗಾದರೆ ಎದ್ದು ಬಾಗಿಲನ್ನು ತೆಗೆ.

ಆಶ್ಮನಿಯು ಬಾಗಿಲ ಕಂಡಿಯಿಂದ ನೋಡಲಾಗಿ ಬ್ರಾಹ್ಮಣನು ನಿಜವಾಗಿಯೂ ಏಳುತ್ತಿದ್ದುದನ್ನು ಕಂಡು, 'ಬೇಡ ಬೇಡ ಉಳಿದಿರುವ ಅನ್ನವನ್ನು ತಿಂದು ಮುಗಿಸು' ಎಂದಳು.

ದಿಗ್ಗಜ—ಇಲ್ಲ; ಪುನಃ ಊಟಮಾಡಕೂಡದು. ಮಾತನಾಡಿಬಿಟ್ಟೆನು.

ಆಶ್ಮನಿ—ನನ್ನಾಣೆ ಊಟಮಾಡಬೇಕು.

ದಿಗ್ಗಜ—ರಾಮ ರಾಮ! ಹೇಗೆ ಮಾಡಲಿ? ಮಾತನಾಡಿಬಿಟ್ಟೆ?

ಆಶ್ಮನಿ—ಹಾಗಾದರೆ, ನಾನು ಹೋಗುವೆನು; ನಿನ್ನೊಂದಿಗೆ ಬಹಳವಾಗಿ ಏಕಾಂತಮಾಡುವುದಿದ್ದಿತು, ಹೇಳುವುದಕ್ಕಿಲ್ಲ, ಹೊರಟೆನು.

ದಿಗ್ಗಜ—ಬೇಡ ಬೇಡ, ಆಶ್ಮನಿ! ಕೋಪಗೊಳ್ಳಬೇಡ, ಇದೋ ಊಟ ಮಾಡಿ ಮುಗಿಸುವೆನು.

ಬ್ರಾಹ್ಮಣನು ಪುನಃ ಊಟಮಾಡತೊಡಗಿದನು. ಎರಡು ಮೂರು ಗ್ರಾಸಗಳನ್ನು ತೆಗೆದುಕೊಂಡ ಬಳಿಕ ಆಶ್ಮನಿಯು, 'ಒಳ್ಳೆಯ ಕೆಲಸಮಾಡಿದೆ, ಎದ್ದು ಬಾಗಿಲ ತೆಗೆ' ಎಂದಳು.

ಬ್ರಾಹ್ಮಣನು ಉತ್ತರಾಪೋಶನವನ್ನು ತೆಗೆದುಕೊಂಡಿದ್ದನು. ಅವನಾವಾಗಲೂ ಪರಮೈಕಾಂತಿ. ಹೆಚ್ಚು ನೈವೇದ್ಯಕಲಾಪವುಳ್ಳವನಾಗಿದ್ದವನು.

---

## ಹದಿನಾಲ್ಕನೆಯ ಪರಿಚ್ಛೇದ

## ಆಶ್ಮನಿಯ ಪ್ರೇಮ

ಕುಟೀರದ ಬಾಗಿಲ ತೆಗೆಯುತಲೇ ಆಶ್ಮನಿಯು ಕುಟೀರದೊಳಗೆ ಪ್ರವೇಶಿಸಿದಳು. ದಿಗ್ಗಜನು ಮನಸ್ಸಿನಲ್ಲಿ ಮನೆಗೆ ಬಂದ ಪ್ರಣಯಿನಿಗೆ ಸರಸವಾಗಿ ಅಭ್ಯರ್ಥನವನ್ನು ಮಾಡಬೇಕೆಂಬ ಆಸೆಯುಳ್ಳವನಾಗಿ ಕೈಯನ್ನು ಮುಂದಕ್ಕೆ ಚಾಚಿ ಅವಳ ಮುಖಕ್ಕೆ ಸಮಾನಾಗೆತ್ತಿ ಕೆಳಕ್ಕಿಳಿಸುತ್ತಾ, 'ಓಂ ಆಯಾಹಿ ವರದೇ ದೇವಿ!' ಎಂದು ಹೇಳಿ ಎದುರುಗೊಂಡನು.

ಆಶ್ಮನಿಯು, 'ಈ ಕವಿತ್ವವು ಸರಸವಾದುದು; ಥಕ್ಕನೆ ನಿನಗೆ ಹೇಗೆ ಹೊಳೆಯಿತು?' ಎಂದು ಕೇಳಿದಳು.

ದಿಗ್ಗಜ—ನಿನಗೋಸ್ಕರ ಇಂದದನ್ನು ರಚಿಸಿದೆನು.

ಆಶ್ಮನಿ—ಅದುಸಲುವಾಗಿಯೇ ನಿನಗೆ ರಸಿಕರಾಜ ರಸೋಪಾಧ್ಯಾಯನೆಂದು ಹೆಸರಿಟ್ಟಿರುವುದು.

ದಿಗ್ಗಜ—ಸುಂದರಿ! ಕುಳಿತಿರು. ನಾನು ಕೈತೊಳೆದುಕೊಂಡು ಬರುವೆನು. 'ರಸಿಕಃ ಕೌಶಿಕೋವಾಸಃ'*

ಆಶ್ಮನಿಯು ಮನಸ್ಸಿನಲ್ಲಿ, 'ಅಯ್ಯೋ ಭ್ರಷ್ಟ! ಕೈತೊಳೆದುಕೊಳ್ಳುವಿಯಾ? ನಿನಗೆ ಪುನಃ ಊಟಮಾಡಿಸದಿದ್ದರೆ ನಾನು ಹೆಂಗಸಲ್ಲ'ವೆಂದೆಂದುಕೊಂಡು, ವ್ಯಕ್ತವಾಗಿ, 'ಅದೇನು? ಆಗಲೇ ಕೈತೊಳೆದುಕೊಳ್ಳುತ್ತಿ? ಅನ್ನವನ್ನು ಪೂರ್ತಿಯಾಗಿ ಊಟಮಾಡುವುದಿಲ್ಲವೆ?' ಎಂದಳು.

ದಿಗ್ಗಜ—ಏನು ಮಾತು! ಊಟಮಾಡಿ ಎದ್ದಿದ್ದೇನೆ. ತಿರುಗಿ ಊಟ ಮಾಡುವುದುಂಟೆ?

ಆಶ್ಮನಿ—ಅನ್ನವು ಹಾಗೆಯೇ ಉಳಿದಿದೆ. ಉಪವಾಸಮಾಡುವಿಯಾ? ಏನು?

ದಿಗ್ಗಜನು ಸ್ವಲ್ಪ ವ್ಯಸನಾಕ್ರಾಂತನಾಗಿ, 'ಏನು ಮಾಡಲಿ! ನೀನು ಬಂದು ಅವಸರಪಡಿಸಿದೆ' ಎಂದು ಹೇಳುತ್ತ, ಉಳಿದಿದ್ದ ಅನ್ನವನ್ನು ಕುತೂಹಲದಿಂದ ನೋಡಿದನು.

ಆಶ್ಮನಿ—ಹಾಗಾದರೆ ಪುನಃ ಊಟಮಾಡಬೇಕು.

ದಿಗ್ಗಜ—ರಾಧೆಮಾಧವ! ಆಪೋಶನವನ್ನು ತೆಗೆದುಕೊಂಡೆದ್ದು ತಿರುಗಿ ಊಟವೆ?

ಆಶ್ಮನಿಯು, 'ಅಹುದು ಊಟಮಾಡಬೇಕು. ನನಗಾ ಪಾಪಬೇಡ, ಬೇಕಾದರೆ ನಾನೂ ಊಟಮಾಡುವೆನು' ಎಂದು ಹೇಳಿ, ಹೋಗಿ ತಪ್ಪಲೆಯಲ್ಲಿದ್ದ ಅನ್ನದಲ್ಲೊಂದು ಗ್ರಾಸವನ್ನು ತೆಗೆದು ಸ್ವಲ್ಪ ತಿಂದು ಅದರ ಉಚ್ಛಿಷ್ಟವನ್ನದರಲ್ಲಿಯೇ ಹಾಕಿದಳು.

ಬ್ರಾಹ್ಮಣನು ನೋಡಿ ಜಡನಾಗಿ ನಿಂತನು.

ಆಶ್ಮನಿಯು—(ಉಚ್ಛಿಷ್ಟವನ್ನು ಅನ್ನಪಾತ್ರದಲ್ಲಿ ಹಾಕಿ) ಊಟಮಾಡು.

ಬ್ರಾಹ್ಮಣನ ವಾಙ್ನಿಷ್ಪತ್ತಿಯೇ† ಹೋಯಿತು.

ಆಶ್ಮನಿಯು, 'ಊಟಮಾಡು, ನೀನು ನನ್ನ ಉಚ್ಛಿಷ್ಟವನ್ನು ತಿಂದೆಯೆಂದಾರಿಗೂ ಹೇಳುವುದಿಲ್ಲ; ಆರಿಗೂ ತಿಳಿಯದಿದ್ದರೆ ಅದರಲ್ಲಿ ದೋಷವೇನು!' ಎಂದು ಹೇಳಿ, ಕಿವಿಯಲ್ಲೇನೋ ಏಕಾಂತವಾಗಿ ಉಸುರಿದಳು.

---

* ಅನೇಕರು ಪಾಂಡಿತ್ಯಪ್ರದರ್ಶನಾರ್ಥವಾಗಿ ಬಾಯಿಗೆ ಬಂದಾವುದಾದರೂ ಒಂದೊಂದು ವಚನವನ್ನು ಹೇಳುವ ಪದ್ಧತಿ.

† ವಾಙ್ನಿಷ್ಪತ್ತಿ=ವಿವರವಾದ ಉಚ್ಚಾರಣೆ.

ದಿಗ್ಗಜ—ಅಹುದು, ಹಾಗಾದರೆ ದೋಷವಿಲ್ಲ, ಅದು ಕಲಿಧರ್ಮದಲ್ಲಿ ದ್ವಿಜವರ್ಯರಿಗೋಸ್ಕರ ಉಕ್ತವಾಗಿದೆ.

ದಿಗ್ಗಜನು ಉಚ್ಛಿಷ್ಟವನ್ನು ನುಂಗಲಾರದೆ ಉಗುಳಿದರೆ ಪ್ರಿಯೆಗೆ ಅವಮಾನ ವಾಗುವುದೆಂದೂ ತನ್ನನ್ನರಸಿಕನೆಂದು ಹೇಳುವಳೆಂದೂ ಹೆದರಿ ಉಭಯ ಸಂಕಟ ದಿಂದ ನೀಲಕಂಠನು ಗಳದಲ್ಲಿ ವಿಷವನ್ನಿಟ್ಟುಕೊಂಡಿದ್ದಂತೆ ತುತ್ತನ್ನು ಗಳದಲ್ಲಿಟ್ಟು ಕೊಂಡಿದ್ದನು.

ಆ ಸಮಯದಲ್ಲಿ ಅಮ್ಮಿಣಿಯು ದೀಪದಲ್ಲಿದ್ದೊಂದು ಬತ್ತಿಯನ್ನು ತೆಗೆದು ದಿಗ್ಗಜನ ಮೂಗಿನಲ್ಲಿಟ್ಟಳು. ಕೂಡಲೇ ಶೀನು ಬಂದು ನುಂಗಲಾರದೆ ಇಟ್ಟು ಕೊಂಡಿದ್ದ ಅಧರಾಮೃತ ಸಂಬಂಧದ ಉಚ್ಛಿಷ್ಟವು ದಿಗ್ಗಜನ ಮೈಗೆಲ್ಲಾ ಅಭಿಷೇಕ ವಾಯಿತು. ಅನಂತರ ಬ್ರಾಹ್ಮಣನು ಉಭಯ ಸಂಕಟದಿಂದ ನಿವೃತ್ತನಾಗಿ ಈ ಕೆಳಗಣ ಮಂತ್ರೋಚ್ಚಾರಣೆಮಾಡುತ್ತ ಮೈತೊಳೆದುಕೊಳ್ಳುತ್ತಿದ್ದನು.

'ದಕ್ಷಿಣೆ ಪಶ್ಚಿಮೆ ವಾಪಿ ನಕುರ್ಯಾದ್ದಂತಧಾವನಂ*'

---

# ಹದಿನಾಲ್ಕನೆಯ ಪರಿಚ್ಛೇದ

## ದಿಗ್ಗಜಹರಣ

ದಿಗ್ಗಜನು ಮೈತೊಳೆದುಕೊಳ್ಳುತ್ತಿದ್ದ ಸಮಯದಲ್ಲಿ ವಿಮಲೆಯು ಕುಟೀರದ ಹೊರಗೆ ಬಂದು ಬಾಗಿಲನ್ನೋರೆಮಾಡಿ! ಮರೆಯಾಗಿ ನಿಂತು ಎಲ್ಲವನ್ನೂ ನೋಡುತಿದ್ದಳು. ಬಾಗಿಲ ಶಬ್ದವಾಯಿತು. ಶಬ್ದವನ್ನು ಕೇಳಿ ದಿಗ್ಗಜನು ವ್ಯಾಕುಲವುಳ್ಳವನಾಗಿ, 'ಬಂದವರಾರೋ, ಅವೇಳೆಯಲ್ಲಿ ಸ್ನಾನಮಾಡು ವುದನ್ನು ಕಂಡರೆ ಪ್ರಕಾರಾಂತರ ತಿಳಿದುಕೊಳ್ಳುವರು' ಎಂದು ಹೇಳಿದನು. ಅಮ್ಮಿಣಿಯು, 'ಎಲ್ಲಾದರೂ ಅವಿತುಕೊಂಡಿರು' ಎಂದು ಹೇಳಿದಳು.

ಅಮ್ಮಿಣಿಯು, ಆ ಕತ್ತಲೆ ಕೋಣೆಗೆ ಹೋಗಿ ಆವುದಾದರೂ ಒಂದು ಗುಡಾಣ ವನ್ನು ತಲೆಯಮೇಲೆ ಮುಚ್ಚಿಕೊಂಡು ಕುಳಿತಿರೆಂದು ಹೇಳಿದಳು. ಅವಳಾ ಬುದ್ಧಿ ಕೌಶಲಕ್ಕೆ ಮೆಚ್ಚಿ ದಿಗ್ಗಜನು ಮೈಯಿಂದ ನೀರು ತೊಟಕುತಿದ್ದಹಾಗೆ ಹೋಗಿ ಕತ್ತಲೆ ಕೋಣೆಯಲ್ಲಿ ತಡವರಿಸಿ, ಕೈಗೆ ಸಿಕ್ಕಿದೊಂದು ಗುಡಾಣವನ್ನು ತೆಗೆದು ತಲೆಯಮೇಲೆ ಕವಿತುಕೊಳ್ಳುವುದರೊಳಗಾಗಿ ಗುಡಾಣದಲ್ಲಿದ್ದ ಅರಳಹಿಟ್ಟು ತಲೆಯಿಂದ ಕಾಲುಪರ್ಯಂತ ಶತಧಾರೆಯಾಗಿ ಸುರಿಯಲಾರಂಭಿಸಿತು. ಅದ ನ್ನರಿತು ಹಿಟ್ಟು ಚಲ್ಲಿಹೋಗದಹಾಗೆ ಗುಡಾಣವನ್ನು ಬೇಗನೆ ತಲೆಗೆ ಸಿಕ್ಕಿಹಾಕಿ ಕೊಳ್ಳಲದರ ಬಾಯಿಯು ಚಿಕ್ಕದಾಗಿದ್ದಕಾರಣ, ಮೂಗು ಅಡ್ಡಿಯಾಗಿ ಕಣ್ಣಿನವರೆಗೆ

* ಮಂತ್ರಾರ್ಥವನ್ನು ತಿಳಿಯದೆ ಮಂತ್ರನನ್ನು ಪ್ರಸಕ್ತವಾದ ಕಾರ್ಯಕ್ಕೆ ಅನರ್ಥಕವಾಗಿ ವಿನಿಯೋಗಮಾಡುವ ರೀತಿ.

ಅರ್ಧ ತಲೆಯು ಮಾತ್ರ ಗುಡಾಣದ ಬಾಯಿಗೆ ಬಿರಿಡೆಯ ಹಾಗೆ ಮುಚ್ಚಲ್ಪಟ್ಟು, ಹಿಟ್ಟಿನ ಪ್ರವಾಹವು ಕಡಿಮೆಯಾಗಿ ಸಣ್ಣ ಸಣ್ಣ ಧಾರೆಯಾಗಿ ಸುರಿಯುತ್ತಿದ್ದಿತು. ಸ್ಕಂಧದಿಂದಲೂ ಎದೆಯಿಂದಲೂ ಬೆನ್ನಿಂದಲೂ ಬಾಹುಗಳಿಂದಲೂ ಹಿಟ್ಟು ಸುರಿಯುತ್ತಿರಲು, ನೋಡಿದವರಿಗೆ ಪರ್ವತದಿಂದೇಕಕಾಲದಲ್ಲಿ ಅನೇಕ ನದಿಗಳು ಭೂತಲಗಾಮಿಯಾಗುವಂತೆ ಕಾಣುತಿದ್ದುವು. ಉತ್ತುರವಾದಾ ನಾಸಿಕವು ಅರಳ ಹಿಟ್ಟಿನ ಧಾರಾವಿಶಿಷ್ಟವಾಗಿ ಪ್ರಕಾಶಿಸುತಿದ್ದಿತು. ಆ ಸಮಯದಲ್ಲಿ ವಿಮಲೆಯು ಕುಟೀರದೊಳಗೆ ಪ್ರವೇಶಿಸಿ ದಿಗ್ಗಜನ ಶೋಭಾರಾಶಿಯನ್ನು ನೋಡಿದಳು. ದಿಗ್ಗಜ ನವಳನ್ನು ನೋಡಿ ಆಮೂಲ ಕರ್ಣಾಂತವಾಗಿ ಹಲ್ಲುಗಳು ಕಾಣುವಹಾಗೆ ಬಾಯಿ ತೆರೆದು ಅಳುತ ನಿಂತನು. ವಿಮಲೆಯು ಅದನ್ನು ಕಂಡು ಕನಿಕರದಿಂದವನನ್ನು ಕುಳಿತುಕೊಳ್ಳುವಂತೆ ಹೇಳಿ, ತಲೆಗೆ ಸಿಕ್ಕಿಹಾಕಿಕೊಂಡಿದ್ದಾ ಗುಡಾಣವನ್ನೊಡಿ ಯದ ಹಾಗೆ ಉಪಾಯದಿಂದ ತೆಗೆದು ಪುನಃ ಸ್ನಾನವಮಾಡೆಂದಳು. ದಿಗ್ಗಜನು ಸ್ನಾನವಮಾಡಿ ನಾಮಧಾರಣೆಯನ್ನು ಮಾಡಿಕೊಂಡು ಸ್ಥಿರಚಿತ್ತನಾದನು. ಬಳಿಕ ಆಶ್ಮನಿಯು ದಿಗ್ಗಜನನ್ನು ಕುರಿತು, 'ಇಂದು ನಿನ್ನ ಪುಣ್ಯವಿಶೇಷ, ನಿನ್ನ ಚಂದ್ರಾವಳಿಯೂ ಬಂದಿದ್ದಾಳೆ!' ಎಂದು ಹೇಳಿದಳು.

ದಿಗ್ಗಜನು, "ನನ್ನ ಪುಣ್ಯವಿಶೇಷವೇ ಅಹುದು, ಒಬ್ಬಳೇ ಸಾಕಾಗಿದ್ದಿತು; ಇಬ್ಬರು ಬಂದಿರುವುದಕ್ಕೆ ಎಷ್ಟೊಂದು ಹೇಳಿದರೂ ತೀರದು. ಶಾಸ್ತ್ರಕಾರರು 'ಏಕಶ್ಚಂದ್ರಸ್ತಮೋ ಹಂತಿ ನಚ ಮೂರ್ಖ ಶತ್ರೈರಪಿ*' ಎಂದು ಹೇಳಿದ್ದಾರೆ" ಎಂದನು.

ಆಶ್ಮನಿಯು ವಿಮಲೆಯನ್ನು ಕುರಿತು, 'ನೀನು ಕೇಳಿದಿಯಾ? ನಮ್ಮ ರಸಿಕ ರಾಜನಿಗೆ ಜಾತಿಯು ಹೋಯಿತು!' ಎಂದಳು.

ರಸಿಕರಾಜನು, 'ಹೇಗೆ ಹೋಯಿತು?' ಎಂದು ಕೇಳಿದನು.

ಆಶ್ಮನಿ—ನಾನು ತಿಂದು ಬಿಟ್ಟಿದ್ದ ಅನ್ನವನ್ನು ನೀನು ತಿನ್ನಲಿಲ್ಲವೆ?

ದಿಗ್ಗಜ—ಅದರಲ್ಲೇನು ಪಾತಕ? ಆರಿಗೂ ಹೇಳದಿದ್ದರೆ ಜಾತಿಯು ಹೇಗೆ ಹೋದೀತು? ದೊಡ್ಡವರು ಮಾಡುವಹಾಗೆ ದೊಡ್ಡದೊಡ್ಡ ನಾಮಗಳನ್ನು ಧರಿಸಿದರೆ ಸಾಕು.

ವಿಮಲೆಯು ಆಶ್ಮನಿಯನ್ನು ಕುರಿತು, 'ಹೊತ್ತಾಯಿತು; ಇವನು ಬರು ವನೋ ಇಲ್ಲವೋ?' ಎಂದು ಕೇಳಿದಳು. ಆಶ್ಮನಿಯು, 'ನಾನಾ ವಿಚಾರ ಮಾಡಿಲ್ಲ' ಎಂದಳು.

ವಿಮಲೆಯು, ತಾನು ವಿಚಾರಿಸುವುದಾಗಿ ಹೇಳಿ ದಿಗ್ಗಜನನ್ನು ಕುರಿತು, 'ಅಯ್ಯಾ ರಸಿಕಶಿಖಾಮಣಿ! ನಿನ್ನ ಸಂಗಡ ವಿಶೇಷ ಮಾತನಾಡುವುದಿದೆ' ಎಂದಳು.

* ಪ್ರಸ್ತಾವ ಶ್ಲೋಕ ಅಥವಾ ವಚನಗಳನ್ನು ತಪ್ಪಾಗಿ ಉದಹರಿಸಿ ಡೊಂಕು ಅರ್ಥಮಾಡುವ ರೀತಿ. ನಚತಾರಾ ಶತ್ರೈರಪಿ' ಎಂದಿರಬೇಕು.

ದಿಗ್ಗಜ—ಅದೇನು ?

ವಿಮಲೆ—ನೀನು ನಮ್ಮಿಬ್ಬರನ್ನೂ ಪ್ರೀತಿಸುತ್ತೀಯಾ ?

ದಿಗ್ಗಜ—ಅದಕ್ಕೆ ಅನುಮಾನವೇನು ?

ವಿಮಲೆ—ನಮ್ಮಿಬ್ಬರನ್ನು ?

ದಿಗ್ಗಜ—ಇಬ್ಬರನ್ನೂ ಪ್ರೀತಿಸುತ್ತೇನೆ.

ವಿಮಲೆ—ನಾನು ಹೇಳುವ ಹಾಗೆ ಮಾಡುವಿಯಾ ?

ದಿಗ್ಗಜ—ಅದರಲ್ಲಿ ನೀನೇಕೆ ಅನುಮಾನಿಸಬೇಕು ?

ವಿಮಲೆ—ಈ ಕೂಡಲೆ ?

ದಿಗ್ಗಜ—ಈ ಕೂಡಲೆ.

ವಿಮಲೆ—ಈ ನಿಮಿಷದಲ್ಲಿ ?

ದಿಗ್ಗಜ—ಈ ನಿಮಿಷದಲ್ಲಿ.

ವಿಮಲೆ—ನಿನ್ನ ಬಳಿಗೆ ನಾವಿಬ್ಬರೂ ಬಂದಿರುವುದೇಕೆ ? ಕಾರಣವು ಗೊತ್ತಿದಿಯೆ ?

ದಿಗ್ಗಜ—ಗೊತ್ತಿಲ್ಲ.

ಆಶ್ಮನಿ—ನಾವಿಬ್ಬರೂ ನಿನ್ನೊಡನೆ ಎಲ್ಲಿಗಾದರೂ ಪಲಾಯನವಾಗಿ ಹೋಗಬೇಕೆಂದು ಬಂದೆವು.

ಬ್ರಾಹ್ಮಣನು ಮಾತುಹೋದವನಹಾಗಾಗಿ ಸುಮ್ಮನಿದ್ದನು.

ವಿಮಲೆಯು ಉಕ್ಕಿಬರುತಿದ್ದ ನಗುವನ್ನು ಕಷ್ಟದಿಂದಡಗಿಸಿಕೊಂಡು, 'ಮೌನವೇಕೆ ?' ಎಂದು ಕೇಳಿದಳು.

ದಿಗ್ಗಜ—ನ್ಯಾ—ನ್ಯಾ—ನ್ಯಾ—ತಾ—ತಾ—ತ— ಎನ್ನುತ್ತಿದ್ದನು. ವಾಚಸ್ಪತ್ತಿಯಿಲ್ಲವಾಯಿತು.

ಆಶ್ಮನಿ—ಹಾಗಾದರೆ, ನೀನು ನಮ್ಮ ಸಂಗಡ ಬರಲಾರೆ ?

ದಿಗ್ಗಜ—ನ್ಯಾಯಶಾಸ್ತ್ರಪಾಠವನ್ನು ಹೇಳುವ ಗುರುಗಳಿಗೆ ಹೇಳಿ ಬರುವೆನು.

ವಿಮಲೆ—ಗುರುಗಳಲ್ಲಿ ಹೋಗಿ ವ್ಯವಸ್ಥೆಮಾಡಿಕೊಂಡು ಬರುವುದಕ್ಕಿಂದು ನಿಮ್ಮ ತಾಯಿಯ ಶ್ರಾದ್ಧವೆ ?

ದಿಗ್ಗಜ—ಹಾಗಾದರೆ, ಬೇಡ, ನಾನು ಹೋಗುವುದಿಲ್ಲ, ಆದರೆ ಎಂದು ಹೊರಡಬೇಕು ?

ವಿಮಲೆ—ಈಗಲೇ ಹೊರಡು. ಕಾಣುವುದಿಲ್ಲವೆ ? ನಾನು ನನ್ನ ಆಭರಣಗಳೊಡನೆ ಬಂದಿರುವುದು ?

ದಿಗ್ಗಜ—ಈಗಲೇವೇ ?

ವಿಮಲೆ—ಕೂಡದೇಕೆ ? ಬೇಕಿಲ್ಲದಿದ್ದರೆ ಬರುವುದಿಲ್ಲವೆಂದು ಹೇಳು. ನಾವು ಮತ್ತೊಬ್ಬನನ್ನು ಹುಡುಕಿಕೊಂಡು ಹೋಗುವೆವು. ಆದರೆ ನಮ್ಮ ಮನಸ್ಸನ್ನೇನೋ ನಿನ್ನಲ್ಲಿಟ್ಟು ಹೋಗುವೆವು.

ಗಜಪತಿಯು ಹೆಚ್ಚು ತಾಳಲಾರದೆ, 'ನಡಿ, ಬರುತ್ತೇನೆ' ಎಂದು ಹೇಳಿದನು.

ವಿಮಲೆ—ಹೊದ್ದುಕೊಳ್ಳುವುದಕ್ಕೆ ಭೈರವಾಸವನ್ನು ತೆಗೆದುಕೊ.

ದಿಗ್ಗಜನು ಶೇಷವಸ್ತ್ರವನ್ನು* ಮೈಮೇಲೆ ಹಾಕಿಕೊಂಡನು. ವಿಮಲೆಯು ಹೊರಡಲು ಸನ್ನದ್ಧಳಾದಳು. ಅವಳ ಹಿಂದೆ ದಿಗ್ಗಜನು ಹೊರಟವನು ವಿಮಲೆಯನ್ನು ಕುರಿತು, 'ಸುಂದರಿ!' ಎಂದು ಕೂಗಿದನು.

ವಿಮಲೆ—ಏನು?

ದಿಗ್ಗಜ—ನಾವು ಹಿಂದಿರುಗಿ ಬರುವುದಾವಾಗ?

ವಿಮಲೆ—ಹಿಂದಿರುಗಿ ಬರುವುದೆ? ಕಡೆಕಟ್ಟಾಗಿ ಒಮ್ಮೆಗೆ ಹೊರಟು ಹೋಗುವುದು.

ದಿಗ್ಗಜನು ಮಂದಹಾಸಪರಿಪೂರ್ಣವದನನಾಗಿ, 'ನನ್ನ ತಪಲೆ ಚೊಂಬು ಹಿಂದುಳಿದು ಹೋಯಿತಲ್ಲಾ!' ಎಂದನು.

ವಿಮಲೆ—ಅದನ್ನೆಲ್ಲಾ ಹೋದೆಡೆ ತೆಗೆದುಕೊಡುತ್ತೇನೆ.

ಬ್ರಾಹ್ಮಣನು ಸ್ವಲ್ಪ ವ್ಯಸನಪಟ್ಟು ಪ್ರತಿಹೇಳಿದರೆ ಹೆಂಗಸರು ತಮ್ಮಲ್ಲಿ ವಿಶ್ವಾಸವಿಲ್ಲದವನೆಂದು ತಿಳಿಯುವರೆಂಬ ಭೀತಿಯಿಂದ ನಿರ್ವಾಹವಿಲ್ಲದೆ, 'ಹಾಗಾದರೆ ನನ್ನ ಹಣಚಿಂಟಿಗೆಯನ್ನಾದರೂ ತರುವೆನು' ಎಂದನು.

ವಿಮಲೆ—ಶೀಘ್ರವಾಗಿ ತೆಗೆದುಕೊಂಡು ಬಾ.

ವಿದ್ಯಾದಿಗ್ಗಜನು ಹಣೆಗೆ ಹಚ್ಚುವ ನಾಮದ ಪೆಟ್ಟಿಗೆಯನ್ನೂ ಒಂದು ಚೊಂಬಿನಲ್ಲಿ ತುಂಬಾ ಅವಲಕ್ಕಿಯನ್ನೂ ತೆಗೆದುಕೊಂಡು ಹಾಗೆಯೇ ಅವನಲ್ಲಿದ್ದ ವ್ಯಾಕರಣ ಸ್ಮೃತಿಸಂಹಿತೆಗಳ ಪುಸ್ತಕಗಳನ್ನು ನೋಡಿ, ವ್ಯಾಕರಣವು ತನಗೆ ಕಂಠಸ್ಥವಾಗಿದೆಯೆಂದೆಂದುಕೊಂಡು, ಅದನ್ನು ಅಲ್ಲಿಯೇ ಬಿಟ್ಟು ಸ್ಮೃತಿಯನ್ನು ಪೆಟ್ಟಿಗೆಯೊಂದಿಗೆ ಕಟ್ಟಿ, ಎದ್ದು, 'ಮುಖ್ಯಪ್ರಾಣ!—ಶ್ರೀಹರಿ! ವೆಂಕಟ್ರಮಣಾ!' ಎಂದು ದೇವರ ಸ್ಮರಣೆಯನ್ನು ಮಾಡುತ್ತಾ, ವಿಮಲೆ ಆಶ್ಮನಿಯರ ಹಿಂದೆ ಯಾತ್ರೆಗೋಸ್ಕರ ಹೊರಟನು.

ಆಶ್ಮನಿಯು, 'ನೀವು ಮುಂದೆ ಹೋಗುತಿರಿ, ನಾನು ಹಿಂದೆ ಬರುವೆನು' ಎಂದು ಹೇಳಿ ಮನೆಯ ಕಡೆಗೆ ಹೊರಟುಹೋದಳು. ವಿಮಲೆ ಮತ್ತು ಗಜಪತಿ ಇವರಿಬ್ಬರು ಮುಂದೆ ತೆರಳಿ ಅಂಧಕಾರದಲ್ಲಾರಿಗೂ ಕಾಣಿಸಿಕೊಳ್ಳದೆ ಕೋಟೆಯ ಬಾಗಿಲನ್ನು ದಾಟಿದರು. ಸ್ವಲ್ಪ ದೂರ ಹೋದ ಬಳಿಕ ದಿಗ್ಗಜನು, 'ಇದೇನು? ಆಶ್ಮನಿಯು ಬರಲೇ ಇಲ್ಲ!' ಎಂದನು.

ವಿಮಲೆ—ಅವಳು ಬರಲಾರಳೆಂದು ತೋರುತ್ತೆ. ಅವಳಿಂದೇನಾಗಬೇಕು?

* ಶೇಷವಸ್ತ್ರ=ಗುರುಗಳು ಉಪಯೋಗಿಸಿ ಅನುಗ್ರಹರೂಪವಾಗಿ ಶಿಷ್ಯನಿಗೆ ಕೊಟ್ಟ ಬಟ್ಟೆ.

ರಸಿಕರಾಜನು ಮೌನವಾಗಿದ್ದು, ಬಳಿಕ ನಿಟ್ಟುಸಿರನ್ನು ಬಿಟ್ಟು, 'ನನ್ನ ತಪಲೆ ಚೊಂಬು !' ಎಂದು ಹೇಳಿದನು.

---

## ಹದಿನೈದನೆಯ ಪರಿಚ್ಛೇದ

### ದಿಗ್ಗಜ ಸಾಹಸ

ವಿಮಲೆಯು ವೇಗವಾಗಿ ನಡೆಯುತಿದ್ದುದರಿಂದ ಸ್ವಲ್ಪ ಹೊತ್ತಿನಲ್ಲಿಯೇ ಮಂದಾರಣವು ಬಹಳ ದೂರ ಹಿಂದುಳಿಯಿತು. ರಾತ್ರಿ ಕತ್ತಲು; ನಕ್ಷತ್ರದ ಬೆಳಕಿನಲ್ಲಿ ಜಾಗರೂಕತೆಯಿಂದ ನಡೆಯುತ ದೊಡ್ಡ ಮಾರ್ಗಕ್ಕೆ ಸೇರುತಲೆ, ವಿಮಲೆಯು ಸ್ವಲ್ಪ ಶಂಕಾನ್ವಿತೆಯಾದಳು. ಸಂಗಡ ಬರುತ್ತಿದ್ದವನು ನಿಶ್ಯಬ್ದವಾಗಿ ಹಿಂದೆ ಬರುತ್ತಿದ್ದನು; ಮಾತಿಲ್ಲ. ಅಂತಹ ಸಮಯದಲ್ಲಿ ಮನುಷ್ಯರ ಶಬ್ದವನ್ನು ಕೇಳಿದರೆ ಧೈರ್ಯವುಂಟಾಗುವುದಲ್ಲದೆ ಕೇಳುವುದಕ್ಕೂ ಇಚ್ಛೆಯುಂಟಾಗುವುದು. ಆದಕಾರಣ ವಿಮಲೆಯು ಗಜಪತಿಯನ್ನು ಕುರಿತು, 'ರಸಿಕರತನ! ಏನನ್ನು ಕುರಿತು ಯೋಚಿಸುತ್ತಿರುವೆ?' ಎಂದು ಕೇಳಿದಳು. ರಸಿಕರತನನು 'ತಪಲೆ ಚೊಂಬು' ಎಂದನು. ವಿಮಲೆಯು ಏನೊಂದುತ್ತರವನ್ನೂ ಕೊಡದೆ ತನ್ನೊಳುತಾನೇ ನಕ್ಕು, ಬಳಿಕ ದಿಗ್ಗಜನನ್ನು ಕುರಿತು, 'ನೀನು ಪಿಶಾಚಿಗೆ ಹೆದರುವುದುಂಟೆ?' ಎಂದು ಕೇಳಿದಳು.

ದಿಗ್ಗಜನು, 'ರಾಮ ! ರಾಮ !' ಎಂದು ರಾಮಸ್ಮರಣೆ ಮಾಡೆಂದು ಹೇಳಿ, ವಿಮಲೆಗೊಂದು ಗಜ ಸಮೀಪ ಬಂದನು.

ವಿಮಲೆಯು ಅದನ್ನು ಕಂಡು, 'ಮಾರ್ಗದಲ್ಲಿ ಪಿಶಾಚಿಗಳು ಹೆಚ್ಚು' ಎಂದು ಹೇಳೋಣ, ದಿಗ್ಗಜನು ಬಂದು ವಿಮಲೆಯ ಸೆರಗನ್ನು ಹಿಡಿದುಕೊಂಡನು. ವಿಮಲೆಯು ಮುಂದೆ ಹೇಳತೊಡಗಿದಳು:—'ನಾವು ಅಂದು ಶೈಲೇಶ್ವರನ ಪೂಜೆಗೆ ಸಲುವಾಗಿ ಬರುತ್ತಿದ್ದಾಗ ಮಾರ್ಗದಲ್ಲಿ ಅರಳೀಮರದ ಬುಡದಲ್ಲೊಂದು ಅದ್ಭುತ ವಿಕಟಾಕಾರದ ಸ್ವರೂಪವು ಕುಳಿತಿತ್ತು' ಎಂದಳು.

ವಿಮಲೆಯ ಸೆರಗು ಪಟ ಪಟ ಬಡಿದುದರಿಂದ, ಬ್ರಾಹ್ಮಣನು ಥರ ಥರ ನಡುಗುತ್ತಿದ್ದನೆಂದು ತಿಳಿದು, ಹೆಚ್ಚು ಹೆದರಿಸಿದರೆ ಬ್ರಾಹ್ಮಣನ ಗತಿಶಕ್ತಿಯು ನಿಂತು ಹೋಗುವುದೆಂದು ಸುಮ್ಮನಾಗಿದ್ದು ಸ್ವಲ್ಪ ಹೊತ್ತಾದ ಬಳಿಕ ವಿಮಲೆಯು 'ರಸಿಕರಾಜ! ನಿನಗೆ ಹಾಡುವುದಕ್ಕೆ ಬರುವುದೆ?' ಎಂದು ಕೇಳಿದಳು.

ರಸಿಕಪುರುಷನು, 'ಸಂಗೀತವು ಬಾರದಿರುವುದಾರಿಗೆ? ತಥಾಪಿ ರಸಿಕರಿಗೆ ಕೇಳಬೇಕೇ?' ಎಂದನು.

ವಿಮಲೆಯು, ಹಾಗಾದರೆ, ಆವುದಾದರೂ ಒಂದು ಗೀತವನ್ನು ಹಾಡು ಎಂದಳು.

ದಿಗ್ಗಜನು ಪ್ರಾರಂಭಿಸಿದನು: ಹುಂ—ಉ—ಹುಂ—

**ಲಾವಣಿ** ॥ ಶರಣು ವಿಮಲೆಯು ಚರಣಕೆ ॥ ಪಲ್ಲವಿ ॥

ತಪ್ಪಲೆ ಚೊಂಬು ಬಿಟ್ಟು,
ಈ ಪರಿಯು ಕಪ್ಪಾನೆ ಕತ್ತಲೇಲಿ,
(ಅಯ್ಯಯ್ಯೊ) ಈ ಪರಿಯು ಕಪ್ಪಾನೆ ಕತ್ತಲೇಲಿ
ಆ ಪಾಪಿಯನು ನಂಬಿ ಈ ಪಾಪಿಯೊಡ ಬಂದು
ನಾ ಪಾಪಿಯಾದೆ ಹರನೆ,
ಹರನೆ, ಶರಣು ವಿಮಲೆಯು ಚರಣಕೆ—

ಎಂದು ಪಲ್ಲವಿಯು ಮುಗಿಯುವುದರೊಳಗೆ ಮಾರ್ಗದ ಪಕ್ಕದಲ್ಲಿ ನಿರಾತಂಕವಾಗಿ ಮೆಲಕುಹಾಕುತ್ತಾ ಮಲಗಿದ್ದೊಂದಾಕಳು ಅಸಾಧ್ಯವಾದಾ ಸಂಗೀತವನ್ನು ಕೇಳಿ ಭಯಪಟ್ಟು ಪ್ರಾಣದಮೇಲೆ ಆಶೆಯಿಲ್ಲದೆ ಪಲಾಯನವಾಗಿ ಓಡಿಹೋಯಿತು.

ದಿಗ್ಗಜನು ಬಿಡದೆ ಸ್ವಲ್ಪ ಹೊತ್ತು ಹಾಡಿದನು:—

ಭೋಜನವ ಬಿಟ್ಟಿದ್ದೆನು.
ದ್ವಿಜನಾಗಿ ಬಿಟ್ಟದನು ಮತ್ತುಂಡೆನು,
(ಅಯ್ಯಯ್ಯೊ) ಯಂಜಲನು ನಾ ತಿಂದೆನು,
ಮಜ್ಜನವ ಮಾಡಿದೆನು ಯಂಜಲಿನ ನೀರಿನಲಿ,
ಸೋಜಿಗವಿದಾಯ್ತು ಜಗಕೆ, ಹರನೆ,
ಶರಣು ವಿಮಲೆಯು ಚರಣಕೆ—
ತಂಬುಲವ ತಿಂದುದಾಯ್ತು,
ಕುಂಭಮುದ ಶಿರದಲ್ಲಿ ಮುಕುಟಮಾಯ್ತು,
ತಂಬಿಗೆಯು ಅರಳ್ಬಿಟ್ಟು ಭಸ್ಮಮಾಯ್ತು,
ಕಂಬು ಕಂಧರಿಯೆಂದು ನಂಬಿ ನಾನೀ
ಪರಿಯು ಕಷ್ಟಕೀಡಾದೆ ಹರನೆ,
ಹರನೆ, ಶರಣು ವಿಮಲೆಯು ಚರಣಕೆ—

ಪುನಃ ಹಾಡಲುದ್ಯಮಿಸಿದನು. ಆದರೆ ಅವನ ಹಾಡು ಸಾಗದೆ ನಿಂತಿತು. ಹಟಾತ್ತು ಅವನ ಶ್ರವಣೇಂದ್ರಿಯವು ಮುಗ್ಧವಾಗಿ ಅಮೃತಮಯಮಾನಸೋನ್ಮಾದಕ ಅಪ್ಸರಹಸ್ತಸ್ಥಿತ ವೀಣಾನಾದದಂತೆ ಮಧುರವಾದ ಸಂಗೀತ ಧ್ವನಿಯೊಂದವನ ಕಿವಿಗೆ ಬಿದ್ದಿತು—ವಿಮಲೆಯು ಸ್ವಂತವಾಗಿ ತನ್ನ ಪೂರ್ಣ ಸ್ವರದಿಂದ ಸಂಗೀತವನ್ನು ಆರಂಭ ಮಾಡಿದ್ದಳು. ಅದು ಅಷ್ಟಪದಿಯಲ್ಲೊಂದು ಚರಣವಾಗಿದ್ದಿತು—

ಯಾಹಿ ಮಾಧವ ಯಾಹಿ ಕೇಶವ
ಮಾವದ ಕೈತವ ವಾದಂ ॥

ಎಂದು ಕೇತಾರಗೌಳದಲ್ಲಿ ಹಾಡುತ್ತಿರಲು, ನಿಶ್ಶಬ್ದವಾದಾ ಮಾರ್ಗದ ಮಧ್ಯದಲ್ಲಿ ಗಗನವು ಅವಳಾ ಸಪ್ತಸ್ವರ ಪರಿಪೂರ್ಣ ಧ್ವನಿಯಿಂದ ವ್ಯಾಪ್ತ ವಾಯಿತು. ಧ್ವನಿಯು ಶೀತಲವಾದಾ ಮಂದಮಾರುತನೊಡನೆ ಸಮ್ಮಿಶ್ರವಾಗಿ ಹೋಗುತಿತ್ತು.

ದಿಗ್ಗಜನು ಉಸಿರುಬಿಡದೆ ಕೇಳುತಿದ್ದನು. ವಿಮಲೆಯು ಗಾನವನ್ನು ನಿಲ್ಲಿಸಲು, ಗಜಪತಿಯು 'ಮತ್ತೂ ಸ್ವಲ್ಪ' ವೆಂದನು.

ವಿಮಲೆ—ಮತ್ತೂ ಸ್ವಲ್ಪವೆಂದರೇನು ?

ದಿಗ್ಗಜ—ಮತ್ತೊಂದು ಹಾಡು.

ವಿಮಲೆ—ಆವುದನ್ನು ಹಾಡಲಿ?

ದಿಗ್ಗಜ—ಒಂದು ಕೃತಿಯನ್ನು ಹಾಡು.

ಆಗಲಾ ವಿಮಲೆಯು ಹಾಡುವೆನೆಂದು ಹೇಳಿ ತನ್ನ ಮನಸ್ಸನ್ನು ಸ್ವರ ದೊಳೊಳಪಡಿಸಿ ತದೇಕಾಯತ್ತಳಾಗಿ ಸಂಗೀತವನ್ನು ಹಾಡುತಿದ್ದಾಗ ಒಮ್ಮಿಂ ದೊಮ್ಮೆ ಅವಳ ಚೇಲಾಂಚಲವನ್ನು* ಹಿಡಿದೆಳೆದಹಾಗಾಗಲು ಏನಾಶ್ಚರ್ಯ ವೆಂದು ಹಿಂದಿರುಗಿ ನೋಡುವುದರೊಳಗಾಗಿ, ಗಜಪತಿಯು ಪ್ರಾಣ ಬಿಡುವವನ ಹಾಗೆ, ಅವಳ ಸೆರಗನ್ನು ಭದ್ರಮುಷ್ಟಿಯಿಂದ ಹಿಡಿದು, ಬಿಡದೆ ಅದಕ್ಕೆ ತೂಡರಿ ಕೊಂಡು ಬಂದು ಅವಳ ಕಾಲಿನಮೇಲೆ ಬಿದ್ದನು. ವಿಮಲೆಯು, ಮೃತಪ್ರಾಯ ನಾಗಿ ಕಾಲಿನಮೇಲೆ ಬಿದ್ದಾ ಗಜಪತಿಯನ್ನು ನೋಡಿ ಆಶ್ಚರ್ಯಪಟ್ಟು, 'ಏನಾ ಯಿತು? ಪುನಃ ಪಿಶಾಚಿಯು ಬಂದಿತೆ?' ಎಂದು ಕೇಳಿದಳು. ಬ್ರಾಹ್ಮಣನು ಉತ್ತರವು ಹೊರಡದೆ ಬೆರಳಸನ್ನೆಯಿಂದ 'ಗೋ ಗೋ!' ಎಂದುಸುರಿದನು.

ವಿಮಲೆಯು ನಿಸ್ತಬ್ಧೆಯಾಗಿ ಅತ್ತಕಡೆ ದೃಷ್ಟಿಸಿ ನೋಡಿದಳು. ದೀರ್ಘ ನಿಶ್ವಾಸವನ್ನು ಬಿಡುವಂತೆ ಶಬ್ದವು ಕೇಳಿ ಬಂದು ಅತ್ತೆಡ ಮಾರ್ಗವನ್ನು ಬಿಟ್ಟು ಪಾರ್ಶ್ವದಲ್ಲಿದ್ದಾವದೋ ಒಂದು ಪದಾರ್ಥವು ಕಣ್ಣಿಗೆ ಕಂಡಿತು. ಆಗವಳು ಧೈರ್ಯಾವಲಂಬನೆಯಿಂದ ಹತ್ತಿರ ಹೋಗಿ ನೋಡಿದಳು. ಆರೋಹಿಸುವುದಕ್ಕೆ ಸಿದ್ಧವಾಗಿರುವಂತೆ ತಡಿ, ಕಡಿವಾಣ ಮುಂತಾದುವುಗಳೊಡನೆ ಶೋಭಿಸುತಿದ್ದ ತುರಗವಾಗಿ ಪೂರಾ ಪೆಟ್ಟುಬಿದ್ದು ಪ್ರಾಣಯಾತನೆಯಿಂದ ಉಚ್ಛ್ವಾಸ ನಿಶ್ವಾಸ ಗಳನ್ನು ಬಿಡುತ್ತ ಬಿದ್ದಿದ್ದಿತು. ಅದನ್ನು ನೋಡಿ ವಿಮಲೆಯು ಪುನಃ ತನ್ನ ಮಾರ್ಗವನ್ನು ಹಿಡಿದುಕೊಂಡು ಹೋಗುತ್ತ ಸುಸಜ್ಜೀಭೂತವಾದಾ ಸೈನ್ಯದ ಕುದುರೆಯು ಮಾರ್ಗದಲ್ಲಿ ಮುಮೂರ್ಷಾವಸ್ಥೆಯಲ್ಲಿ ಬಿದ್ದಿರಲೇಕೆಂದು ಅತ್ಯಂತ ಚಿಂತಾಕ್ರಾಂತೆಯಾಗಿ, ಬಹಳ ಹೊತ್ತು ಮಾತನಾಡದೆ ಅರ್ಧ ಹರಿದಾರಿ ಮುಂದಕ್ಕೆ ಸಾಗಿಹೋದಳು. ಆಗ ಗಜಪತಿಯು ಪುನಃ ಅವಳ ಸೆರಗನ್ನು ಹಿಡಿದೆಳೆದನು.

---

* ಚೇಲಾಂಚಲವನ್ನು=ಉತ್ತರೀಯದ ಸೆರಗನ್ನು.

ವಿಮಲೆಯು ಏನೆಂದು ಕೇಳಿದಳು. ಗಜಪತಿಯು ದಾರಿಯಲ್ಲಿ ಬಿದ್ದಿದ್ದೊಂದು ಬಟ್ಟೆಯನ್ನು ತೆಗೆದು ತೋರಿದನು. ಅದೊಬ್ಬ ಅಶ್ವಾರೋಹಿಯ ಉಷ್ಣೀಷವಾಗಿದ್ದಿತು. ವಿಮಲೆಯು ಅದನ್ನು ನೋಡಿ ಪುನಃ ಮತ್ತಷ್ಟು ಚಿಂತಾಕ್ರಾಂತೆಯಾಗಿ ಮನಸ್ಸಿನಲ್ಲಿ, ಮಾರ್ಗದಲ್ಲಿ ಸಾಯುತ ಬಿದ್ದಿದ್ದ ಕುದುರೆ ಯಾರದೋ, ಈ ರುಮಾಲು ಸಹ ಅವನದೇ ಆಗಿರಬಹುದೇ? ಎಂದು ಯೋಚಿಸಿ, ಪುನಃ ಹಾಗಿರಲಾರದು, ಆದಾವನೋ ಪಾದಚಾರಿಯಾದೊಬ್ಬ ಯೋಧಿಯ ರುಮಾಲಾಗಿರಬೇಕೆಂದು ಯೋಚಿಸುತಿರುವುದರಲ್ಲಿ ಚಂದ್ರೋದಯವಾಯಿತು. ವಿಮಲೆಯು ಮತ್ತೂ ಹೆಚ್ಚು ಚಿಂತಾಮಗ್ನಳಾದಳು. ಆಗ ಗಜಪತಿಯು ಧೈರ್ಯಗೊಂಡು ವಿಮಲೆಯನ್ನು ಕುರಿತು, 'ಸುಂದರಿ! ಮಾತನಾಡುವುದಿಲ್ಲವೇಕೆ?' ಎಂದು ಕೇಳಿದನು.

ವಿಮಲೆ—ಮಾರ್ಗದಲ್ಲಾವುದಾದರೂ ಗುರುತುಗಳು ಕಾಣುತ್ತಿನೆಯೆ?

ಗಜಪತಿ—(ದೃಷ್ಟಿಸಿ ನೋಡಿ) ಅಹುದು; ಅನೇಕ ಕುದುರೆಗಳು ಹೋದಹಾಗೆ ಗುರುತುಗಳಿವೆ.

ವಿಮಲೆ—ನೀನು ಬುದ್ಧಿವಂತನೇ ಅಹುದು, ಅದರಿಂದ ನೀನೇನೆಂದೂ ಹಿಸುತ್ತಿ?

ಗಜಪತಿ—ನನಗಾವದೂ ಗೊತ್ತಾಗುವುದಿಲ್ಲ.

ವಿಮಲೆ—ಅಲ್ಲಿ ಪೂರಾ ಪೆಟ್ಟುಬಿದ್ದ ಕುದುರೆ, ಮತ್ತೊಂದೆಡೆ ಒಬ್ಬ ಯೋಧಿಯ ರುಮಾಲು, ಇಲ್ಲಿ ಇಷ್ಟೊಂದು ಕುದುರೆಗಳ ಹಜ್ಜೆಯ ಕುರುಹುಗಳು —ಇವುಗಳನ್ನೆಲ್ಲಾ ನೋಡಿದರೂ ಏನೂ ಗೊತ್ತಾಗುವುದಿಲ್ಲವೆ? ನಾನಾರ ಸಂಗಡ ಮಾತನಾಡುತ್ತೇನೆ? ಎಲ್ಲಿ ಕೇಳುತಿ?

ದಿಗ್ಗಜ—ಏನು?

ವಿಮಲೆ—ಈ ಮಾರ್ಗವಾಗಿ ಬಹಳ ಸೈನ್ಯವು ಹೋಗಿರುವಹಾಗೆ ಕಾಣುವುದಿಲ್ಲವೆ?

ಗಜಪತಿಯು ಭಯಗೊಂಡು, 'ಹಾಗಿದ್ದರೆ ನಾವು ಮೆಲ್ಲನೆ ಹೋಗೋಣ, ಅವರು ಮುಂದೆ ಹೋಗಲಿ' ಎಂದನು.

ವಿಮಲೆಯು ನಕ್ಕು, 'ಅಯ್ಯೋ ಮೂರ್ಖ! ಅವರು ಮುಂದೆ ಹೇಗೆ ಹೋಗುವರು? ಕುದುರೆಗಳ ಗೊರಸಿನ ಗುರುತುಗಳಾವಕಡೆ ತಿರುಗಿವೆ, ಕಾಣುವುದಿಲ್ಲವೆ? ಕುದುರೆಗಳು ಮಂದಾರಣದುರ್ಗದ ಕಡೆಗೆ ಹೋಗಿವೆ' ಎಂದು ಹೇಳಿ, ವ್ಯಸನಗೊಂಡು ಮುಂದೆ ಸ್ವಲ್ಪ ದೂರ ಹೋಗುವುದರೊಳಗೆ ಧವಳಾಕಾರ ರಾಶಿಯಂತಿದ್ದ ಶೈಲೇಶ್ವರನ ಮಂದಿರವು ಕಣ್ಗೊಳಿಸಿತು. ಆಗವಳು ಮನಸ್ಸಿನಲ್ಲಿ, ಬ್ರಾಹ್ಮಣನನ್ನು ನೋಡುವುದರಿಂದ ರಾಜಕುಮಾರನಿಗಾವ ಪ್ರಯೋಜನವೂ ಇಲ್ಲ, ಅದರಿಂದ ತೊಂದರೆಯೇ ಸಂಭವಿಸುವುದಾದಕಾರಣ ಹಿಂದಕ್ಕವನನ್ನು

ಕಳುಹಿಸುವ ಬಗೆಯನ್ನು ಕುರಿತು ಯೋಚಿಸುತ್ತಿರಲಾಗಿ, ದಿಗ್ಗಜನು ವಿಮಲೆಯ ಬಳಿಗೆ ಓಡಿಬಂದು ಅವಳ ಸೆರಗನ್ನು ಹಿಡಿದುಕೊಂಡನು.

ವಿಮಲೆ—ಮತ್ತೇನು ಬಂದಿತು?

ದಿಗ್ಗಜನು ಅಸ್ಫುಟ ಸ್ವರದಿಂದ, 'ಅದು ಮತ್ತೆಷ್ಟು ದೂರ?' ಎಂದು ಕೇಳಿದನು.

ವಿಮಲೆ—ಆವದು?

ದಿಗ್ಗಜ—ಆ ವಟವೃಕ್ಷಕ್ಕೆ?

ವಿಮಲೆ—ಆವ ವಟವೃಕ್ಷಕ್ಕೆ?

ದಿಗ್ಗಜ—ನೀವು ಅಂದು ವಟವೃಕ್ಷದ ಹತ್ತಿರ ನೋಡಿದುದು?

ವಿಮಲೆ—ನೋಡಿದ್ದುದಾವುದು?

ದಿಗ್ಗಜ—ರಾತ್ರಿ ಹೊತ್ತು ಹೆಸರನ್ನು ಹೇಳಕೂಡದುದು.

ವಿಮಲೆಯು ಸಂಗತಿಯನ್ನರಿತವಳಾಗಿ ಸಮಯವು ಸಿಕ್ಕಿತೆಂದು ಭಾವಿಸಿ ಗಂಭೀರ ಸ್ವರದಿಂದ, 'ಓ! ಅದೇ!' ಎಂದಳು.

ಬ್ರಾಹ್ಮಣನು ಯತ್ಪರೋನಾಸ್ತಿ ಭಯಗ್ರಸ್ತನಾಗಿ, 'ಸಂಗತಿಯೇನು? ದಯವಿಟ್ಟು ಹೇಳು' ಎಂದನು.

ವಿಮಲೆಯು ಮೆಲ್ಲನೆ ಶೈಲೇಶ್ವರನ ಮಂದಿರಕ್ಕೆ ಸಮೀಪದಲ್ಲಿದ್ದ ವಟವೃಕ್ಷವನ್ನು ತೋರುತ್ತ 'ಅದಾ ವಟವೃಕ್ಷ'ವೆಂದಳು.

ದಿಗ್ಗಜನು ಕೇಳಿ ಮುಂದಕ್ಕೆ ಹಜ್ಜೆಯಿಡಲಿಲ್ಲ. ಅರಳೀಮರದೆಲೆಯಂತೆ ನಡುಗುತ ನಿಂತನು.

ವಿಮಲೆಯು ಮುಂದೆ ಬರಹೇಳಿದಳು. ಬ್ರಾಹ್ಮಣನು ಕಂಪಿತ ಕಳೇಬರನಾಗಿ, 'ಮುಂದೆ ಬರಲಾರೆನು' ಎಂದನು.

ವಿಮಲೆಯು ತನಗೂ ಭಯವಾಗುವುದಾಗಿ ಹೇಳಿದಳು.

ಬ್ರಾಹ್ಮಣನದನ್ನು ಕೇಳಿ ಒಂದು ಕಾಲನ್ನು ಹಿಂದಕ್ಕಿಟ್ಟು ಪಲಾಯನೋದ್ಯುತನಾದನು.

ವಿಮಲೆಯು ದೃಷ್ಟಿಸಿ ನೋಡಿದಳು. ವಟವೃಕ್ಷದ ಕೆಳಗಡೆ ಬಿಳುಪಾದೊಂದು ಪದಾರ್ಥವಿದ್ದಂತೆ ಕಂಡಿತು. ಗುಡಿಯ ಗೂಳೀಬಸವವು ಮಲಗಿರಬಹುದೆಂದೂಹಿಸಿ, ಗಜಪತಿಯನ್ನು ಕುರಿತು, 'ಗಜಪತಿ! ನಿನ್ನಿಷ್ಟ ದೇವತೆಯ ಹೆಸರನ್ನು ಧ್ಯಾನಿಸು, ವೃಕ್ಷಮೂಲದಲ್ಲಿರುವುದನ್ನು ನೋಡಿದಿಯಾ?' ಎಂದಳು.

ಗಜಪತಿಯು, 'ಅಯ್ಯಯ್ಯೋ! ಅಪ್ಪಪ್ಪಾ! ನಾನಿಲ್ಲಿಗೆ ಬರಬಹುದೆ! ಕೆಟ್ಟೆನಲ್ಲಾ! ಮುಂದೇನು ಗತಿ!' ಎಂದು ಕೂಗುತ ದಿಕ್ಕೆಟ್ಟು ಹಿಂದಿರುಗಿ ನೋಡದೆ ಓಡಿದನು. ಪಾಠಕ ಮಹಾಶಯರಿಗೆ ಅವನ ಕಾಲಿನ ಪ್ರಮಾಣವನ್ನು ಕುರಿತು ಮೊದಲೇ ಹೇಳಿರುವೆವಷ್ಟೆ. ಆ ಕಾಲುಗಳಿಂದ ಮೂರುಹಜ್ಜೆಯನ್ನು

ಹಾಕುತ್ತಾ, ಒಂದೆರಡು ನಿಮಿಷಗಳಲ್ಲಿ ಎರಡು ಮೈಲಿಯ ದೂರ ಪಾರಾಗಿ ಹೋದನು. ವಿಮಲೆಯು ಗಜಪತಿಯ ಸ್ವಭಾವವನ್ನರಿತಿದ್ದಳಾಗಿ ಅವನು ಮಂದಾರಣದ ಕೋಟೆಯ ಬಾಗಿಲಲ್ಲಿ ಹೋಗಿ ನಿಂತಿರುವನೆಂದು ತಿಳಿದು ನಿಶ್ಚಿಂತೆಯಾಗಿ ಶೈಲೇಶ್ವರನ ಮಂದಿರಾಭಿಮುಖವಾಗಿ ಹೋದಳು.

ಮನೆಯನ್ನು ಬಿಟ್ಟು ಹೊರಟಾಗ ಸಂಗತಿಯನ್ನೆಲ್ಲಾ ಮುಂದಾಗಿ ಯೋಚಿಸಿ ಹೊರಟ ವಿಮಲೆಯು, ಕುಮಾರನು ಶೈಲೇಶ್ವರನ ಮಂದಿರಕ್ಕೆ ಬಂದಿರುವನೆ? ಎಂಬ ಸಂಗತಿಯನ್ನು ಯೋಚಿಸಿರಲಿಲ್ಲ. ಅದಕ್ಕೆ ಸಲುವಾಗಿ ಕಳವಳಗೊಂಡು, ನಿಸ್ತಬ್ಧೆಯಾಗಿ ಸ್ವಲ್ಪ ಚಿಂತಿಸಿ ಬಳಿಕ ರಾಜಕುಮಾರನು ಅಂದು ತನ್ನನ್ನು ಮಂದಿರದಲ್ಲಿ ನೋಡದಿದ್ದರೆ, ಪುನಃ ಮತ್ತೆಲ್ಲಾದರೂ ನೋಡಲಾರೆನೆಂದು ಹೇಳಿದ್ದನೆ ಹೊರತು ಖಂಡಿತವಾಗಿ ಬರುವುದಾಗಿ ಹೇಳಿರಲಿಲ್ಲವಾದಕಾರಣ ಬಾರದಿರುವ ಸಂಭವವೇ ಹೆಚ್ಚಾಗಿ ತೋರುವುದೆಂದುಕೊಂಡಳು.

ರಾಜಕುಮಾರನು ಅಲ್ಲಿಗೆ ಬಂದಿರದಿದ್ದರೆ ಅಷ್ಟೊಂದು ಶ್ರಮವೂ ವ್ಯರ್ಥವಾದಹಾಗಾಗುವುದೆಂದು ವಿಮಲೆಯು ವಿಷಣ್ಣವದನೆಯಾಗಿ ತನ್ನೊಳುತಾನೇ, ಸಂಭವಗಳನ್ನೆಲ್ಲಾ ಯೋಚಿಸದೆ, ಬ್ರಾಹ್ಮಣನನ್ನು ಹಿಂದಕ್ಕಟ್ಟಿಬಿಟ್ಟೆನೇಕೆಂದೂ ರಾತ್ರಿ ಒಬ್ಬಳೇ ಹಿಂದಿರುಗಿ ಹೋಗುವ ಬಗೆ ಹೇಗೆಂದೂ ಮರಮರುಗಿ 'ಶೈಲೇಶ್ವರನ ಇಚ್ಛಾನುಸಾರವಾಗಲಿ' ಎಂದೆಂದುಕೊಂಡಳು.

ಶೈಲೇಶ್ವರನ ಮಂದಿರಕ್ಕೆ ಹೋಗಬೇಕಾದರೆ ವಟವೃಕ್ಷದ ತಳಗೆ ಹಾದು ಹೋಗಬೇಕು. ವಿಮಲೆಯೂ ಹಾದಿಗೊಂಡು ಹೋಗುತ ಮೊದಲವಳು ಮರದಡಿ ನೋಡಿದ ಧವಳಾಕಾರ ಪದಾರ್ಥವು ಕಂಡುಬರಲಿಲ್ಲವಾಗಿ ಸ್ವಲ್ಪ ಚಕಿತೆಯಾದಳು. ಗುಡಿಯು ಗೂಳಿಯಾಗಿದ್ದರೆ ಅದಲ್ಲಿಯೇ ಮೆಯ್ಯುತ್ತಿದ್ದಿತು. ಮೊದಲವಳು ಊಹೆಗೊಂಡುದುದು ತಪ್ಪೆಂದು ತಿಳಿದು ಅಲ್ಲೇ ನಿಂತು ವೃಕ್ಷಮೂಲವನ್ನು ದೃಷ್ಟಿಸಿ ನೋಡಿದಳು. ಮರದಾಚೆ ಆವನೋ ಮನುಷ್ಯನೊಬ್ಬನು ನಿಂತು ಅವನ ಬಿಳಿತಾದ ಉಡುಪಿನಲ್ಲಿ ಸ್ವಲ್ಪ ಭಾಗವು ಮಾತ್ರ ಕಂಡಿತು. ಅದನ್ನು ಕಂಡು, ಹೆಚ್ಚು ಭಯಗೊಂಡು ಕಳವಳಿಸುತ ಎರಡು ಮೂರು ಮೆಟ್ಟಿಲುಗಳನ್ನೊಟ್ಟೊಟ್ಟಾಗಿ ಹಾರಿ ಹತ್ತುತ್ತ ಸೋಪಾನ ಪಙ್ಕ್ತಿಯನ್ನು ಹತ್ತಿ ಮಂದಿರದ ಬಾಗಿಲಿಗೆ ಬಂದು ಬಾಗಿಲನ್ನು ಬಲವಾಗಿ ತಟ್ಟಿದಳು. ಬಾಗಿಲೊಳಗಣ ಅಗಣಿಯು ಹಾಕಲ್ಪಟ್ಟಿದ್ದಿತು.

ಒಳಗಾರೋ ಗಂಭೀರ ಸ್ವರದಿಂದ, 'ಯಾರು?' ಎಂದು ಕೂಗಿದರು. ಆ ಪ್ರಶ್ನೆಯು ಮಂದಿರದ ಮುಂಭಾಗದಲ್ಲಿ ಪ್ರತಿಧ್ವನಿತವಾಯಿತು.

ವಿಮಲೆಯು ಧೈರ್ಯಗೊಂಡು, 'ಪಥಶ್ರಾಂತೆಯಾದ ಹೆಂಗಸು' ಎಂದು ಉತ್ತರವನ್ನು ಕೊಟ್ಟಳು. ಬಾಗಿಲು ತೆರಿಯಲ್ಪಟ್ಟಿತು. ಮಂದಿರದೊಳಗೆ ದೀಪವು

ಉರಿಯುತಿದ್ದಿತು. ಅದರೆದುರಿಗೆ ಒರೆಕೂರಿಸಿದ ಕತ್ತಿಯನ್ನು ಹಿಡಿದು ದೀರ್ಘಾಕಾರ ಮನುಷ್ಯನೊಬ್ಬನು ನಿಂತಿದ್ದನು.

ವಿಮಲೆಯು ನೋಡಿದಳು. ಕುಮಾರ ಜಗತ್ಸಿಂಹನಾಗಿದ್ದನು.

---

## ಹದಿನಾರನೆಯ ಪರಿಚ್ಛೇದ

## ಶೈಲೇಶ್ವರನ ಸಾಕ್ಷಾತ್ತು

ವಿಮಲೆಯು ಮಂದಿರದೊಳಗೆ ಹೋಗಿ ದಣುವಾರಿಸಿಕೊಂಡು ನತಭಾವದಿಂದ ಶೈಲೇಶ್ವರನಿಗೆ ಪ್ರಣಾಮವನ್ನು ಮಾಡಿ, ಬಳಿಕ ರಾಜಕುಮಾರನಿಗೆ ಪ್ರಣಾಮವನ್ನು ಮಾಡಿದಳು. ಸ್ವಲ್ಪ ಹೊತ್ತು ತಮ್ಮ ತಮ್ಮ ಮನೋಭಾವವನ್ನು ವ್ಯಕ್ತಪಡಿಸಲಾರದೆ ಇಬ್ಬರೂ ಮೌನವಾಗಿದ್ದರು. ಇಬ್ಬರಿಗೂ ಚಿತ್ತಚಾಂಚಲ್ಯವುಂಟಾಗಿದ್ದಿತು. ಅಂತಹ ಸಂದರ್ಭದಲ್ಲಿ ಮಾತಿಗೆ ತೊಡಗುವ ಬಗೆ ಹೇಗೆ?

ಈ ವಿಚಾರಗಳಲ್ಲಿ ಸಂಧಿ ವಿಗ್ರಹಗಳನ್ನು ನಡೆಯಿಸುವುದರಲ್ಲಿ ಚತುರೆಯಾದ ವಿಮಲೆಯು ಹಾಸ್ಯವದನೆಯಾಗಿ ರಾಜಕುಮಾರನನ್ನು ಕುರಿತು, 'ಯುವರಾಜನೆ! ಶೈಲೇಶ್ವರನ ಅನುಗ್ರಹದಿಂದೆನಗೆ ತಮ್ಮ ಸಂದರ್ಶನವಾಯಿತು. ರಾತ್ರಿ ಮಾರ್ಗದಲ್ಲೊಬ್ಬಳೇ ಬರಲು ಭೀತಿಗೊಂಡಿದ್ದವಳಿಗೆ ನಿಮ್ಮ ಸಂದರ್ಶನದಿಂದ ಧೈರ್ಯವುಂಟಾಯಿತು' ಎಂದಳು.

ಯುವರಾಜ—ನಿಮ್ಮೆಲ್ಲೆಲ್ಲರೂ ಸೌಖ್ಯವಷ್ಟೆ?

ಯುವರಾಜನಿಗೆ ತಿಲೋತ್ತಮೆಯ ಮೇಲೆ ಅನುರಾಗವು ಹುಟ್ಟಿರುವುದೆ? ಅಥವಾ ಇಲ್ಲವೇ ಎಂಬುದನ್ನು ಪ್ರಥಮತಃ ತಿಳಿದು ಬಳಿಕ ಬೇರೆ ಪ್ರಸ್ತಾಪವನ್ನೆತ್ತಬೇಕೆಂದುದ್ದೇಶಿಸಿ ವಿಮಲೆಯು ಕುಮಾರನನ್ನು ಕುರಿತು, 'ಅಹುದು, ನಮಗೆ ಮಂಗಳವನ್ನೀಯಲೆಂದೆಳಸಿ ಶೈಲೇಶ್ವರನ ಪೂಜೆಗೆ ಸಲುವಾಗಿ ಬಂದವಳು ಇಲ್ಲಿ ನೋಡಿದರೆ, ಶೈಲೇಶ್ವರನು ನಿಮ್ಮ ಪೂಜೆಯಿಂದಲೇ ಪರಿತೃಪ್ತನಾಗಿ ನಮ್ಮ ಪೂಜೆಯನ್ನಂಗೀಕರಿಸುವಂತೆ ಕಾಣುವುದಿಲ್ಲವಾದಕಾರಣ ಅಪ್ಪಣೆಯನ್ನು ಕೊಟ್ಟರೆ ಹಿಂದಿರುಗಿ ಹೊರಟು ಹೋಗುವೆನು' ಎಂದಳು.

ಯುವರಾಜ—ಒಳ್ಳೆಯದು, ಹೋಗಬಹುದು, ಆದರೆ ನೀನೊಬ್ಬಳೇ ಹೋಗಕೂಡದು; ನಾನು ನಿನ್ನ ಸಂಗಡ ಬಂದು ಮನೆಯಲ್ಲಿ ಬಿಟ್ಟುಬರುವೆನು.

ವಿಮಲೆಯು, ರಾಜಕುಮಾರನು ನಿರಂತರವಾಗಿ ಯುದ್ಧಕಾರ್ಯದಲ್ಲಿಯೇ ಸಂಸಕ್ತ ಮನಸ್ಸುಳ್ಳವನಾಗಿರಲಿಲ್ಲವೆಂದು ತಿಳಿದು, 'ಒಬ್ಬಳೇ ಹೋಗಕೂಡದೇಕೆ?' ಎಂದು ಕೇಳಿದಳು.

ಯುವರಾಜ—ಮಾರ್ಗದಲ್ಲಿ ಅಪಾಯವುಂಟು.

ವಿಮಲೆ—ಹಾಗಿದ್ದರೆ, ನಾನು ಮಹಾರಾಜಾ ಮಾನಸಿಂಹನ ಬಳಿಗೆ ಹೋಗುವೆನು.

ಯುವರಾಜ—ಅಲ್ಲಿಗೆ ಹೋಗಲೇಕೆ?

ವಿಮಲೆ—ಆತನಲ್ಲೊಂದು ದೂರಿಡಬೇಕಾಗಿದೆ; ಆತನು ನಿಯಮಿಸಿದ ಸೇನಾಪತಿಯಿಂದ ನಮ್ಮ ಮಾರ್ಗದ ಭಯ ಕಂಟಕಗಳು ನಿವಾರಣೆ ಮಾಡಲ್ಪಡಲಿಲ್ಲ; ಸೇನಾಪತಿಯು ಶತ್ರು ನಾಶ ಮಾಡಲಸಮರ್ಥನೆಂದು ತೋರುತ್ತದೆ.

ಯುವರಾಜನು ಸ್ವಲ್ಪ ನಕ್ಕು, 'ಅದಕ್ಕೆ ಸೇನಾಪತಿಯು ಉತ್ತರ ಹೇಳುವನೇನೆಂದರೆ:—ಶತ್ರುನಾಶಮಾಡುವುದು ಮಹಾದೇವನಿಗೂ ಸಾಧ್ಯವಿಲ್ಲ; ಮಾನವನೇನನ್ನು ಮಾಡಬಲ್ಲನು! ಈಗ ನೋಡು, ಸಾಕ್ಷಾತ್ತು ಮಹಾದೇವನು ತಪಸ್ಸನ್ನು ಮಾಡುತಿದ್ದ ತಪೋವನದಲ್ಲಿ ಶತ್ರುವಾಗಿ ಬಂದೆದುರಿಗೆ ನಿಂತ ಮನ್ಮಥನನ್ನು ಭಸ್ಮರಾಶಿಯಾಗಿ ಮಾಡಿದ್ದರೂ ಅದೇ ಮನ್ಮಥನು ಈಗೊಂದು ಪಕ್ಷಕ್ಕೆ ಹಿಂದೆ ಆ ಮಹಾದೇವನಿದೇ ಮಂದಿರದಲ್ಲಿ ಅವನೆದುರಿಗೆ ಎಷ್ಟೊಂದು ದೌರಾತ್ಮ್ಯವನ್ನು ನಡೆಯಿಸಿದ್ದಾನೆ! ಶತ್ರುನಾಶವಾದೀತು ಹೇಗೆ?

ವಿಮಲೆ—(ಸ್ವಲ್ಪ ನಕ್ಕು) ಅಷ್ಟೊಂದು ದೌರಾತ್ಮ್ಯವನ್ನಾರಮೇಲೆ ನಡೆಯಿಸಿದನು?

ಯುವರಾಜ—ಸೇನಾಪತಿಯಮೇಲೆ ನಡೆಯಿಸಿದ್ದಾನೆ.

ವಿಮಲೆ—ಮಹಾರಾಜನು ಅಸಂಭವವಾದಾ ನುಡಿಯನ್ನು ನಂಬುವನೆ?

ಯುವರಾಜ—ನನಗೆ ಸಾಕ್ಷಿಯುಂಟು.

ವಿಮಲೆ—ಆ ಸಾಕ್ಷಿ ಯಾರು?

ಯುವರಾಜ—ಸುಚರಿತ್ರೆಯುಳ್ಳ......

ವಿಮಲೆ—(ಮಾತನ್ನು ಪೂರೈಸಗೊಡಿಸದೆ) ದಾಸಿಯಾದ ನಾನು ಕೇವಲ ಕುಚರಿತ್ರಳು—ನನ್ನನ್ನು ವಿಮಲೆಯೆಂದು ಸಂಬೋಧಿಸಬೇಕು.

ಯುವರಾಜ—ಆ ವಿಮಲೆಯೇ ಸಾಕ್ಷಿ.

ವಿಮಲೆ—ವಿಮಲೆಯು ಅಂತಹ ಸಾಕ್ಷ್ಯವನ್ನು ಕೊಡಲಾರಳು.

ಯುವರಾಜ—ಹಾಗೇವೆ ಕಾಣುತ್ತದೆ; ಈಗ್ಗೆ ಹದಿನೈದು ದಿನಗಳಲ್ಲಿ ಮಾಡಿದ ವಾಗ್ದಾನವನ್ನು ಮರೆತಿರುವವಳು ನಿಜವಾದ ಸಾಕ್ಷ್ಯವನ್ನೆಂದಿಗೂ ಕೊಡಲಾರಳು.

ವಿಮಲೆ—ಮಹಾಶಯರೆ! ನಾನಾವ ವಾಗ್ದಾನವನ್ನು ಮಾಡಿದ್ದೆನು? ಅಪ್ಪಣೆಯಾಗಲಿ.

ಯುವರಾಜ—ನಿನ್ನ ಸಖಿಯ ಪರಿಚಯವನ್ನು ಹೇಳುವುದಾಗಿ.

ವಿಮಲೆ—(ವ್ಯಂಗ್ಯೋಕ್ತಿಗಳನ್ನು ಬಿಟ್ಟು ಗಂಭೀರಭಾವದಿಂದ) ಯುವರಾಜ! ಪರಿಚಯವನ್ನು ಹೇಳುವುದಕ್ಕೆ ಸಂಕೋಚವಾಗುತ್ತದೆ; ಪರಿಚಯವನ್ನು ತಿಳಿದು ನೀವು ಅಸುಖಿಯರಾದರೆ?

ಯುವರಾಜ—(ಸ್ವಲ್ಪ ಯೋಚಿಸಿ ವ್ಯಂಗ್ಯೋಕ್ತಿಗಳನ್ನು ಬಿಟ್ಟು) ವಿಮಲೆ! ನಿಜವಾದ ಪರಿಚಯದಿಂದ ಅಸುಖಿಯಾಗುವುದಕ್ಕೆ ಕಾರಣವುಂಟೆ?

ವಿಮಲೆ—ಕಾರಣವುಂಟು.

ರಾಜಕುಮಾರನು ಪುನಃ ಚಿಂತಾಮಗ್ನನಾಗಿ, ಕ್ಷಣೈಕಪರದಲ್ಲಿ, 'ಹೇಗಾದರೂ ಆಗಲಿ' ಸನ್ನಿಷ್ಟವನ್ನು ಪೂರ್ತಿಗೊಳಿಸು; ನಾನೀಗನುಭವಿಸುವ ಯಾತನೆಗಿಂತ ಮತ್ತಾವದೂ ಹೆಚ್ಚು ಅಸುಖವನ್ನುಂಟುಮಾಡಲಾರದು; ನೀನು ಹೇಳುವದು ನಿಜವಾದರೂ ಅದೆನಗೆ ಸುಖಕರವಾಗಿರುವುದು; 'ವಿಮಲೆ! ಈ ಮಾಸಾರ್ಧಮಧ್ಯಕಾಲದಲ್ಲಿ ಕುದುರೆಯ ಬೆನ್ನನ್ನು ಹೊರತು ಹಾಸಿಗೆಯನ್ನು ಕಂಡವನಲ್ಲ; ಅತ್ಯಂತ ವ್ಯಾಕುಲಚಿತ್ತನಾಗಿದ್ದುದರಿಂದ ನಿನ್ನನ್ನು ಸಾರಿಬಂದೆನು' ಎಂದನು.

ವಿಮಲೆಯು ಯುವರಾಜನಾ ಮಾತನ್ನು ಹೊರಡಿಸಬೇಕೆಂದು ಅಷ್ಟೊಂದು ಪ್ರಯತ್ನಪಟ್ಟಳು; ಮತ್ತೂ ಸ್ವಲ್ಪ ಹೆಚ್ಚು ತಿಳಿಯಲು ಹೇಳತೊಡಗಿದಳು:—'ಯುವರಾಜ! ನೀವು ರಾಜನೀತಿಯಲ್ಲಿ ವಿಚಕ್ಷಣರು; ವಿವೇಚನೆಯನ್ನು ಮಾಡಿ ನೋಡಿರಿ; ನಿಮಗೆ ದುಷ್ಪ್ರಾಪ್ಯ ರಮಣಿಯಲ್ಲಿ ಮನಸ್ಸನ್ನಿಡುವುದುಚಿತವೆ? ನಿಮ್ಮಿಬ್ಬರ ಕ್ಷೇಮಾರ್ಥವಾಗಿ ಹೇಳುವೆನೇನೆಂದರೆ:—ನನ್ನ ಸಖಿಯನ್ನು ಮರೆತು ಬಿಡಲು ಪ್ರಯತ್ನಮಾಡಿರಿ; ಪ್ರಯತ್ನಪಟ್ಟರೆ, ಯುದ್ಧದಲ್ಲಿ ಉತ್ಸಾಹವು ಹುಟ್ಟಿ ಕೃತಕಾರ್ಯರಾಗುವಿರಿ' ಎಂದು ಹೇಳಿದಳು. ಅದನ್ನು ಕೇಳಿ ಯುವರಾಜನ ಅಧರದಲ್ಲಿ ಮನಸ್ಸಿನ ತಾಪದ್ಯೋತಕವಾದ ಹಾಸ್ಯವು ಪ್ರಕಟಿತವಾಗಿ, ಅವನು ವಿಮಲೆಯನ್ನು ಕುರಿತು, 'ಆರನ್ನು ಮರೆಯಲಿ? ನಿನ್ನ ಸಖಿಯು ಸಕೃದ್ದರ್ಶನದಿಂದವಳ ರೂಪವು ನನ್ನ ಹೃದಯದಲ್ಲಿ ಶಾಶ್ವತವಾಗಿರುವಂತೆ ಅಂಕಿತವಾಗಿದೆ; ಈ ಹೃದಯವು ದಗ್ಧವಾಗುವವರೆಗೂ ಅದು ಅಳಿಸಿಹೋಗದು; ಜನರು ನನ್ನನ್ನು ಪಾಷಾಣಹೃದಯನೆಂದು ಹೇಳುತ್ತಾರೆ; ಅಂತಹ ಪಾಷಾಣಹೃದಯದಲ್ಲಿ ಅಂಕಿತವಾದ ಮೂರ್ತಿಯು ಪಾಷಾಣವು ನಷ್ಟವಾಗದೆ ಹೇಗೆ ನಷ್ಟವಾಗಬಲ್ಲದು? ವಿಮಲೆ! ನಾನು ನಿನ್ನ ಸಖಿಯನ್ನು ನೋಡಿದಾರಭ್ಯ ಯುದ್ಧಕಾರ್ಯದಲ್ಲಿಯೇ ವ್ಯಾಪೃತನಾಗಿದ್ದೆನು. ಅಂತಹ ರಣಕ್ಷೇತ್ರವೇನು, ಶಿಬಿರವೇನು, ಶಯ್ಯೆಯೇನು, ಎಲ್ಲೆಲ್ಲಿಯೂ ಒಂದು ಕ್ಷಣವಾದರೂ ಆ ರೂಪವನ್ನು ಮರೆಯಲಾರದೆ ಹೋದೆನು? ವಿಶೇಷ ಹೇಳಲೇಕೆ? ಒಮ್ಮೆ ಪಠಾಣನೊಬ್ಬನು ನನ್ನ ಶಿರಚ್ಛೇದವನ್ನು ಮಾಡಲು ಖಡ್ಗವನ್ನೆತ್ತಿದಾಗ ಸಖಿಯನ್ನು ನೋಡದೆ ಹೋಗುವೆನೆಂದೂ, ಪ್ರಥಮ ದರ್ಶನವೇ ಕಡೆಯ ದರ್ಶನವಾಯಿತೆಂದೂ ಭಾವೋದಯವಾಯಿತು; ಮತ್ತಾವದೂ ಮನಸ್ಸಿಗೆ ಹೊಳೆಯಲಿಲ್ಲ. ವಿಮಲೆ! ಎಲ್ಲಿಗೆ ಹೋದರೆ ನಿನ್ನ ಸಖಿಯನ್ನು ನೋಡುವೆನು?' ಎಂದು ಮುಂತಾಗಿ ಪ್ರೇಮಪೂರ್ಣವಾದ ಮಾತುಗಳನ್ನು ಹೇಳಿದನು.

ವಿಮಲೆಗೆ ಹೆಚ್ಚು ತಿಳಿಯಬೇಕಾದ ಆವಶ್ಯಕವಿರಲಿಲ್ಲ; ಏನನ್ನು ತಿಳಿಯಬೇಕೆಂದಿದ್ದಳೋ ಅದನ್ನು ಆಪಾದತಃ ತಿಳಿದಂತಾಯಿತು. ಬಳಿಕ ಅವಳು, 'ಸುಂದರಿಯಾದ ತಿಲೋತ್ತಮೆಯು ವೀರೇಂದ್ರಸಿಂಹನ ಕನ್ಯೆ!' ಎಂದುಸುರಿದಳು.

ಅದನ್ನು ಕೇಳಿದಕೂಡಲೆ ಜಗತ್ಸಿಂಹನು ಕಾಲಸರ್ಪದಂಶನವಾದಂತೆ ನಿಸ್ತಬ್ಧಭಾವದಿಂದ ಕೈಲಿದ್ದ ಖಡ್ಗವನ್ನೂರಿಟ್ಟು ಅದರಮೇಲೂರಿಕೊಂಡು ಅಧೋಮುಖನಾಗಿ ನಿಂತನು. ಬಹಳ ಹೊತ್ತು ಹಾಗೆ ನಿಂತಿದ್ದು ಬಳಿಕ ನಿಟ್ಟುಸಿರನ್ನು ಬಿಟ್ಟು, 'ನಿನ್ನ ಮಾತು ನಿಜವಾಯಿತು; ತಿಲೋತ್ತಮೆಯೆನಗೆ ಪ್ರಾಪ್ತಳಲ್ಲ; ನಾನು ಯುದ್ಧಕ್ಷೇತ್ರಕ್ಕೆ ಹೊರಟುಹೋಗುವೆನು; ಶತ್ರುವಿನ ರಕ್ತದಲ್ಲಿ ನನ್ನ ಸುಖಾಭಿಲಾಷೆಯನ್ನು ವಿಸರ್ಜನೆಮಾಡುವೆನು' ಎಂದನು.

ವಿಮಲೆಯು ರಾಜಕುಮಾರನ ಕಾತರೋಕ್ತಿಗಳನ್ನು ಕೇಳಿ, 'ಯುವರಾಜನೆ! ಈ ಪ್ರಪಂಚದಲ್ಲಿ ಆಂತರಿಕವಾದ ಸ್ನೇಹಾನುರಾಗಗಳಿಗೆ ತಕ್ಕ ಪುರಸ್ಕಾರವುಂಟೆಂಬುದು ನಿಜವಾಗಿದ್ದರೆ, ನೀವು ತಿಲೋತ್ತಮೆಯನ್ನು ಹೊಂದುವುದಕ್ಕೆ ಸರ್ವಾಂಶದಲ್ಲಿಯೂ ತಕ್ಕವರು; ನೀವು ಒಮ್ಮೆಗೆ ನಿರಾಶರಾಗಲೇಕೆ? ವಿಧಿಯು ಇಂದು ಪ್ರತಿಕೂಲನಾದರೂ ನಾಳೆ ಸದಯನಾಗಬಹುದು' ಎಂದಳು.

ಆಶೆ ಯಾವಾಗಲೂ ಮಧುರಭಾಷಿಣೀ; ಎಂತಹ ವಿಪತ್ಕಾಲದಲ್ಲಿಯೂ ವಿಪದ್ಗ್ರಸ್ತನಿಗೆ ಧೈರ್ಯವುಂಟಾಗುವಂತೆ ಮೃದುವಾಗಿ ಕಿವಿಯಲ್ಲಿ ಹೇಳುತಿರುವುದೇನೆಂದರೆ:—'ಪ್ರಳಯಕಾಲದಲ್ಲ ಮುಸುಕಿ ಬರುವ ಮೇಘಪಙ್ಕ್ತಿಯೂ ಚಿರಸ್ಥಾಯಿಯಾದುದಲ್ಲವಾದಕಾರಣ ದುಃಖಿತನಾಗಬೇಡ; ನನ್ನ ಮಾತನ್ನು ಕೇಳು' ಎಂದು.

ಜಗತ್ಸಿಂಹನಾ ಆಶೆಯ ಹೇಳಿಕೆಗೆ ಕಿವಿಕೊಟ್ಟನು. ಆಶೆಯು ಹೇಳಿತೇನೆಂದರೆ:—'ಈಶ್ವರೇಚ್ಛೆಯನ್ನಾರು ತಿಳಿಯುವರು? ವಿಧಾತನು ಲಲಾಟದಲ್ಲ ಬರೆದ ಲಿಪಿಯನ್ನಾರೋದಬಲ್ಲರು? ಈ ಸಂಸಾರದಲ್ಲಿ ಅಸಾಧ್ಯವಾದುದಾವದು? ಎಷ್ಟೊಂದಸಾಧ್ಯವಾದುದು ಸಾಧ್ಯವಾಗಿಲ್ಲ?' ಎಂದು.

ಜಗತ್ಸಿಂಹನಾ ಆಶೆಯ ಉಪದೇಶಕ್ಕೆ ಕಿವಿಗೊಟ್ಟು, ಸ್ವಲ್ಪಹೊತ್ತು ಮೌನವಾಗಿದ್ದು, ತರುವಾಯ ವಿಮಲೆಯನ್ನು ಕುರಿತು, 'ಇಂದೆನ್ನ ಮನಸ್ಸು ಅಸ್ಥಿರವಾಗಿದೆ; ಅತಃ, ಕರ್ತವ್ಯಾಕರ್ತವ್ಯವನ್ನು ಮಾಡಲಾರೆನು; ಅದೃಷ್ಟದಲ್ಲಿರುವುದು ಆವಶ್ಯಕವಾಗಿ ಘಟಿಸುವುದು; ಅದನನ್ಯಥಾ ಮಾಡುವುದಕ್ಕಾರಿಂದ ಸಾಧ್ಯ! ಪ್ರಕೃತ, ನನ್ನ ಸ್ವಾಭಿಪ್ರಾಯವನ್ನು ಮಾತ್ರ ಹೇಳಬಲ್ಲೆನು' ಎಂದು ಹೇಳಿ, ಶೈಲೇಶ್ವರನೆದುರಿಗೆ ತಿರುಗಿಕೊಂಡು, 'ಸರ್ವಚೈತನ್ಯ ಸ್ವರೂಪನಾದೀ ಶೈಲೇಶ್ವರನ ಸಮುಖದಲ್ಲಿ ಸತ್ಯವನ್ನು ನುಡಿಯುವೆನು—ನಾನು ತಿಲೋತ್ತಮೆಯ ಪಾಣಿಗ್ರಹಣವನ್ನು ಮಾಡುವವನೇ ಹೊರತು ಮತ್ತಾರನ್ನೂ ಕಣ್ಣೆತ್ತಿ ನೋಡೆನು. ವಿಮಲೆ! ನಾನು ನಿನ್ನೆದುರಿಗೆ ಹೇಳಿರುವುದನ್ನೆಲ್ಲಾ ನಿನ್ನ ಸಖಿಗೆ ತಿಳಿಸಬೇಕೆಂದು

ವಿನಯದಿಂದ ಬೇಡಿಕೊಳ್ಳುತ್ತೇನೆ; ಹಾಗೂ ಮತ್ತೊಂದಾವರ್ತಿ ಮಾತ್ರ ಅವಳ ಸಂದರ್ಶನವನ್ನು ತೆಗೆದುಕೊಳ್ಳಲು ಕುತೂಹಲವುಳ್ಳವನಾಗಿದ್ದೇನೆಂದೂ ದಯ ವಿಟ್ಟು ಹೇಳು, ಪುನಃ ನಿನಗೆ ತೊಂದರೆಯನ್ನು ಕೊಡೆನು' ಎಂದು ಹೇಳಿದನು.

ವಿಮಲೆಯ ಮುಖವು ಹರ್ಷೋತ್ಫುಲ್ಲವಾಯಿತು. ಆಗವಳು, 'ಯುವ ರಾಜ! ನಿಮ್ಮ ಅಪ್ಪಣೆಯ ಪ್ರಕಾರ ಹೇಳುವೆನು; ಆದರೆ ತಿಲೋತ್ತಮೆಯ ಪ್ರತ್ಯುತ್ತರವು ನಿಮಗೆ ತಿಳಿಯುವ ಬಗೆ ಹೇಗೆ' ಎಂದು ಹೇಳಿದಳು.

ಯುವರಾಜನು, 'ನಿನಗೆ ಪುನಃಪುನಃ ತೊಂದರೆಯನ್ನು ಕೊಡಲಾರೆನು, ಆದರೆ ನೀನೀ ಮಂದಿರದಲ್ಲಿ ನನ್ನನ್ನು ಮತ್ತೊಂದಾವರ್ತಿ ನೋಡುವಿಯಾದರೆ, ನಾನು ನಿನಗೆ ಕೃತಜ್ಞನಾಗಿರುವೆನು; ಕಾಲಾನುಕಾಲದಲ್ಲಿ ಜಗತ್ಸಿಂಹನಿಂದ ನಿನಗೆ ಪ್ರತ್ಯುಪಕಾರವಾಗದಿರದು' ಎಂದನು.

ವಿಮಲೆಯು, 'ಯುವರಾಜ! ನಾನು ತಮ್ಮ ಆಜ್ಞಾನುವರ್ತಿನಿ, ಆದರೆ ರಾತ್ರಿ ಒಬ್ಬಳೇ ಬರಲು ಬಹಳ ಭಯವಾಗುವುದು; ಮೊದಲು ಬರುವುದಾಗಿ ಮಾತುಕೊಟ್ಟು, ಅದಕ್ಕೆ ತಪ್ಪತಕ್ಕುದಲ್ಲವೆಂದು ಬಂದೆನು; ಪ್ರಕೃತ ಈ ಪ್ರದೇಶವು ಶತ್ರುಪೀಡಿತವಾಗಿದೆ. ಆದುದರಿಂದ ಪುನಃ ಇಲ್ಲಿಗೆ ಬರಲು ಭೀತಿಗೊಂಡಿದ್ದೇನೆ' ಎಂದಳು.

ರಾಜಪುತ್ರನು ಸ್ವಲ್ಪ ಯೋಚಿಸಿ, ಬಳಿಕ, 'ನಿನ್ನಾಕ್ಷೇಪಣೆಯಿಲ್ಲದಿದ್ದರೆ ನಿನ್ನ ಸಂಗಡ ನಾನೇ ಮಂದಾರಣದುರ್ಗಕ್ಕೆ ಬಂದು ಅಲ್ಲೊಂದು ಸಂಕೇತಸ್ಥಾನ ದಲ್ಲಿ ಕಾದಿರುವೆನು. ನೀನು ಹೋಗಿ ಅವಳು ಹೇಳುವುದನ್ನು ತಿಳಿದು ಬಂದೆನಗೆ ಹೇಳು' ಎಂದನು.

ವಿಮಲೆಯು ಹೃಷ್ಟಚಿತ್ತಳಾಗಿ, 'ಹಾಗಾದರೆ, ಬರೋಣಾಗಲಿ' ಎಂದಳು.

ಇಬ್ಬರೂ ಹೊರಡಬೇಕೆಂದಿದ್ದ ಸಮಯದಲ್ಲಿ, ದೇವಾಲಯದ ಹೊರಗಡೆ ಜಾಗರೂಕತೆಯಿಂದಾರೋ ನಡೆದಾಡುತ್ತಿದ್ದ ಶಬ್ದವು ಕೇಳಿಸಿತು. ಅದನ್ನು ಕೇಳಿ, ಯುವರಾಜನು ವಿಮಲೆಯನ್ನು ಕುರಿತು, 'ನಿನ್ನ ಸಂಗಡಾರಾದರೂ ಬಂದಿದ್ದರೆ?' ಎಂದು ವಿಚಾರಿಸಿದನು. ವಿಮಲೆಯು 'ಬಂದವರಾರೂ ಇಲ್ಲ'ವೆಂದು ಹೇಳಿದಳು.

'ಮತ್ತಾರು ಶಬ್ದವನ್ನು ಮಾಡಿರಬಹುದು? ನಾವು ಮಾತನಾಡುತಿದ್ದುದನ್ನಾರೋ ಹೊಂಚಿ ಕೇಳಿಕೊಂಡಿದ್ದಂತಿದೆ' ಎಂದೆಂದು ಯುವರಾಜನು ಹೊರಗೆ ಬಂದು ದೇವಸ್ಥಾನದ ಸುತ್ತಲೂ ಹೋಗಿ ನೋಡಿದನು. ಆರೂ ಕಾಣಲಿಲ್ಲ.

## ಹದಿನೇಳನೆಯ ಪರಿಚ್ಛೇದ

### ವೀರಪಂಚಮಿ

ಆನಂತರ ವಿಮಲೆಯೂ ಜಗತ್ಸಿಂಹನೂ ಶೈಲೇಶ್ವರನಿಗೆ ಪ್ರಣಾಮವನ್ನು ಮಾಡಿ ಸಶಂಕಚಿತ್ತರಾಗಿ, ಮಂದಾರಣದುರ್ಗಾಭಿಮುಖವಾಗಿ ಹೊರಟರು. ಸ್ವಲ್ಪ ದೂರ ಮಾತನಾಡದೆ ಹಾದಿ ನಡೆದು, ಬಳಿಕ ರಾಜಕುಮಾರನು, 'ವಿಮಲೆ! ನನಗೊಂದು ಕೌತೂಹಲವು ಹುಟ್ಟಿದೆ; ನೀನದನ್ನು ತಿಳಿದರೆ ಏನೆಂದು ಹೇಳುವಿಯೋ, ಕಾಣೆ' ಎಂದನು.

ವಿಮಲೆ—ಏನು?

ಜಗತ್ಸಿಂಹ—ನೀನೆಂದೂ ಪರಿಚಾರಿಕೆಯಲ್ಲವೆಂದೆನಗೊಂದು ನಂಬಿಕೆಯು ಹುಟ್ಟಿದೆ.

ವಿಮಲೆ—(ಸ್ವಲ್ಪ ನಕ್ಕು) ಆ ನಂಬುಗೆಗೆ ಕಾರಣವೇನು?

ಜಗತ್ಸಿಂಹ—ವೀರೇಂದ್ರಸಿಂಹನ ಮಗಳು ಅಂಬರಪತಿಯಾದ ಮಾನಸಿಂಹನಿಗೆ ಪುತ್ರವಧೂ* ಆಗಕೂಡದೆಂಬುದಕ್ಕೊಂದು ವಿಶೇಷಕಾರಣವುಂಟು. ಅದು ಅತ್ಯಂತೇಕಾಂತವಾದ ವೃತ್ತಾಂತವಾಗಿದೆ; ನೀನು ಕೇವಲ ಪರಿಚಾರಿಕೆಯಾಗಿದ್ದಿದ್ದರೆ, ಏಕಾಂತವಾದಾ ವೃತ್ತಾಂತವನ್ನು ಹೇಗೆ ತಿಳಿಯುತ್ತಿದ್ದೆ?

ವಿಮಲೆಯು ಬಿಸುಸುಯ್ದು ಕಾತರಸ್ವರದಿಂ, 'ನೀವು ಯಥಾರ್ಥವನ್ನೂಹಿಸಿದಿರಿ; ನಾನು ಅದೃಷ್ಟದೋಷದಿಂದ ಪರಿಚಾರಿಕೆಯಂತಿರಬೇಕಾಗಿದೆ; ಅದೃಷ್ಟವನ್ನೇಕೆ ನಿಂದಿಸಲಿ? ನನ್ನ ಹಣೆಯಲ್ಲಿ ಅಂತಹ ಮಂದಭಾಗ್ಯವು ಶಾಶ್ವತವಾಗಿ ಬರೆದಿರಲಾರದು' ಎಂದಳು.

ಜಗತ್ಸಿಂಹನಾ ಪ್ರಸ್ತಾಪದಿಂದ ವಿಮಲೆಯ ಮನಸ್ಸಿನಲ್ಲಿ ಪರಿತಾಪವುಂಟಾಯಿತೆಂದು ತಿಳಿದವನಾಗಿ, ಮತ್ತಾ ಮಾತನ್ನೆತ್ತಲಿಲ್ಲ. ವಿಮಲೆಯು ತಾನಾಗಿಯೇ, 'ಯುವರಾಜ! ನಿಮ್ಮೊಂದಿಗೆ ವೃತ್ತಾಂತವನೆಲ್ಲಾ ಹೇಳುವೆನು; ಆದರೆ ಈಗ ಬೇಡ'ವೆಂದು ಹೇಳಿ, ಹಿಂದಿರುಗಿ ನೋಡಿ, 'ಅದೇನೋ ಶಬ್ದವಾಯಿತು; ಹಿಂದೆ ನಮ್ಮನ್ನಾರೋ ಬೆನ್ನಟ್ಟಿ ಬರುವಂತಿದೆ' ಎಂದಳು.

ಇಬ್ಬರಾರೋ ಮನುಷ್ಯರು ನಡೆದುಬರುವ ಶಬ್ದವು ಚೆನ್ನಾಗಿ ಕೇಳಿಬಂತಲ್ಲದೆ, ಅವರವರು ಮಾತನಾಡಿಕೊಳ್ಳುವಹಾಗೂ ಕೇಳಿಸಿತು. ಅಷ್ಟೊಂದು ಹೊತ್ತಿಗಾಗಲೇ ದೇವಾಲಯವನ್ನು ಬಿಟ್ಟೊಂದು ಮೈಲಿಯ ದೂರ ಹಾದಿಯು ಸಾಗಿತ್ತು. ಜಗತ್ಸಿಂಹನಿಗೂ ಅನುಮಾನ ತೋರಿ, ಹೋಗಿ ನೋಡಿಬರುವುದಾಗಿ ಹೇಳಿ ಸ್ವಲ್ಪ ದೂರ ಹಿಂದಕ್ಕೆ ಹೋಗಿ ಅಲ್ಲಲ್ಲಿ ನೋಡಿದನು. ಮನುಷ್ಯರಾರೂ ಇದ್ದಹಾಗೆ ಕಾಣಲಿಲ್ಲ. ಹಿಂದಿರುಗಿ ಬಂದು ವಿಮಲೆಯನ್ನು ಕುರಿತು, 'ನನಗೂ ಅನುಮಾನ

* ಪುತ್ರವಧೂ=ಸೊಸೆ.

ವಾಗಿದೆ, ನಮ್ಮ ಹಿಂದಾರೋ ರಂಧ್ರಾನ್ವೇಷಣತತ್ಪರರಾಗಿ ಬರುವಂತಿದೆ, ಸಂದೇಹವಿಲ್ಲ, ಮೆಲ್ಲನೆ ಮಾತನಾಡು' ಎಂದನು.

ಇಬ್ಬರೂ ಮೆಲ್ಲನೆ ಮಾತನಾಡತೊಡಗಿದರು. ಸ್ವಲ್ಪಹೊತ್ತಿಗೆ ಮಂದಾರಣ ದುರ್ಗವು ಸಮೀಪಿಸಿತು. ಕ್ರಮವಾಗಿ ಇಬ್ಬರೂ ಕೋಟೆಬಾಗಿಲ ಬಳಿ ಬಂದರು. ರಾಜಕುಮಾರನು ವಿಮಲೆಯನ್ನು ಕುರಿತು, 'ರಾತ್ರಿ ಬಾಗಿಲಹಾಕಿರುವ ಕೋಟೆಯೊಳಗೆ ಹೇಗೆ ಹೋಗಬಲ್ಲೆ?' ಎಂದು ಕೇಳಿದನು. ಅದಕ್ಕವಳು, 'ಚಿಂತಿಸಬೇಡಿ, ಮನೆಯಿಂದ ಹೊರಡುವಾಗಲೇ ಅದಕ್ಕೊಂದುಪಾಯವನ್ನು ಹೂಡಿ ಬಂದೆನು' ಎಂದಳು. ರಾಜಕುಮಾರನು ನಕ್ಕು, 'ಹಾಗಾದರೆ, ಬೇರೆ ರಹಸ್ಯವಾದ ಮಾರ್ಗವಿದಿಯೆ?' ಎಂದು ಕೇಳಿದನು. ವಿಮಲೆಯೂ ನಕ್ಕು, 'ಕಳ್ಳನಿರುವೆಡೆ ರಂಧ್ರವಿರುವುದು' ಎಂದಳು. ಕ್ಷಣಕಾಲದ ಬಳಿಕ ರಾಜಕುಮಾರನು, 'ವಿಮಲೆ! ನಾನಿನ್ನು ಮುಂದುವರಿದು ಬರುವುದು ಸರಿಯಾಗಿಲ್ಲ; ನಾನೀ ಅರಮನೆಯ ಪಕ್ಕದಲ್ಲಿರುವ ಮಾವಿನ ತೋಪಿನಲ್ಲಿರುವೆನು, ನನ್ನವಳಾಗಿ ನನಗೋಸ್ಕರ ನಿನ್ನ ಸಖಿಯಲ್ಲಿ ನಿಷ್ಕಪಟವಾದೆನ್ನ ವಿನತಿಯನ್ನು ತಿಳಿಸು, ನಾನವಳನ್ನು ನೋಡಿ ಪಕ್ಷವಾಗಿದಿಯೋ, ಮಾಸವಾಗಿದಿಯೋ, ವತ್ಸರವೇ ಆಗಿಹೋಯಿತೋ,—ಮತ್ತೊಂದು ತಡವೆ ಅವಳನ್ನು ನೋಡಿ ಕಣ್ಣುಗಳನ್ನು ಸಾರ್ಥಕಗೊಳಿಸಿಕೊಳ್ಳುವೆನೆಂದು ಹೇಳು' ಎಂದನು.

ವಿಮಲೆಯು, 'ಮಾವಿನ ತೋಪು ನಿಜನವಾದುದಲ್ಲವಾಗಿ ನನ್ನೊಂದಿಗೆ ದಯಮಾಡಿ' ಎಂದಳು.

ಜಗತ್ಸಿಂಹ—ಎಷ್ಟು ದೂರ?

ವಿಮಲೆ—ಅರಮನೆಯೊಳಗೆ ಬನ್ನಿ.

ಜಗತ್ಸಿಂಹ—(ಸ್ವಲ್ಪ ಆಲೋಚಿಸಿ) ವಿಮಲೆ! ನಾನೊಳಗೆ ಬರಕೂಡದು. ದುರ್ಗೇಶನ ಅನುಮತಿಯಿಲ್ಲದೆ ನಾನೆಂದೂ ಅರಮನೆಯೊಳಗೆ ಪ್ರವೇಶಿಸೆನು.

ವಿಮಲೆ—ಭಯಪಡುವಿರಾ, ಏನು?

ರಾಜಕುಮಾರನು ಗರ್ವಿತಭಾವದಿಂದ, 'ರಾಜಪುತ್ರರಾವಸ್ಥಳಕ್ಕೆ ಹೋಗಬೇಕಾದರೂ ಅಂಜುವವರಲ್ಲ; ಆದರೆ, ವಿವೇಚನೆಯನ್ನು ಮಾಡಿ ನೋಡು, ಅಂಬರಪತಿಯ ಔರಸನಾಗಿ ದುರ್ಗೇಶನ ಅನುಮತಿಯಿಲ್ಲದೆ, ಅವನಿಗೆ ತಿಳಿಸದೆ ಕಳ್ಳನ ಹಾಗವನ ಅರಮನೆಯೊಳಗೆ ಪ್ರವೇಶಿಸುವುದೆನಗುಚಿತವೆ?' ಎಂದು ಹೇಳಿದನು.

ವಿಮಲೆ—ನಿಮ್ಮನ್ನು ಕರೆದುಕೊಂಡುಹೋಗುವವಳು ನಾನಾಗಿದ್ದೇನೆ.

ಜಗತ್ಸಿಂಹ—ಆದರೆ ನೋಡು, ನಾನು ನಿನ್ನನ್ನು ಪರಿಚಾರಿಕೆಯೆಂದು ಭಾವಿಸಿದ್ದೇನೆ; ಕೋಪಗೊಳ್ಳಬೇಡ; ಹಾಗೆನ್ನನ್ನು ಅರಮನೆಯೊಳಗೆ ಕರಕೊಂಡು ಹೋಗಲು ನಿನಗಾವ ಅಧಿಕಾರ? ಇದ್ದರೆ, ಹೇಳು.

ವಿಮಲೆ—ನನಗಿರುವ ಅಧಿಕಾರವನ್ನು ತಿಳಿದ ಹೊರತು ಒಳಗೆ ಪ್ರವೇಶಿಸು ವುದಿಲ್ಲವೆ?

ಉತ್ತರ—ಎಂದಿಗೂ ಆಗಲಾರದು.

ವಿಮಲೆಯು ರಾಜಕುಮಾರನ ಕಿವಿಯಲ್ಲೇನೋ ಒಂದೇಕಾಂತವನ್ನು ಸುರಿದಳು.

ಜಗತ್ಸಿಂಹ—ಹಾಗಾದರೆ, ದಯೆಮಾಡಿರಿ, ಬರುವೆನು.

ವಿಮಲೆ—ನಾನು ದಾಸಿಯು, ದಾಸಿಗಿಷ್ಟುಪಚಾರವಾಗಿ ಹೇಳಕೂಡದು; 'ನಡೆ, ಹೋಗು'—ಎಂದು ಮುಂತಾಗಿ ಅಪ್ಪಣೆ ಮಾಡಬೇಕು.

ಜಗತ್ಸಿಂಹ—ಹಾಗೇ ಆಗಲಿ.

ಆಗವರಿಬ್ಬರೂ ಹೋಗುತಿದ್ದ ಮಾರ್ಗವು ಅರಮನೆಯ ಮುಂಬಾಗಲಿಗೆ ಹೋಗತಕ್ಕುದಾಗಿದ್ದಿತು. ಅರಮನೆಯ ಪಕ್ಕದಲ್ಲೊಂದು ಮಾವಿನ ತೋಪು. ಅರಮನೆಯ ಮಹಾದ್ವಾರದಲ್ಲಿ ನಿಂತು ನೋಡಿದರದು ಕಾಣುತ್ತಿರಲಿಲ್ಲ. ಅರಮನೆಯ ಹಿಂಭಾಗದಲ್ಲಿ ಆಮೋದರನದಿಯು ಹರಿಯುತಿದ್ದೆಡೆ ಹೋಗಬೇಕಾದರೆ ಆ ಮಾವಿನ ತೋಪಿನಲ್ಲಿ ಹೊಕ್ಕು ಹೋಗಬೇಕು. ವಿಮಲೆಯು ದೊಡ್ಡ ಮಾರ್ಗವನ್ನು ಬಿಟ್ಟು ರಾಜಪುತ್ರನನ್ನಾ ಮಾವಿನ ತೋಪಿಗೆ ಕೊಂಡೊಯ್ದಳು.

ತೋಪಿನೊಳಗೆ ಪ್ರವೇಶಮಾಡುತ್ತಲೇ ಜನರಾರೋ ನಡೆದುಬರುವ ಹಾಗೆ ತರಗೆಲೆಗಳ ಮುರುಮುರು ಶಬ್ದವು ಕೇಳಿತು.

ವಿಮಲೆಯು, 'ಪುನಃ ಶಬ್ದವಾಗುತ್ತದೆ' ಎಂದಳು.

ಜಗತ್ಸಿಂಹನು, 'ಸ್ವಲ್ಪ ನಿಲ್ಲು, ಹೋಗಿ ನೋಡಿಬರುವೆನು' ಎಂದು ಹೇಳಿ, ಕತ್ತಿಯನ್ನೊರೆಯಿಂದೆಳೆದು ಶಬ್ದವು ಕೇಳಿಬಂದೆಡೆ ಹೋಗಿ ನೋಡಲಾಗಿ ಆವದೂ ಕಂಡುಬರಲಿಲ್ಲ. ತೋಪಿನಲ್ಲಿ ಗಿಡಗಳೂ, ಅರಣ್ಯಲತಾದಿಗಳೂ ದಟ್ಟವಾಗಿ ಬೆಳೆದು ಕತ್ತಲೆಯಾಗಿದ್ದುದರಿಂದ ರಾಜಕುಮಾರನು ನಿಂತಲ್ಲಿಂದ ದೂರ ನೋಡಲಸಾಧ್ಯ ವಾಯಿತು. ಕಾಡುಮೃಗಗಳ ಸಂಚಾರದಿಂದುಂಟಾದ ಶಬ್ದವಿರಬಹುದೆಂಬ ಅನುಮಾನವಾಯಿತು. ಆವದಾದರೂ ಆಗಲಿ, ಅನುಮಾನ ಪರಿಚ್ಛೇದಮಾಡಿಕೊಳ್ಳ ಬೇಕೆಂದು ರಾಜಕುಮಾರನೊಂದು ಮರದಮೇಲೇರಿ ಸುತ್ತಲೂ ನೋಡಿದನು. ಸ್ವಲ್ಪಹೊತ್ತು ನೋಡಲಾಗಿ ಬೆಳದಿಂಗಳಲ್ಲಾರದೋ ಇಬ್ಬರ ರುಮಾಲು ಮಾತ್ರ ಕಂಡಿತು. ಮರಗಳ ನೆರಳಿನಿಂದವರಾರೆಂಬುದು ಗೊತ್ತಾಗಲಿಲ್ಲ.

ರಾಜಕುಮಾರನು ದೃಷ್ಟಿಸಿನೋಡಿ, ಮನುಷ್ಯರಾಗಿರಬೇಕೆಂದು ನಿಶ್ಚೈಸಿ ಅವರು ನಿಂತಿದ್ದ ಸ್ಥಳದ ಕುರುಹನ್ನು ತೋರುವ ಮರವನ್ನು ಗುರುತಿಸಿಕೊಂಡು, ಕೆಳಗಿಳಿದು ವಿಮಲೆಯ ಬಳಿಗೆ ಬಂದು ತಾನು ತಿಳಿದ ಸಂಗತಿಯನ್ನವಳಿಗೆ ತಿಳಿಸಿ, 'ಈಗೆರಡು ಭಲ್ಲೆಯಗಳಿದ್ದರೆ' ಎಂದು ಹೇಳುವುದರೊಳಗಾಗಿ, ವಿಮಲೆಯು, 'ಭಲ್ಲೆಯಗಳಿಂದೇನನ್ನು ಮಾಡಬಲ್ಲಿರಿ?' ಎಂದಳು.

ಜಗತ್ಸಿಂಹ—ಅವರಾರೆಂದು ಗೊತ್ತುಮಾಡುತ್ತಿದ್ದೆನು; ಲಕ್ಷಣಗಳನ್ನು ನೋಡಿದರೆ ಶುಭಸೂಚಕವಾಗಿ ಕಂಡುಬರುವುದಿಲ್ಲ; ದುರಾತ್ಮರಾದ ಪಠಾನರಾರೋ ದುರಭಿಪ್ರಾಯದಿಂದ ನಮ್ಮ ಹಿಂದೆ ಎಡಬಿಡದೆ ಬಂದಿರುವಂತಿದೆ.

ಅದನ್ನು ಕೇಳಿ ವಿಮಲೆಗೆ ಶೈಲೇಶ್ವರನ ಮಂದಿರಕ್ಕೆ ಹೋಗುತಿದ್ದಾಗ ದಾರಿಯಲ್ಲಿ ಮರಣಯಾತನೆಯಿಂದ ಬಿದ್ದಿದ್ದ ಕುದುರೆಯೂ, ಮಾರ್ಗದ ಪಾರ್ಶ್ವದಲ್ಲಿ ಬಿದ್ದಿದ್ದ ರುಮಾಲೂ, ಕುದುರೆಗಳ ಹಜ್ಜೆಗುರುಹು ಮುಂತಾದುವೂ ನೆನಪಿಗೆ ಬಂದು, 'ನೀವಿಲ್ಲಿರಿ, ನಿಮಿಷದೊಳಗೆ ಭಲ್ಲೆಯಗಳನ್ನು ತರುವೆನು' ಎಂದು ಹೇಳಿ, ಜಾಗ್ರತೆಯಾಗಿ ಅರಮನೆಯ ತಳಹದಿಯ ಬಳಿ ಹೋದಳು. ಅಂದು ಸಾಯಂಕಾಲ ವಿಮಲೆಯು ಅಲಂಕರಿಸಿಕೊಳ್ಳುತ್ತಾ ಕುಳಿತಿದ್ದ ಮಹಡಿಯಮೇಲಣ ಚಿಕ್ಕಮನೆಗೆ ಸಮನಾಗಿ ತಳಭಾಗದಲ್ಲಿ ಮಾವಿನ ತೋಪಿಗೆದುರಾಗೊಂದು ಗವಾಕ್ಷವಿದ್ದಿತು. ವಿಮಲೆಯು ಆ ಗವಾಕ್ಷದ ಮೇಲೆ ಹತ್ತಿದಳು. ಗವಾಕ್ಷದ ಬಾಗಲಿಗೊಂದು ಬೀಗವು ಹಾಕಿದ್ದಿತು. ವಿಮಲೆಯು ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಬೀಗದ ಕೈಯನ್ನಾ ಬೀಗಕ್ಕೆ ಹಾಕಿ ತಿರುಗಿಸಿ, ಗವಾಕ್ಷದೊಂದು ಕಬ್ಬಿಣದ ಕಂಬಿಯನ್ನು ಹಿಡಿದು ಹಿಂದಕ್ಕೆ ದಬ್ಬಿದಳು. ಶಿಲ್ಪಕೌಶಲದಿಂದ ಮಾಡಲ್ಪಟ್ಟಿದ್ದಾ ಕಿಟಿಕಿಯ ಬಾಗಿಲು ಚೌಕಟ್ಟಿನ ಸಹಿತ ಹಿಂದಕ್ಕೆ ತೆರೆಯಲ್ಪಟ್ಟು, ಚಿಕ್ಕಮನೆಯ ಗೋಡೆಯಲ್ಲಿ ಪ್ರವೇಶಕ್ಕನುಕೂಲವಾದ ದೊಡ್ಡದೊಂದು ರಂಧ್ರವುಂಟಾಯಿತು. ವಿಮಲೆಯು ಒಳಗೆ ಹೋಗಿ ಒಳಗಿನಿಂದ ಚೌಕಟ್ಟನ್ನು ಹಿಡಿದೆಳೆಯಲು ಕಿಟಿಕಿಯು ಪೂರ್ವದಂತೆ ಮುಚ್ಚಲ್ಪಟ್ಟು, ಬೀಗದಕೈಹಾಕಿ ತಿರುಗಿಸಲು ಬಾಗಿಲು ಹೊರಗಿನಿಂದ ತೆಗೆಯಲು ಬಾರದಹಾಗೆ ಭದ್ರವಾಗಿ ಕೂತಿತು.

ವಿಮಲೆಯು ಜಾಗ್ರತೆಯಾಗಿ ಶಸ್ತ್ರಶಾಲೆಗೆ ಹೋಗಿ, ಅಲ್ಲಿದ್ದ ಪಹರೇದವನನ್ನು ಕುರಿತು, 'ನಾನು ಕೇಳುವುದನ್ನಾರಿಗೂ ಹೇಳಬೇಡ'ವೆಂದು ಹೇಳಿ, 'ನನಗೆರಡು ಭಲ್ಲೆಯಗಳನ್ನು ಕೊಡು, ಪುನಃ ತಂದುಕೊಡುವೆನು' ಎಂದಳು.

ಪಹರೇದವನು ಚಮತ್ಕೃತನಾಗಿ, 'ತಾಯಿ! ಭಲ್ಲೆಯಗಳನ್ನು ಕೊಂಡೊಯ್ದು ಮಾಡುವುದೇನು?' ಎಂದು ಕೇಳಿದನು. ಪ್ರತ್ಯುತ್ಪನ್ನಮತಿಯಾದ* ವಿಮಲೆಯು, 'ಇಂದು ವೀರಪಂಚಮಿ ವ್ರತವನ್ನು ಮಾಡುವೆನು; ಆ ವ್ರತವನ್ನು ಮಾಡಿದರೆ ವೀರನಾದ ಪುತ್ರನು ಹುಟ್ಟುವನು; ವ್ರತಕ್ಕೆ ರಾತ್ರಿ ಆಯುಧಪೂಜೆ ಮಾಡಬೇಕು; ವೀರಪುತ್ರನನ್ನು ಪಡೆಯಬೇಕೆಂಬಾಶೆಯಿಂದಾ ವ್ರತವನ್ನಾಚರಿಸುತ್ತೇನೆ; ಆರಿಗೂ ಹೇಳದಿರು' ಎಂದು ಹೇಳಿದಳು.

ಪಹರೇದವನು ನಿಜವೆಂದು ತಿಳಿದು ಸುಮ್ಮನಾದನು. ಅರಮನೆಯಲ್ಲಿದ್ದ ಸೇವಕರೆಲ್ಲರೂ ವಿಮಲೆಯ ಆಜ್ಞಾಕಾರಿಗಳಾಗಿದ್ದ ಕಾರಣ, ಎರಡನೆಯ ಮಾತಿಲ್ಲದೆ ಪಹರೇದವನು ಎರಡು ಭಲ್ಲೆಯಗಳನ್ನು ತೆಗೆದುಕೊಟ್ಟನು.

* ಪ್ರತ್ಯುತ್ಪನ್ನಮತಿ=ಕುಶಾಗ್ರಬುದ್ಧಿಯುಳ್ಳ.

ವಿಮಲೆಯು ಭಲ್ಲೆಯಗಳನ್ನು ತೆಗೆದುಕೊಂಡು ಗವಾಕ್ಷದ ಬಳಿಗೆ ಬಂದು ಮೊದಲಿನಂತೆ ಅದರ ಬಾಗಿಲ ತೆರೆದು ಜಗತ್ಸಿಂಹನ ಬಳಿಗೆ ಹೋಗಿ ಭಲ್ಲೆಯಗಳನ್ನವನಿಗೆ ಕೊಟ್ಟಳು.

ಅವಸರದ ನಿಮಿತ್ತದಿಂದಲೋ, ಅಥವಾ ಕೂಡಲೇ ಹಿಂದಿರುಗಿ ಬರುವೆನೆಂಬ ಭರವಸೆಯಿಂದಲೋ ವಿಮಲೆಯು ಹೊರಗೆ ಬಂದವಳು ಕಿಟಿಕಿಯ ಬಾಗಿಲನ್ನು ಹಾಕಿಕೊಳ್ಳದೆ ಹೊರಟುಹೋದಳು. ಅದರಿಂದೊಂದು ಪ್ರಮಾದವು ಸಂಭವಿಸಲು ಕಾರಣವಾಯಿತು. ಕಿಟಿಕಿಯ ಸಮೀಪದಲ್ಲೊಂದು ಮಾವಿನಮರ; ಅದರ ಮರೆಯಲ್ಲೊಬ್ಬ ಶಸ್ತ್ರಧಾರಿ ಪುರುಷನು ನಿಂತಿದ್ದವನು ವಿಮಲೆಯು ಮಾಡಿದ ತಪ್ಪನ್ನು ಕಂಡುಕೊಂಡನು. ವಿಮಲೆಯು ಕಣ್ಣಿಗೆ ಮರೆಯಾಗುವವರೆಗೆ ಮರದ ಮರೆಯಲ್ಲಿ ನಿಂತಿದ್ದು, ಅವಳು ಮರೆಯಾಗುತಲೇ, ತನ್ನ ಜಿರಿಕೀ ಜೋಡನ್ನು ಮರದ ಬುಡದಲ್ಲಿ ಬಿಟ್ಟು ಶಬ್ದಮಾಡದೆ ಗವಾಕ್ಷದ ಬಳಿ ಬಂದು ಗವಾಕ್ಷದೊಳಗೆ ನೋಡಿ, ಅಲ್ಲಾರೂ ಇಲ್ಲದಿದ್ದುದನ್ನು ಕಂಡು ನಿಶ್ಶಬ್ದವಾಗಿ ಒಳಗೆ ಪ್ರವೇಶಮಾಡಿ ಅಲ್ಲಿಂದ ಅಂತಃಪುರಕ್ಕೆ ಹೋದನು.

ಇತ್ತಲಾಗಿ ರಾಜಪುತ್ರನು ವಿಮಲೆಯ ಕೈಯಿಂದ ಭಲ್ಲೆಯಗಳನ್ನು ತೆಗೆದುಕೊಂಡು ಮೊದಲಿನಂತೆ ಮರದಮೇಲೇರಿ, ಮೊದಲು ಗುರುತುಮಾಡಿಕೊಂಡಿದ್ದ ಮರಕ್ಕೆ ಸರಿಯಾಗಿ ನೋಡಲಾಗ ಒಂದೇ ರುಮ್ಮಾಲು ಕಂಡುಬಂದಿತು; ಮತ್ತೊಬ್ಬನು ಅಲ್ಲಿರಲಿಲ್ಲ. ರಾಜಕುಮಾರನೊಂದು ಭಲ್ಲೆಯವನ್ನು ಎಡಗೈಯಲ್ಲಿ ಹಿಡಿದುಕೊಂಡು ಮತ್ತೊಂದು ಕೈಯಿಂದ ಎರಡನೆಯ ಭಲ್ಲೆಯವನ್ನು ಹಿಡಿದು ಕಣ್ಣಿಗೆ ಕಂಡುಬರುತ್ತಿದ್ದಾ ರುಮ್ಮಾಲಿಗೆ ಗುರಿನೋಡಿ ಬಲದಿಂದಿರಿದನು. ಕೂಡಲೇ ಮರದೆಲೆಗಳ ಮರ್ಮರ ಶಬ್ದವಾಗಿ, ನೆಲದ ಮೇಲೊಂದು ಭಾರವಾದ ಪದಾರ್ಥವು ಬಿದ್ದಂತಾಯಿತು. ರುಮ್ಮಾಲು ಕಾಣಲಿಲ್ಲವಾದಕಾರಣ ಭಲ್ಲೆಯದಿರಿತದಿಂದ ರುಮ್ಮಾಲಿನವನು ನೆಲಕ್ಕೆ ಬಿದ್ದಿರಬೇಕೆಂದೆಂದುಕೊಂಡು, ಮರದಿಂದಿಳಿದು ಬಂದು ಆ ಮನುಷ್ಯನು ಬಿದ್ದಿದ್ದ ಸ್ಥಳಕ್ಕೆ ಹೋಗಿ ನೋಡಲಾಗಿ ಅವನೊಬ್ಬ ಮುಸಲ್ಮಾನನಾಗಿದ್ದನು. ಭಲ್ಲೆಯವು ಕಣ್ಣಿನ ಪಾರ್ಶ್ವದಲ್ಲಿ ಚುಚ್ಚಿಕೊಂಡಿದ್ದಿತು. ಪ್ರಾಣವು ಹೋಗಿದ್ದಿತು. ಭಲ್ಲೆಯವು ಕಣ್ಣಿನ ಪಾರ್ಶ್ವದಲ್ಲಿ ಚುಚ್ಚಿ ತಲೆಯ ಮೊದಳಿನವರೆಗೂ ಪ್ರವೇಶಿಸಿದ್ದಿತು. ಅವನ ಕವಚದ ಕಿಸೆಯಿಂದೊಂದು ಕಾಗದದ ಕೊನೆಯು ಹೊರಗೆ ಕಾಣುತಿತ್ತು. ಜಗತ್ಸಿಂಹನಾ ಕಾಗದವನ್ನು ತೆಗೆದುಕೊಂಡು ಬಂದು ಬೆಳದಿಂಗಳ ಬೆಳಕಿನಲ್ಲೋದಿದನು. ಅದರಲ್ಲಿ ಬರೆದಿತ್ತೇನೆಂದರೆ:-

"ಕತಲೂಖಾನನ ಆಜ್ಞಾನುವರ್ತಿಗಳೆಲ್ಲರೂ ಈ ಕಾಗದವನ್ನು ನೋಡಿದ ಕೂಡಲೇ ಕಾಗದವನ್ನು ತರುವವನ ಅಪ್ಪಣೆ ಪ್ರಕಾರ ನಡೆದುಕೊಳ್ಳಬೇಕು." —ಕತಲೂಖಾನ್

ವಿಮಲೆಯು ದೂರ ನಿಂತು ಶಬ್ದವನ್ನು ಮಾತ್ರ ಕೇಳುತ್ತಿದ್ದಳು. ಇತರ ವಿದ್ಯಮಾನಗಳವಳರಿಯಳು. ರಾಜಕುಮಾರನವಳ ಬಳಿ ಬಂದು ನಡೆದುದನ್ನೆಲ್ಲಾ ವಿವರವಾಗಿ ಹೇಳಿದನು. ವಿಮಲೆಯು ಕೇಳಿ, 'ಯುವರಾಜ! ನಾನು ಹೀಗೆಂದು ತಿಳಿದಿದ್ದರೆ ಭಲ್ಲೆಯಗಳನ್ನು ತಂದು ಕೊಡುತಿರಲಿಲ್ಲ. ಮಹಾಪಾತಕವಾಡಿ ದಂತಾಯಿತು. ಅದಕ್ಕೆನಗೆ ಪ್ರಾಯಶ್ಚಿತ್ತವಾಗಬಹುದು' ಎಂದಳು.

ಯುವರಾಜನು, 'ಶತ್ರುವಧೆಯಾದುದಕ್ಕೆ ವ್ಯಸನಪಡಲೇಕೆ? ಶತ್ರುವಧೆ ಯುಕ್ತವಾದುದೆಂದುಕ್ತವಾಗಿದೆ' ಎಂದನು.

ವಿಮಲೆಯು, 'ಯುದ್ಧಮಾಡತಕ್ಕವರು ಹಾಗೆ ಹೇಳಬಹುದು. ನಾನಾ ದರೋ, ಹೆಂಗಸು' ಎಂದು ಹೇಳಿ, ಸ್ವಲ್ಪ ಹೊತ್ತು ಸುಮ್ಮನಿದ್ದು ಬಳಿಕ, 'ರಾಜಕುಮಾರ! ಸಾವಕಾಶದಿಂದ ಪ್ರಯೋಜನವಿಲ್ಲ; ಅರಮನೆಯೊಳಗೆ ಹೋಗೋಣ, ನಾನು ಬಾಗಿಲ ತೆರೆದು ಬಂದಿದ್ದೇನೆ' ಎಂದಳು.

ಉಭಯರೂ ಅರಮನೆಯ ಬಳಿ ಬಂದು, ವಿಮಲೆಯು ಅರಮನೆಯೊಳಗೆ ಮೊದಲು ಪ್ರವೇಶಮಾಡಿದಳು. ಅವಳ ಹಿಂದೆ ರಾಜಕುಮಾರನು ಹೋದನು. ಪ್ರವೇಶಮಾಡುತಲೇ ರಾಜಕುಮಾರನಿಗೆ ಹೃತ್ಕಂಪವಾಗಿ ಕಾಲು ನಡುಗಿತು. ಶತಸಹಸ್ರಸೇನೆಯೆದುರಿಗೆ ಸ್ವಲ್ಪವೂ ಭಯಪಡದವನಿಗೆ ಆ ಸುಖಾಲಯಕ್ಕೆ ಪ್ರವೇಶಮಾಡಿದೊಡನೆ ಅಷ್ಟೊಂದು ಹೃತ್ಕಂಪವಾಗಲೇಕೆ?

ವಿಮಲೆಯು ಮೊದಲಿನಹಾಗೆ ಗವಾಕ್ಷವನ್ನು ಮುಚ್ಚಿ ಅನಂತರ ರಾಜ ಕುಮಾರನನ್ನು ತನ್ನ ಚಿಕ್ಕಮನೆಗೆ ಕರೆದುಕೊಂಡುಹೋಗಿ ಅಲ್ಲೊಂದು ಮಂಚದ ಮೇಲೆ ಕುಳ್ಳಿರಿಸಿ, 'ತಮಗೆ ಬೇರೊಂದಾವ ಯೋಚನೆಯೂ ಇಲ್ಲದಿದ್ದರೆ, ಸಾಕ್ಷಾತ್ತು ಭಗವಂತನು ವಟಪತ್ರಶಾಯಿಯಾಗಿದ್ದನೆಂಬುದನ್ನು ಯೋಚಿಸುತಿರ ಬಹುದು' ಎಂದು ಹೇಳಿ ಅಲ್ಲಿಂದ ಹೊರಟುಹೋದಳು.

ಸ್ವಲ್ಪ ಹೊತ್ತಿನಲ್ಲಿ ರಾಜಕುಮಾರನು ಕುಳಿತಿದ್ದ ಚಿಕ್ಕಮನೆಯ ಪಕ್ಕದ ಬಾಗಿಲು ತೆರೆಯಲ್ಪಟ್ಟಿತು. ಅತ್ತ ಮತ್ತೊಂದು ಚಿಕ್ಕಮನೆ. ಅಲ್ಲಿ ನಿಂತು ವಿಮಲೆಯು ರಾಜಕುಮಾರನನ್ನು, 'ಯುವರಾಜ! ಇತ್ತ ಬನ್ನಿ, ಸ್ವಲ್ಪ ವಿಜ್ಞಾ ಪಿಸತಕ್ಕುದಿದೆ' ಎಂದು ಕರೆದಳು.

ಯುವರಾಜನಿಗೆ ಹೃತ್ಕಂಪವು ಮತ್ತೂ ಹೆಚ್ಚಾಯಿತು. ಅದರರ್ಥವು ಅವನಿಗೆ ಚೆನ್ನಾಗಿ ವ್ಯಕ್ತವಾಗಿರಬಹುದು. ಯುವರಾಜನು ಮಂಚದಿಂದೆದ್ದು ಪಕ್ಕದ ಚಿಕ್ಕಮನೆಗೆ ಹೋದನು. ಕೂಡಲೇ ವಿಮಲೆಯು ಮಿಂಚಿನಂತೆ ಮಾಯ ವಾಗಿ ಹೊರಟುಹೋದಳು. ಚಿಕ್ಕಮನೆಯು ಸ್ವರ್ಗಸುಖಾನುಭವಕ್ಕಣಿಯಾದ ಸಾಮಗ್ರಿಗಳಿಂದ ಘಮಘಮಿಸುತಿದ್ದಿತು. ಬೆಳ್ಳಿಯ ದೀಪದ ಕಂಭಗಳು ಜಾಜ್ವಲ್ಯ ಮಾನವಾಗಿ ಉರಿಯುತಿದ್ದುವು. ಚಿಕ್ಕಮನೆಯಲ್ಲಿ ಅವಕುಂಠನವತಿಯೊಬ್ಬಳು ನಿಂತಿದ್ದಳು. ಅವಳಾ ತಿಲೋತ್ತಮೆ.

## ಹದಿನೆಂಟನೆಯ ಪರಿಚ್ಛೇದ

### ಚತುರಾಚತುರಿ

ವಿಮಲೆಯು ತನ್ನ ಸಂಕಲ್ಪವೀಡೇರಿತೆಂದು ನಿರಾಲೋಚನೆಯಿಂದ ಚಿಕ್ಕಮನೆಗೆ ಒಂದು ಸುಖಪರ್ಯಂಕಾರೋಹಣಮಾಡಿ ಕುಳಿತಳು. ಅವಳ ಮುಖವು ಹರ್ಷದಿಂದ ಪ್ರಫುಲ್ಲವಾಗಿದ್ದಿತು. ಚಿಕ್ಕಮನೆಯಲ್ಲಿ ದೀಪವು ಉರಿಯುತಿದ್ದಿತು. ಎದುರಿಗೆ ನಿಲವುಗನ್ನಡಿ. ಮುಹೂರ್ತಕಾಲ ದರ್ಪಣದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿದಳು. ಅವಳ ಮುಂಗುರುಳು ಪ್ರದೋಷದಲ್ಲಿ ವಿನ್ಯಾಸವಾಗಿದ್ದಂತಿದ್ದಿತು. ವಿಶಾಲವಾದಾ ಲೋಚನಗಳಲ್ಲಿ ಅದೇ ಕಜ್ಜಲ ಪ್ರಭೆ; ಅಧರದಲ್ಲಿ ಅದೇ ತಾಂಬೂಲ ರಾಗ; ಕರ್ಣಗಳಲ್ಲಿ ಕಪೋಲ ಸಂಸಕ್ತವಾಗಿ ಝುಳಕುತಿದ್ದ ಅದೇ ಕರ್ಣಾಭರಣ ಗಳು ಪ್ರಕಾಶಿಸುತಿದ್ದುವು. ವಿಶ್ರಾಂತಿ ನಿಮಿತ್ತವಾಗಿ ದಿಂಬನ್ನೊರಗಿಕೊಂಡು ಹಾಸಿಗೆಯಮೇಲೆ ಅರ್ಧಶಾಯಿತವಾಗಿ ಕುಳಿತಿದ್ದಳು. ಮುಕುರದಲ್ಲಿ ನಿಜಲಾವಣ್ಯ ವನ್ನು ನೋಡಿಕೊಂಡು ಹಾಸ್ಯವದನೆಯಾಗುವಳು. ದಿಗ್ಗಜಪಂಡಿತನು ಮನೆ ಯನ್ನು ಬಿಟ್ಟು ಹೊರಡಲನುಮಾನಿಸಲಿಲ್ಲವೇಕೆಂದು ಮನದೊಳು ಯೋಚಿಸಿ ಕೊಳ್ಳುತ್ತ ಮಂದಹಾಸವನ್ನು ತೋರುವಳು.

ವಿಮಲೆಯು ಜಗತ್ಸಿಂಹನ ಆಗಮನವನ್ನೆದುರು ನೋಡುತ್ತಾ ಕುಳಿತಿದ್ದಳು. ಅಕಸ್ಮಾತ್ತಾಗಿ ಮಾವಿನ ತೋಪಿನಲ್ಲಿ ಗಂಭೀರವಾದ ತುತೂರಿಯ ಧ್ವನಿಯಾಯಿತು. ವಿಮಲೆಯು ಗಾಬರಿಯಿಂದೆದ್ದು ಭೀತಿಗೊಂಡಳು. ಅರಮನೆಯ ಮಹಾ ದ್ವಾರದಲ್ಲಿ ಹೊರತು ಮತ್ತೆಲ್ಲಿಯೂ ತೂರ್ಯಧ್ವನಿಯಾಗುವ ಪದ್ಧತಿಯಿಲ್ಲ. ತತ್ರಾಪಿ, ರಸಾಲ ಕಾನನದಲ್ಲಿ ರಾತ್ರಿ ತೂರ್ಯಧ್ವನಿಯಾದುದು ಹೆಚ್ಚು ಯೋಚ ನೆಗೆ ಕಾರಣವಾಗಿ, ಆ ರಾತ್ರಿ ಶೈಲೇಶ್ವರನ ಮಂದಿರಕ್ಕೆ ಹೋಗುವಾಗಲೂ ಮಂದಿರದಿಂದ ಹಿಂದಿರುಗಿ ಬರುವಾಗಲೂ ನೋಡಿದುದೆಲ್ಲವೂ ಮನಸ್ಸಿನಲ್ಲಿ ಝುಡತಿಯಾಗಿ ನೆನವಿಗೆ ಬಂದು, ತುತೂರಿಯ ಧ್ವನಿಯು ಅಮಂಗಳ ಘಟನೆಗೆ ಪೂರ್ವ ಲಕ್ಷಣವೆಂದು ಸಶಂಕಚಿತ್ತಳಾಗಿ ಗವಾಕ್ಷದ ಬಳಿಗೆ ಬಂದು ಮಾವಿನ ತೋಪಿನಕಡೆ ದೃಷ್ಟಿಸಿ ನೋಡಿದಳು. ತೋಪಿನೊಳಗೆ ವಿಶೇಷವೇನೂ ಕಂಡು ಬರಲಿಲ್ಲ. ಆಗವಳು ವ್ಯಸ್ತಚಿತ್ತಳಾಗಿ ತನ್ನ ಚಿಕ್ಕಮನೆಯಿಂದ ಹೊರಗೆ ಹೊರಟಳು. ಆ ಚಿಕ್ಕಮನೆಯ ಮುಂಭಾಗದಲ್ಲೊಂದು ಪಡಸಾಲೆ; ಪಡಸಾಲೆಯ ಆಚೆ ಮತ್ತೊಂದು ನಡುಮನೆ; ನಡುಮನೆಯಲ್ಲಿ ಬಿಸಿಲ ಮಹಡಿಯಮೇಲೆ ಹತ್ತು ವುದಕ್ಕೆ ಮೆಟ್ಟಲುಗಳಿದ್ದುವು. ವಿಮಲೆಯು ಚಿಕ್ಕಮನೆಯಿಂದ ಹೊರಟು ಮೆಟ್ಟಲು ಗಳಮೇಲೆ ಹತ್ತಿ, ಬಿಸಿಲ ಮಹಡಿಯಮೇಲೆ ಹೋಗಿ ಸುತ್ತ ನೋಡಿದಳು. ತೋಪಿನ ಗಭೀರವಾದ ಛಾಯಾಂಧಕಾರದಿಂದೇನೂ ಕಂಡುಬರಲಿಲ್ಲ. ವಿಮ ಲೆಯು ಮೊದಲಿಗಿಂತ ಹೆಚ್ಚು ಉದ್ವಿಗ್ನಚಿತ್ತಳಾಗಿ ಮಹಡಿಯ ಅರಗಿನಲ್ಲಿದ್ದ

ಕೈಪಿಡಿಯ ಗೋಡೆಯ ಹತ್ತಿರ ಹೋಗಿ, ಗೋಡೆಯಮೇಲೆ ವಕ್ಷವನ್ನಿಟ್ಟು ಬೊಗ್ಗಿ ಅರಮನೆಯ ತಳಹದಿ ಕಾಣುವವರೆಗೂ ನೋಡಿದಳು. ಏನೇನೂ ಕಾಣಲಿಲ್ಲ. ಶ್ಯಾಮೋಜ್ವಲವಾದ ಶಾಖಾಪಲ್ಲವಗಳು ಸ್ನಿಗ್ಧವಾದ ಚಂದ್ರಕಿರಣ ದಲ್ಲಿ ಪ್ಲಾವಿತವಾಗಿ ಅನನ್ಯ ಸದೃಶ ಕಾಂತಿಯನ್ನು ತಾಳಿ ಮಧ್ಯೆ ಮಧ್ಯೆ ಮಂದ ಮಾರುತದಿಂದ ಕಂಪಿತವಾಗಿ ಪಿಂಗಳ ವರ್ಣವನ್ನು ಧಾರಣೆಮಾಡುತಿದ್ದುವು. ತೋಪಿನೊಳಗೆ ಘೋರಾಂಧಕಾರವಾಗಿದ್ದರೂ ಅಲ್ಲಲ್ಲಿ ಮರದೆಲೆಗಳ ನೆರಳಿಲ್ಲದೆಡೆ ಚಂದ್ರಕಿರಣವು ನೆಲದಮೇಲೆ ಬಿದ್ದಿದ್ದುದು ಕಾಣುತಿದ್ದಿತು. ಆಮೋದರನದಿಯ ಸ್ಥಿರಾಂಬುರಾಶಿಯ ಮಧ್ಯದಲ್ಲಿ ನೀಲಾಂಬರದಲ್ಲಿದ್ದ ತಾರಾಸಹಿತನಾದ ಚಂದ್ರನು ಪ್ರತಿಬಿಂಬಿತನಾಗಿ ಪ್ರಕಾಶಿಸುತಿದ್ದನು. ನದಿಯ ಆಚೆಯ ದಡದಲ್ಲಿ ಅನತಿದೂರ ಗಗನಸ್ಪರ್ಶಮಾಡುತಿದ್ದ ಅನೇಕವಾದ ಅರಮನೆಗಳು ಕಣ್ಗೊಳಿಸುತಿದ್ದುವು; ಅವುಗಳ ಪ್ರಾಸಾದಗಳಮೇಲೆ ವಿರಳವಾಗಿ ಅಲ್ಲಲ್ಲಿ ನಿಂತಿದ್ದ ಪ್ರಹರಿಗಳ ಆಕಾರವು ಕಾಣುವುದು. ಮತ್ತಾವುದೂ ಕಂಡುಬರುತ್ತಿರಲಿಲ್ಲ. ವಿಮಲೆಯು ವ್ಯಸನಾ ಕ್ರಾಂತೆಯಾಗಿ ಹಿಂದಿರುಗುವುದರೊಳಗೆ ಒಮ್ಮಿಂದೊಮ್ಮೆ ಬೆನ್ನಿನಮೇಲಾರೋ ಕೈಯಿಟ್ಟಂತಾಯಿತು. ವಿಮಲೆಯು ಚಮಕಿತೆಯಾಗಿ ಹಿಂದಿರುಗಿ ನೋಡಿದಳು. ಅಪರಿಚಿತ ಮನುಷ್ಯನೊಬ್ಬನು ಸಶಸ್ತ್ರಪಾಣಿಯಾಗಿ ನಿಂತಿದ್ದನು. ಅವನನ್ನು ಕಂಡು ಚಿತ್ರಾರ್ಪಿತ ಪ್ರತಿಮೆಯಂತೆ ನಿಸ್ಪಂದವಾಗಿ ನಿಂತಳು.

ಶಸ್ತ್ರಧಾರಿಯು ವಿಮಲೆಯನ್ನು ಕುರಿತು, 'ಕೂಗಬೇಡ ; ಸುಂದರಿಯರಿಗದು ತಕ್ಕುದಲ್ಲ; ಕೂಗಿದರೆ ಒಮ್ಮೆಗೆ ಕೈಪಿಡಿಯ ಗೋಡೆಯಿಂದಾಚೆಗೆ ಹಾರಿಸಿ ಬಿಡುವೆನು' ಎಂದು ಹೇಳಿದನು.

ವಿಮಲೆಯನ್ನು ಹೀಗೆಂದು ಹೆದರಿಸಿದ ಮನುಷ್ಯನು ಪಠಾನ ಜಾತಿಯವರ ಸೈನಿಕರಂತೆ ಉಡುಪನ್ನುಟ್ಟಿದ್ದನು. ಅವನುಡುಪುಗಳನ್ನು ನೋಡುವುದರಿಂದಲೇ ಅವನೊಬ್ಬ ಮಹತ್ಪದಾಭಿಷಿಕ್ತನೆಂದು ಅನಾಯಾಸವಾಗಿ ಬೋಧೆಯಾಗುವುದು. ಅವನ ವಯಸ್ಸು ಮೂವತ್ತು ವರ್ಷಗಳಿಗೆ ಮೀರಿರಲಿಲ್ಲ; ಅತಿಶಯ ಕಾಂತಿ ಯುಳ್ಳವನಾಗಿದ್ದನು. ತಲೆಯಮೇಲಿದ್ದ ಉಷ್ಣೀಷದಲ್ಲಿ ಮಹಾರ್ಘವಾದೊಂದು ವಜ್ರವು ಪ್ರಕಾಶಿಸುತಿದ್ದಿತು. ವಿಮಲೆಯ ಮನಸ್ಸು ಸ್ಥೈರ್ಯವಾಗಿದ್ದಿದ್ದರೆ, ಅವನನ್ನು ಜಗತ್ಸಿಂಹನಿಗೆ ಕಡಿಮೆಯಾದ ಮನುಷ್ಯನಲ್ಲವೆಂದು ತಿಳಿಯುತಿದ್ದಳು. ಅವನು ಜಗತ್ಸಿಂಹನಹಾಗೆ ದೀರ್ಘಕಾಯನಾಗಿ ವಿಶಾಲ ವಕ್ಷಸ್ಥಳವುಳ್ಳವನಾಗಿಲ್ಲ ದಿದ್ದರೂ, ತತ್ಸದೃಶ ವೀರತ್ವ ವ್ಯಂಜಕವಾದ ಕಾಂತಿಯುಳ್ಳವನಾಗಿ ತವಧಿಕ ಸುಕುಮಾರ ದೇಹವುಳ್ಳವನಾಗಿದ್ದನು. ಅವನ ಕಟಿಬಂಧನದಲ್ಲಿ ಬಹುಮೂಲ್ಯದ ಪ್ರವಾಳಜಡಿತವಾದ ದಮಾಸ್ಕದೇಶದೊಂದೊರೆ ಮುಚ್ಚಿದ ಚೂರಿಯಿದ್ದಿತು; ಕೈಯ ಲ್ಲೊಂದು ಬಿಚ್ಚುಕತ್ತಿಯನ್ನು ಹಿಡಿದಿದ್ದನು. ಮತ್ತಾವ ಆಯುಧವೂ ಇರಲಿಲ್ಲ.

ಸೈನಿಕವೃತ್ತಿಯುಳ್ಳಾ ಪುರುಷನು ಪುನಃ ವಿಮಲೆಯನ್ನು ಕುರಿತು, 'ಗದ್ದಲಮಾಡಬೇಡ; ಮಾಡಿದರೆ ವಿಪತ್ತುಂಟಾಗುವುದು' ಎಂದು ಹೇಳಿದನು.

ಪ್ರತ್ಯುತ್ಪನ್ನಮತಿಯಾದ ವಿಮಲೆಯು ಕ್ಷಣಕಾಲ ಮಾತ್ರ ಬುದ್ಧಿಶೂನ್ಯವಾದವಳಹಾಗಿದ್ದವಳು ಶಸ್ತ್ರಧಾರಿಯ ಮಾತಿನಿಂದವನ ಅಭಿಪ್ರಾಯವನ್ನು ತಿಳಿದುಕೊಂಡಳು. ವಿಮಲೆಯ ಬೆನ್ನಿನ ಹಿಂದುಗಡೆ ಮಹಡಿಯ ಅಂಚು, ಎದುರಿಗೆ ಶಸ್ತ್ರಪಾಣಿ; ವಿಮಲೆಯನ್ನು ಮಹಡಿಯ ಮೇಲಿನಿಂದ ಕೆಳಕ್ಕೆ ತಳ್ಳುವುದವನಿಗೆ ಕಷ್ಟಕಾರ್ಯವಾಗಿರಲಿಲ್ಲ. ವಿಮಲೆಯು ಅದನ್ನೆಲ್ಲಾ ಯೋಚಿಸಿ ಧೈರ್ಯಗೊಂಡವಳಾಗಿ ಸೈನಿಕನನ್ನು ಕುರಿತು, 'ನೀನಾರು?' ಎಂದು ಕೇಳಿದಳು.

ಸೈನಿಕನು, 'ನನ್ನ ಪರಿಚಯದಿಂದ ನಿನಗೇನು ಪ್ರಯೋಜನ?' ಎಂದುತ್ತರವನ್ನು ಕೊಟ್ಟನು.

ವಿಮಲೆಯು, 'ನೀನು ಅರಮನೆಯೊಳಗೇಕೆ ಬಂದೆ? ಕಳ್ಳರು ಶೂಲಕ್ಕೆ ಗುರಿಯಾಗುವರೆಂದು ನೀನು ಕೇಳಿ ತಿಳಿದಿಲ್ಲವೆ?' ಎಂದಳು.

ಸೈನಿಕನು—ಸುಂದರಿ! ನಾನು ಕಳ್ಳನಲ್ಲ.

ವಿಮಲೆ—ನೀನು ಅರಮನೆಯೊಳು ಹೇಗೆ ಬಂದೆ?

ಸೈನಿಕ—ನಿನ್ನ ದಯೆಯಿಂದ; ನೀನು ಗವಾಕ್ಷವನ್ನು ತೆರೆದು ಹೊರಟು ಹೋದಾಗ; ನಿನ್ನ ಹಿಂದೆ ಮಹಡಿಯಮೇಲೆ ಬಂದೆನು.

ವಿಮಲೆಯು ಕೈಯಿಂದ ತಲೆಯನ್ನು ಹೊಡಿದುಕೊಂಡು, ಪುನಃ 'ನೀನಾರು?' ಎಂದು ಕೇಳಿದಳು.

ಸೈನಿಕನು, 'ನಿನಗೆನ್ನ ಪರಿಚಯವನ್ನು ಹೇಳುವುದರಿಂದ ಹಾನಿಯೇನೂ ಇಲ್ಲ' ಎಂದು ಹೇಳಿ, 'ನಾನು ಪಠಾನನು' ಎಂದನು.

ವಿಮಲೆ—ಅದರಿಂದ ಪರಿಚಯವನ್ನು ಹೇಳಿದಹಾಗಾಗಲಿಲ್ಲ; ನೀನು ಜಾತಿಯಲ್ಲಿ ಪಠಾನನೆಂದು ನಿನ್ನ ಮೋರೆಯಿಂದ ಗೊತ್ತಾಯಿತು. ನೀನಾರು? ಹೇಳು.

ಸೈನಿಕ—ಈಶ್ವರೇಚ್ಛೆಯಲ್ಲೀ ದೀನನಾದವನ ಹೆಸರು ಉಸ್ಮಾನ್‌ಖಾನ್.

ವಿಮಲೆ—ಉಸ್ಮಾನ್‌ಖಾನನೆಂಬವನನ್ನು ನಾನೆಂದೂ ಕೇಳಿ ಅರಿತಿಲ್ಲ.

ಸೈನಿಕ—ಕತಲೂಖಾನನ ಸೇನಾಪತಿ ಉಸ್ಮಾನ್‌ಖಾನ್.

ಅದನ್ನು ಕೇಳಿ ವಿಮಲೆಯ ಶರೀರವು ನಡುಗಲಾರಂಭವಾಯಿತು. ಹೇಗಾದರೂ ಅವನ ಕೈಯಿಂದ ತಪ್ಪಿಸಿಕೊಂಡು ಹೋಗಿ ವೀರೇಂದ್ರಸಿಂಹನಿಗೆ ಸಮಾಚಾರವನ್ನು ಕೊಡಬೇಕೆಂದವಳಿಗಿಷ್ಟವುಂಟಾಯಿತು. ಆದರೆ ಅದಕ್ಕಾವ ಉಪಾಯವೂ ತೋರಲಿಲ್ಲ. ಸೇನಾಪತಿಯು ಗತಿರೋಧಮಾಡಿಕೊಂಡು ಅವಳೆದುರಿಗೆ ನಿಂತಿದ್ದನು. ಉಪಾಯಾಂತರವಿಲ್ಲದೆ ವಿಮಲೆಯು ಆವನಾದರೂ ಪ್ರಹರಿಯು ಬರುವತನಕ ಸೇನಾಪತಿಯನ್ನು ಮಾತನಾಡುವ ನೆಪದಿಂದ ನಿಲ್ಲಿಸಿಕೊಂಡಿದ್ದರೆ ತನ್ನ ಸಂಕಲ್ಪ ಈಡೇರುವುದಕ್ಕವಕಾಶವು ಸಿಗಬಹುದೆಂದು ಯೋಚಿಸಿ, ಪುನಃ ಅವನೊಂದಿಗೆ

ಮಾತನಾಡುವುದಕ್ಕೆ ತೊಡಗಿ, ಸಂದರ್ಭಾನುಸಾರವಾಗಿ, 'ದುರ್ಗದೊಳಗೇಕೆ ಪ್ರವೇಶಮಾಡಿದಿರಿ' ಎಂದು ಕೇಳಿದಳು.

ಉಸ್ಮಾನ್‌ಖಾನ್—ನಾವು ವೀರೇಂದ್ರಸಿಂಹನಿಗೆ ನಮ್ಮ ಪಕ್ಷವಾಗಿರ ಬೇಕೆಂದು ದೂತನ ಸಂಗಡ ಹೇಳಿಕಳುಹಿದ್ದೆವು. ವೀರೇಂದ್ರಸಿಂಹನು, ಸೈನ್ಯ ಸಮೇತರಾಗಿ ದುರ್ಗದೊಳಗೆ ಪ್ರವೇಶಮಾಡಬಹುದೆಂದು ಪ್ರತ್ಯುತ್ತರವನ್ನು ಹೇಳಿ ಕಳುಹಿದ್ದನು.

ವಿಮಲೆ—ನೀವು ಹೇಳುವುದರಲ್ಲಿ ದುರ್ಗಾಧಿಪತಿಯು ನಿಮ್ಮೊಡನೆ ಮಿತ್ರ ಭಾವವನ್ನು ತಾಳದೆ ಮೊಗಲರ ಪಕ್ಷವನ್ನು ವಹಿಸಿದುದರಿಂದ ದುರ್ಗವನ್ನು ಕೈವಶ ಮಾಡಿಕೊಳ್ಳುವುದಕ್ಕಾಗಿ ನೀವು ಬಂದಹಾಗೆ ತೋರುತ್ತದೆ. ಆದರೆ, ನೀವೊಬ್ಬರೇ ಬಂದಿರುವಂತೆ ಕಾಣುತ್ತದೆ.

ಉಸ್ಮಾನ್‌ಖಾನ್—ಪ್ರಕೃತಕ್ಕೆ ನಾನೊಬ್ಬನಾಗಿದ್ದೇನೆ.

ವಿಮಲೆಯು, 'ಆ ಕಾರಣದಿಂದಲ್ಲವೆ? ಭಯಗೊಂಡು ನಾನು ಹೋಗುವುದ ನ್ನಡ್ಡಿಮಾಡಿರುವುದು?' ಎಂದಳು.

ಉಸ್ಮಾನ್‌ಖಾನನು ಸ್ವಲ್ಪ ನಕ್ಕು, 'ಸುಂದರಿ! ನಿನ್ನ ಕಟಾಕ್ಷಕ್ಕೆ ಹೊರತು ಮತ್ತಾವುದಕ್ಕೂ ಹೆದರಬೇಕಾದ ಆವಶ್ಯಕವಿಲ್ಲ; ಆದರೆ, ನಿನ್ನಲ್ಲಿ ನನ್ನದೊಂದು ಪ್ರಾರ್ಥನೆಯುಂಟು' ಎಂದನು.

ವಿಮಲೆಯು ಕುತೂಹಲದಿಂದ ಉಸ್ಮಾನ್‌ಖಾನನ ಮುಖವನ್ನು ನೋಡುತ್ತ ನಿಂತಳು.

ಉಸ್ಮಾನ್‌ಖಾನ್—ನೀನು ಹೊದ್ದುಕೊಂಡಿರುವ ಉತ್ತರೀಯದ ಸೆರಗಿ ನಲ್ಲಿರುವ ಗವಾಕ್ಷದ ಬೀಗದಕೈಯನ್ನೆನಗೆ ಕೊಟ್ಟರೆ ಬಹಳ ಬಾಧ್ಯಪಡುವೆನು. ನಿನ್ನ ಅಂಗಸ್ಪರ್ಶದಿಂದ ನಿನಗೆ ಅವಮಾನಪಡಿಸುವುದಕ್ಕೆ ಸಂಕೋಚಪಡುತ್ತೇನೆ.

ವಿಮಲೆ—ಬಹಳ ಸಂಕೋಚವಲ್ಲವೆ? ನಿಮಿಷಾರ್ಧಕ್ಕೆ ಹಿಂದೆ ನನ್ನನ್ನು ಮುಹಡಿಮೇಲಿನಿಂದ ತಳಕ್ಕೆ ತಳ್ಳಬೇಕೆಂದಿರಲಿಲ್ಲವೆ?

ಉಸ್ಮಾನ್—ಆವಶ್ಯಕವಾದರೆ ಈಗಲೂ ಆ ಉದ್ದೇಶವು ನೆರವೇರದಿರದು? ಆವಶ್ಯಕವಾದ ಕೆಲಸದಲ್ಲಿ ಮರ್ಯಾದೆಯುಂಟೆ?

ವಿಮಲೆಯು ಗವಾಕ್ಷದ ಬೀಗದಕೈ ಸೇನಾಪತಿಯ ಅಭೀಷ್ಟಸಿದ್ಧಿಗೆ ಆವಶ್ಯಕ ವಾದುದೆಂದು ತಿಳಿದು ಹೆಚ್ಚು ವಿಳಂಬಮಾಡದೆ, ಮನಸ್ಸಿನಲ್ಲಿ, ಬೀಗದಕೈಯನ್ನು ಕೊಟ್ಟೇಕೊಡಬೇಕು; ಬಲಾತ್ಕಾರದಿಂದ ಕಸಕೊಳ್ಳುವೆನೆಂದು ಹೇಳುವವನು ಕೊಡಬೇಕೆಂದು ದೈನ್ಯದಿಂದ ಬೇಡುವುದು ಕುಹಕವೇ ಹೊರತು ಬೇರೆ ಇರ ಲಾರದು; ಕೊಡದಿದ್ದರೆ ಬಲಾತ್ಕಾರದಿಂದ ಕಸಕೊಳ್ಳದಿರಲಾರನೆಂದು ಯೋಚಿಸಿ ಕೊಂಡಳು. ಅಂತಹ ಕಾಲದಲ್ಲಿ ಬೇರೆ ಹೆಂಗಸಾಗಿದ್ದರೆ, ಬೀಗದಕೈಯನ್ನು ಕೂಡಲೆ ಬಿಸುಟುಬಿಡುತಿದ್ದಳು. ಆದರೆ, ಚತುರೆಯಾದಾ ವಿಮಲೆಯು ಹಾಗೆ

ಮಾಡದೆ ಸೇನಾಪತಿಯನ್ನು ಕುರಿತು, 'ಮಹಾಶಯರೆ! ನಾನಾಗಿಯೇ ಬೀಗದ ಕೈಯನ್ನು ಕೊಡದಿದ್ದರೆ ತಾವದನ್ನಾವ ಪ್ರಕಾರ ತೆಗೆದುಕೊಳ್ಳುವಿರಿ?' ಎಂದು ಕೇಳುತ್ತ, ತಾನು ಹೊದ್ದಿದ್ದ ಅಂಗವಸ್ತ್ರವನ್ನು ತೆಗೆದು ಕೈಯಲ್ಲಿ ಹಿಡಿದು ಕೊಂಡಳು. ಉಸ್ಮಾನನು ಅಂಗವಸ್ತ್ರದಮೇಲೆ ಕಣ್ಣಿಟ್ಟುಕೊಂಡು, 'ನೀನಾಗಿ ಕೊಡದಿದ್ದರೆ ನಿನ್ನ ಅಂಗಸ್ಪರ್ಶದ ಸುಖಾನುಭವವನ್ನು ಮಾಡುವೆನು' ಎಂದು ಹೇಳಿದನು.

ವಿಮಲೆಯು, 'ಹಾಗೇವೇ ಮಾಡಿರಿ' ಎಂದು ಹೇಳಿ, ಕೈಯಲ್ಲಿದ್ದ ಅಂಗ ವಸ್ತ್ರವನ್ನು ಮಾವಿನ ತೋಪಿನಕಡೆಗೆ ಬಿಸುಟುಬಿಟ್ಟಳು. ಉಸ್ಮಾನನ ದೃಷ್ಟಿಯು ಅಂಗವಸ್ತ್ರದಮೇಲಿತ್ತಾದ್ದರಿಂದಕಾರಣ ಅವನು ಕೈಚಾಚಿ ಆ ಬಟ್ಟೆಯನ್ನಾತುಕೊಂಡನು.

ಉಸ್ಮಾನನು ಅಂಗವಸ್ತ್ರವನ್ನು ಭದ್ರಪಡಿಸಿಕೊಂಡು ಒಂದು ಕೈಯಿಂದ ವಿಮಲೆಯ ಕೈಯನ್ನು ಹಿಡಿದು ಮತ್ತೊಂದು ಕೈಯಲ್ಲಿ ಅಂಗವಸ್ತ್ರವನ್ನು ಹಿಡಿದು, ಹಲ್ಲಿಂದದರ ಸೆರಗಿನಲ್ಲಿ ಕಟ್ಟಿದ್ದ ಬೀಗದಕೈಯನ್ನು ಬಿಚ್ಚಿ ತೆಗೆದು, ಕಟಿಬಂಧನ ದಲ್ಲದನ್ನಿಟ್ಟುಕೊಂಡನು. ಅನಂತರ ಅವನು ಮಾಡಿದ ಕೆಲಸದಿಂದ ವಿಮಲೆಯು ಮುಖವು ವಿಶುಷ್ಕವಾಗಿ ಹೋಯಿತು. ಉಸ್ಮಾನ್‌ಖಾನನು ವಿಮಲೆಗೆ ಸಲಾ ಮನ್ನು ಮಾಡಿ, ಕ್ಷಮಿಸಬೇಕೆಂದು ಹೇಳಿ, ಅಂಗವಸ್ತ್ರದಿಂದವಳ ಕೈಗಳೆರಡನ್ನೂ ಕೈಪಿಡಿಯ ಗೋಡೆಯ ಕಟಕಟೆಗೆ ಭದ್ರವಾಗಿ ಬಿಗಿದು ಕಟ್ಟಿದನು.

ವಿಮಲೆಯು, 'ಇದೇನು!' ಎಂದು ಕೇಳಿದಳು.

ಉಸ್ಮಾನ್‌ಖಾನನು, 'ಇದು ಯುದ್ಧಕಾಲದಲ್ಲಿ ಮಾಡತಕ್ಕ ಪ್ರೇಮ ಬಂಧನ'ವೆಂದನು.

ವಿಮಲೆ—ತಮ್ಮಾ ದುಷ್ಕರ್ಮದ ಫಲವನ್ನು ಸ್ವಲ್ಪಕಾಲದಲ್ಲನುಭವಿಸುವಿರಿ.

ಉಸ್ಮಾನ್‌ಖಾನನದನ್ನು ಕಿವಿಗೆ ಹಾಕಿಕೊಳ್ಳದೆ ಅವಳನ್ನಾ ಅವಸ್ಥೆಯಲ್ಲಿಟ್ಟು ಹೊರಟುಹೋದನು. ವಿಮಲೆಯು ಚೀತ್ಕಾರಮಾಡಲಾರಂಭಿಸಿದಳು. ಅದರಿಂದ ಫಲೋದಯವಾಗಲಿಲ್ಲ; ಆರಿಗೂ ಅವಳ ಕೂಗು ಕೇಳಿಸಲಿಲ್ಲ.

ಉಸ್ಮಾನ್‌ಖಾನನು ಮೊದಲು ತಾನು ಹತ್ತಿಬಂದ ಮಾರ್ಗದಲ್ಲಿಳಿದುಹೋಗಿ ವಿಮಲೆಯ ಕೊಟಡಿಯ ಕೆಳಗಿನ ಕೊಟಡಿಗೆ ಹೋದನು. ಅಲ್ಲಿ ವಿಮಲೆಯು ಮಾಡಿದ್ದಹಾಗೆ ಗವಾಕ್ಷದ ಬಾಗಿಲಿಗೆ ಬೀಗದಕೈಹಾಕಿ ತಿರುಗಿಸಿ ಬಾಗಿಲನ್ನು ತಳ್ಳಿದನು. ಬಾಗಿಲು ತೆರೆದು ಗೋಡೆಯಲ್ಲಿ ಪ್ರವೇಶಕ್ಕೆ ಮಾರ್ಗವಾಯಿತು. ಅಲ್ಲವನು ನಿಂತು ಮೆಲ್ಲನೆ ಶಿಳ್ಳೆಹಾಕಿದನು. ಶಿಳ್ಳೆಯ ಶಬ್ದವನ್ನು ಕೇಳಿ ಮಾವಿನ ತೋಪಿನಕಡೆಯಿಂದೊಬ್ಬನು ಗವಾಕ್ಷದ ಬಳಿಗೆ ಬಂದು ಅರಮನೆಯೊಳಗೆ ಪ್ರವೇಶ ಮಾಡಿದನು. ಅವನಾದಮೇಲೆ ಮತ್ತೊಬ್ಬನು, ಹೀಗೆ ಒಬ್ಬೊಬ್ಬನಾಗಿ ಅನೇಕ ಮಂದಿ ಅರಮನೆಯೊಳಗೆ ನುಗ್ಗಿದರು. ಕಡೆಯ ಮನುಷ್ಯನು ಬರುತಲೇ ಉಸ್ಮಾನ್ ಖಾನನು ಅವನನ್ನು ಕುರಿತು, 'ಸಾಕು, ನೀನಿಲ್ಲಿದ್ದು ನಾನು ಮೊದಲು ಹೇಳಿರುವ

ಸಂಕೇತಧ್ವನಿಯನ್ನು ಕೇಳಿದೊಡನೆ, ಅರಮನೆಯನ್ನು ಆಕ್ರಮಣಮಾಡುವಂತೆ ತಾಜಖಾನನಿಗೆ ಹೇಳು' ಎಂದು ಹೇಳಿದನು. ಅದನ್ನು ಕೇಳಿದಾ ಮನುಷ್ಯನು ಹೊರಟುಹೋದನು. ಉಸ್ಮಾನ್‌ಖಾನನು ಒಳಕ್ಕೆ ಒಂದವನು ಅಷ್ಟೊಂದು ಸೇನೆಯನ್ನೂ ತೆಗೆದುಕೊಂಡು ನಿಶ್ಯಬ್ದವಾಗಿ ಮಹಡಿಯಮೇಲೆ ಹೋದನು. ಹೋಗುತ್ತ ವಿಮಲೆಯನ್ನು ಕಟ್ಟಿದ್ದ ಸ್ಥಳದಲ್ಲಿ ನಿಂತು ಸೈನಿಕನೊಬ್ಬನನ್ನು ಕುರಿತು, 'ರಹಿಂಷೇಕ್! ಈ ಹೆಂಗಸು ಬಹಳ ಚತುರಾಚತುರೀ, ಅವಳನ್ನಾವಾಗಲೂ ನಂಬ ಕೂಡದು; ನೀನವಳ ಹತ್ತಿರ ಪಹರೆ ನಿಂತಿರು; ಅವಳು ಪಲಾಯನವಾಗಲೆತ್ನಿಸಿದರೂ, ಮತ್ತಾರ ಸಂಗಡ ಮಾತನಾಡಲೆತ್ನಿಸಿದರೂ, ಅಥವಾ ಘಟ್ಟಿಯಾಗಿ ಕೂಗಿದರೂ ಸ್ತ್ರೀವಧೆಯನ್ನು ಮಾಡುವುದಕ್ಕೆ ಹಿಂಜರಿಯಬೇಡ' ಎಂದು ಹೇಳಿ ಹೊರಟುಹೋದನು.

ರಹಿಮನು ಅಪ್ಪಣೆಯಪ್ರಕಾರವೆಂದು ಹೇಳಿ, ಅಲ್ಲಿ ಪಹರೆ ನಿಂತನು. ಪಠಾನ್ ಸೈನ್ಯದವರು ಮಹಡಿಯಿಂದ ಮಹಡಿಗೆ ಹತ್ತಿ ಹೋಗಿ ಅರಮನೆಯ ಬೇರೆಕಡೆಗೆ ಹೋದರು.

---

## ಹತ್ತೊಂಬತ್ತನೆಯ ಪರಿಚ್ಛೇದ

## ಪ್ರೇಮಿಕಾ ಪ್ರೇಮಿಕ

ವಿಮಲೆಯು ಚತುರನಾದ ಉಸ್ಮಾನ್‌ಖಾನನು ಬೇರೆಕಡೆಗೆ ಹೊರಟುಹೋದುದನ್ನು ನೋಡಿ, ಮುಂದೆ ತನ್ನ ಕೌಶಲದಿಂದ ಪಹರೇದವನ ಅಧೀನದಿಂದ ತಪ್ಪಿಸಿಕೊಳ್ಳಬಹುದೆಂದು ಧೈರ್ಯಗೊಂಡು ಅದಕ್ಕೆ ತಕ್ಕುಪಾಯವನ್ನು ಹೂಡಿದಳು.

ವಿಮಲೆಯು ಸ್ವಲ್ಪಹೊತ್ತಿನಮೇಲೆ ಕಾವಲಾಗಿ ನಿಂತಿದ್ದ ಪ್ರಹರಿಯ ಸಂಗಡ ಮಾತನಾಡತೊಡಗಿದಳು. ಪ್ರಹರಿಯಾದರೇನು? ಸಾಕ್ಷಾತ್ತು ಯಮದೂತನಾದರೇನು? ಸುಂದರಿಯಾದ ರಮಣಿಯೊಡನೆ ಆರುತಾನೇ ಮಾತನಾಡದಿರುವರು? ವಿಮಲೆಯು ಪ್ರಹರಿಯೊಡನೆ ಸಾಮಾನ್ಯ ಸಂಗತಿಯನ್ನು ಕುರಿತು ಮಾತನಾಡುವುದಕ್ಕೆ ತೊಡಗಿ ಕ್ರಮವಾಗಿ, ಪ್ರಹರಿಯ ಹೆಸರು, ಊರು, ಗೃಹಕೃತ್ಯ, ಸುಖದುಃಖ ಮುಂತಾದುವುಗಳನ್ನು ವಿಚಾರಿಸುವುದಕ್ಕೆ ಪ್ರಾರಂಭಿಸಿದಳು. ಪ್ರಹರಿಯು ತನ್ನ ಸ್ವಂತ ವಿಚಾರದಲ್ಲಿ ವಿಮಲೆಗೆ ಹುಟ್ಟಿದ ಉತ್ಸಾಹವನ್ನು ಕಂಡು ಅತ್ಯಂತ ಪ್ರೀತನಾದನು. ವಿಮಲೆಯು ಸಂದರ್ಭವನ್ನು ಕಂಡುಕೊಂಡು ಕ್ರಮವಾಗಿ ತನ್ನ ನಯನ ತೂಣೀರದಿಂದ ಕಟಾಕ್ಷವೆಂಬ ತೀಕ್ಷ್ಣವಾದ ಬಾಣಗಳನ್ನು ತೆಗೆದು ಬೀರುತಿದ್ದಳು. ಒತ್ತಟ್ಟು ವಿಮಲೆಯ ಅಮೃತಮಯವಾದ ರಸಾಲಾಪ; ಬೇರೊತ್ತಟ್ಟು ತದಧಿಕವಾದ ಅವಳ ನೇತ್ರಗಳ ಅವ್ಯರ್ಥ ಕಟಾಕ್ಷ ಸಂಧಾನಗಳು,

ಇವುಗಳಿಂದ ಪ್ರಹರಿಯ ಹೃದಯವು ಕರಗುತ ಬಂದಿತು. ವಿಮಲೆಯು ಪ್ರಹರಿಯ ಮುಖಭಾವದಿಂದವನು ಗುಂಡಿಗೆ ಬೀಳುವ ಸಮಯವು ಸಮೀಪಿಸಿತೆಂದು ತಿಳಿದು ಪ್ರಹರಿಯನ್ನು ಕುರಿತು, 'ಷೇಕ್‌ಜಿಗಳೆ! ನನಗೇನೋ ಭಯವಾಗುತದೆ, ನೀವೆನ್ನ ಬಳಿ ಬಂದು ಕುಳಿತುಕೊಳ್ಳಲಾರಿರಾ?' ಎಂದು ಹೇಳಿದಳು.

ಪ್ರಹರಿಯು ಅದನ್ನು ಕೇಳಿ ಚರಿತಾರ್ಥನಾದೆನೆಂದು ತಿಳಿದು, ವಿಮಲೆಯ ಪಕ್ಕದಲ್ಲಿ ಕುಳಿತುಕೊಂಡನು. ಕ್ಷಣಕಾಲ ಬೇರೆಮಾತುಗಳಾಡಿ, ಅನಂತರ ವಿಮಲೆಯು ತಾನು ಪ್ರಯೋಗಿಸಿದ ಔಷಧವು ಚೆನ್ನಾಗಿ ಹಿಡಿಯಿತೆಂದು ತಿಳಿದಳು ಪ್ರಹರಿಯು ವಿಮಲೆಯ ಪಕ್ಕದಲ್ಲಿ ಕುಳಿತ ಮೊದಲ್ಗೊಂಡು, ಅವಳ ಮುಖವನ್ನು ಕುತೂಹಲದೃಷ್ಟಿಯಿಂದ ಬಾರಿಬಾರಿಗೂ ನೋಡುತಿದ್ದನು. ಆಗ ವಿಮಲೆಯು 'ಷೇಕ್‌ಜಿ! ನಿಮಗೆ ಮುಖವು ಬಹಳ ಬೆವರಿರುವಂತಿದೆ, ನನ್ನ ಕೈಗಳನ್ನು ಬಿಚ್ಚಿದರೆ ನಿಮಗೆ ಫಾಳಿಯನ್ನು ಬೀಸುವೆನು, ಬಳಿಕ ಪುನಃ ಕೈಯನ್ನು ಕಟ್ಟಿಡಬಹುದು ಎಂದು ಹೇಳಿದಳು.

ಷೇಕ್‌ಜಿಯ ಮುಖದಮೇಲೆ ಬೆವರಿನೊಂದುಬಿಂದುವಿರಲಿಲ್ಲವಾದರೂ ವಿಮಲೆಯು ಸಂದೇಹವಿಲ್ಲದೆ ಬೆವರ್ನೀರನ್ನವನ ಮುಖದಲ್ಲಿ ನೋಡಿರಬೇಕು; ಹಾಗಲ್ಲದಿದ್ದರೆ, ಅವಳೇಕೆ ಸುಳ್ಳನ್ನು ನುಡಿಯುವಳು? ಮತ್ತು ಅಂತಹವಳ ಕೈಯಿಂದ ಫಾಳಿಯನ್ನು ಹಾಕಿಸಿಕೊಳ್ಳುವುದು ಸ್ವಲ್ಪಭಾಗ್ಯವೆ? ಸಾಮಾನ್ಯವಾಗಿ ಎಲ್ಲರಿಗೂ ಲಭಿಸತಕ್ಕುದಲ್ಲವೆಂದು ಭಾವಿಸಿ ಪ್ರಹರಿಯು ಅವಳ ಬಂಧನವನ್ನು ಬಿಚ್ಚಿದನು.

ವಿಮಲೆಯು ಅದೇ ಅಂಗವಸ್ತ್ರದಿಂದಲೇ ಪ್ರಹರಿಗೆ ಸ್ವಲ್ಪಹೊತ್ತು ಫಾಳಿಯನ್ನು ಹಾಕಿ, ಬಳಿಕ ಆಕ್ಷೇಪಣೆಯಿಲ್ಲದೆ ಸ್ವಚ್ಛಂದವಾಗಿ ಅದನ್ನು ಹೊದ್ದುಕೊಂಡಳು. ಪುನಃ ಕೈಗಳನ್ನು ಕಟ್ಟಬೇಕೆಂಬ ಮಾತು ಪ್ರಹರಿಯ ಬಾಯಿಂದ ಹೊರಡಲಿಲ್ಲ. ಅದಕ್ಕೊಂದು ವಿಶೇಷಕಾರಣವುಂಟಾಯಿತು. ಅಂಗವಸ್ತ್ರಕ್ಕೆ ಬಂಧನರಜ್ಜುತ್ವದ ದಶೆಯು ಹೋಗಿ, ವಿಮಲೆಯ ಅಂಗವನ್ನು ಬೆಳಗುವ ದಶೆಯು ಪ್ರಾಪ್ತವಾದಾಗ ಅವಳ ಲಾವಣ್ಯವು ಮತ್ತಷ್ಟು ಹೆಚ್ಚಾಗಿ ಪ್ರಕಾಶವಾಯಿತು. ಆವ ನಿಜಲಾವಣ್ಯವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತ ವಿಮಲೆಯ ಮುಖವು ಮಂದಹಾಸಯುಕ್ತವಾಗುತಿದ್ದಿತೋ ಆ ಲಾವಣ್ಯವನ್ನೀಗ ನೋಡುತಿದ್ದ ಪ್ರಹರಿಯು ನಿಸ್ತಬ್ಧನಾಗಿದ್ದುಬಿಟ್ಟನು.

ವಿಮಲೆ—ಷೇಕ್‌ಜಿ! ನಿಮ್ಮ ಪತ್ನಿಯು ನಿಮ್ಮನ್ನು ಪ್ರೀತಿಸುವುದಿಲ್ಲವೆ?

ಷೇಕ್‌ಜಿ—(ಸ್ವಲ್ಪ ವಿಸ್ಮಿತನಾಗಿ) ಹಾಗೆ ವಿಚಾರಿಸಲು ಕಾರಣವೇನು?

ವಿಮಲೆ—ಪ್ರೀತಿಸುತಿದ್ದರೆ ಅವಳೀ ವಸಂತಕಾಲದಲ್ಲಿ* ನಿಮ್ಮಂತಹ ಸ್ವಾಮಿಯನ್ನಗಲಿರುವಳೆ?

---

* ಆಗ ವಸಂತಕಾಲವಾಗಿರಲಿಲ್ಲ, ಪ್ರಚಂಡ ಗ್ರೀಷ್ಮಕಾಲವು ಮುಗಿಯುತ್ತಾ ವರ್ಷಾಕಾಲಕ್ಕೆ ಸಮೀಪಿಸುತಿದ್ದಿತು.

ಷೇಕ್‌ಜಿಯು ನಿಟ್ಟುಸಿರನ್ನು ಬಿಟ್ಟನು.

ವಿಮಲೆಯು ತೂಣೀರದಿಂದ ಬಾಣಗಳನ್ನು ಅನರ್ಗಳವಾಗಿ ತೆಗೆದುಬಿಡ ಲಾರಂಭಿಸಿ:—

'ಷೇಕ್‌ಜಿ! ಹೇಳುವುದಕ್ಕೆ ನಾಚಿಕೆಯಾಗುತ್ತದೆ; ಆದರೆ ನಿಮ್ಮಂತಹ ಸ್ವಾಮಿಯೆನಗಿದ್ದರೆ ನಿಮ್ಮನ್ನೆಂದೂ ಯುದ್ಧಕ್ಕೆ ಹೋಗಗೊಡಿಸುತಿರಲಿಲ್ಲ.

ಪ್ರಹರಿಯು ಪುನಃ ನಿಟ್ಟುಸಿರನ್ನು ಬಿಟ್ಟನು. ವಿಮಲೆಯು ಪುನಃ ಹೇಳ ತೊಡಗಿದಳು, 'ಆಹಾ! ನೀವೆನಗೆ ಸ್ವಾಮಿಯಾಗಿದ್ದಿದ್ದರೆ' ಎಂದು ಹೇಳಿ, ಅದ ರೊಂದಿಗೆ ಅವಳೂ ನಿಟ್ಟುಸಿರನ್ನು ಬಿಟ್ಟು, ತೀಕ್ಷ್ಣವಾದ ಕುಟಿಲ ಕಟಾಕ್ಷದಿಂದ ದೃಷ್ಟಿಸಿ ನೋಡಿದಳು. ಪ್ರಹರಿಯು ತಲೆತಿರುಗಿದವನಾಗಿ, ಹೆಚ್ಚು ತಾಳಲಾರದೆ, ಕ್ರಮವಾಗಿ ವಿಮಲೆಯ ಸಮೀಪಕ್ಕೆ ಸರಿದು ಬಂದನು.

ವಿಮಲೆಯೂ ಸ್ವಲ್ಪ ಸರಿದು, ತನ್ನ ಕೋಮಲವಾದ ಕರಪಲ್ಲವವನ್ನು ಪ್ರಹರಿಯ ಕೈಮೇಲಿಟ್ಟಳು. ಆಗಲಾ ಪ್ರಹರಿಯು ಮಂಕಾಗಿ ಜಡನಾದನು.

ವಿಮಲೆಯು ಹೇಳತೊಡಗಿದಳು:—'ಹೇಳುವುದಕ್ಕೆ ನಾಚಿಗೆಪಡುತ್ತೇನೆ; ಒಂದುವೇಳೆ ನೀವು ರಣಜಯವನ್ನು ಹೊಂದಿ ಹೊರಟುಹೋಗುವಿರಾದರೆ, ನನ್ನನ್ನು ಜ್ಞಾಪಕದಲ್ಲಿಟ್ಟಿರುವಿರೋ?'

ಪ್ರಹರಿ—ನಿನ್ನನ್ನೆಂದಿಗೆ ಮರೆಯುವೆನು?

ವಿಮಲೆ—ನನ್ನ ಮನಸ್ಸನ್ನು ಬಿಚ್ಚಿ ಹೇಳಲೆ?

ಪ್ರಹರಿ—ಚೆನ್ನಾಗಿ ಹೇಳು—ಬೇಗನೆ ಹೇಳು.

ವಿಮಲೆ—ಇಲ್ಲ—ಹೇಳಲಾರೆ—ಕೇಳಿದರೆ, ನೀವೇನೆಂದು ತಿಳಿಯುವಿರೊ?

ಪ್ರಹರಿ—ಇಲ್ಲ—ಮಾತನಾಡು—ದಯವಿಟ್ಟು ಹೇಳು—ನನ್ನನ್ನು ನಿನ್ನ ಭೃತ್ಯನೆಂದು ತಿಳಿ.

ವಿಮಲೆ—ನಾನು ನಿನ್ನೊಂದಿಗೆ ಹೊರಟುಹೋಗಿ, ಪಾಪಿಯಾದೀ ನನ್ನ ಸ್ವಾಮಿಯ ಕುಲಕ್ಕೆ ಕಳಂಕವನುಂಟುಮಾಡಬೇಕೆಂಬಾಶೆ—ಎಂದು ಹೇಳಿ ಅದ ರೊಂದಿಗೆ ಕಟಾಕ್ಷ ಬಾಣ ಪರಂಪರೆಯನ್ನು ಬೀರಿದಳು.

ಪ್ರಹರಿಯು ಆಹ್ಲಾದದಿಂದ ಮತ್ತನಾಗಿ ಕುಣಿಯಲಾರಂಭಿಸಿದನು.

ಪ್ರಹರಿ—ನೀನು ನಿಜವಾಗಿ ಬರುವಿಯಾ?

(ದಿಗ್ಗಜಮಹಾಶಯ! ನೀನೂ ಬಂದು ನೋಡು, ಭೂಮಂಡಲದಲ್ಲಿ ನಿನ್ನಂತಹ ಪಂಡಿತರು ಎಷ್ಟೊಂದು ಮಂದಿ ಜನರಿದ್ದಾರೆ!)

ವಿಮಲೆ—ಕರಕೊಂಡು ಹೋದರೆ ಬರುವೆನು.

ಪ್ರಹರಿ—ನಿನ್ನನ್ನೆ ಕರಕೊಂಡು ಹೋಗದಿರುವುದು? ಎಂದೆಂದೂ ನಿನ್ನ ದಾಸಾನುದಾಸನಾಗಿರುವೆನು.

ವಿಮಲೆಯು, 'ನಿನ್ನ ಪ್ರೇಮಕ್ಕೆ ಪ್ರತಿಯಾಗಿ ಮತ್ತಾವುದನ್ನೂ ಕೊಡಲಾರೆನು, ನನ್ನಲ್ಲಿರುವುದಿದೊಂದನ್ನು ಗ್ರಹಣಮಾಡು' ಎಂದು ಹೇಳಿ, ತನ್ನ ಕಂಠದಲ್ಲಿದ್ದ ಸ್ವರ್ಣಹಾರವನ್ನು ತೆಗೆದು ಪ್ರಹರಿಯ ಕಂಠಕ್ಕೆ ಹಾಕಿದಳು. ಪ್ರಹರಿಯು ಸಶರೀರದಿಂದ ಸ್ವರ್ಗವನ್ನು ಮುಟ್ಟಿದನು. ವಿಮಲೆಯು, 'ಹಾರವನ್ನು ಕುತ್ತಿಗೆಗೆ ಹಾಕಿದರೆ ಅದಕ್ಕೆ ಮದುವೆಯೆಂದು ಶಾಸ್ತ್ರವು ಹೇಳಿದೆ' ಎಂದಳು.

ಪ್ರಹರಿ—(ನಕ್ಕು) ಹಾಗಾದರೆ, ನಿನಗೂ ನನಗೂ ಲಗ್ನವಾಯಿತಲ್ಲವೆ?

'ಆಗದೆ ಉಂಟೆ?' ಎಂದು ಹೇಳಿ ವಿಮಲೆಯು ಸ್ವಲ್ಪಹೊತ್ತು ಚಿಂತಾಮಗ್ನಳಾಗಿದ್ದಂತೆ ಸುಮ್ಮನಿದ್ದಳು.

ಪ್ರಹರಿಯು, 'ಯೋಚಿಸುವುದೇನು?' ಎಂದು ಕೇಳಿದನು.

ವಿಮಲೆ—ಏನನ್ನು ಯೋಚಿಸಲಿ? ಮುಖ್ಯ ನನ್ನ ಅದೃಷ್ಟದಲ್ಲಿ ಸುಖಪಡುವುದು ಬರೆದಿಲ್ಲ. ನೀವು ದುರ್ಗವನ್ನು ಜಯಿಸಿ ಹೋಗುವಹಾಗೆ ಕಾಣುವುದಿಲ್ಲ.

ಪ್ರಹರಿ—(ದರ್ಪದಿಂದ) ಅದರಲ್ಲಿ ಸಂದೇಹವೇಕೆ? ಸ್ವಲ್ಪವೂ ಅನುಮಾನವಿಲ್ಲ; ಇಷ್ಟೊಂದುಹೊತ್ತಿಗಾಗಲೇ ಜಯಪ್ರದವಾಗಿರಬೇಕು.

ವಿಮಲೆ—ಓಹೋ! ಅದೆಂದಿಗೂ ಆಗದು—ಅದಕ್ಕೊಂದೇಕಾಂತವುಂಟು.

ಪ್ರಹರಿ—ಅದಾವದು?

ವಿಮಲೆ—ನೀವು ದುರ್ಗವನ್ನು ಹೇಗಾದರೂ ಮಾಡಿ ಜಯಿಸಲಿಷ್ಟವುಳ್ಳವರಾಗಿದ್ದರೆ, ನಿನಗಾ ಏಕಾಂತವನ್ನು ಹೇಳುವೆನು, ಕೇಳು.

ಪ್ರಹರಿಯು, 'ಆಗಲಿ' ಎಂದು ಹೇಳಿ, ಕೇಳುವುದಕ್ಕಣಿಯಾದನು. ವಿಮಲೆಯು ಹೇಳುವುದಕ್ಕೆ ಹಿಂಜರಿದಳು. ಪ್ರಹರಿಯು ಆತುರದಿಂದ, 'ದಯವಿಟ್ಟು ಹೇಳು' ಎಂದನು.

ವಿಮಲೆ—ನಿಮ್ಮಗಳಿಗೆ ಗೊತ್ತಿರದು; ದುರ್ಗದ ಪಕ್ಕದಲ್ಲಿ ಜಗತ್ಸಿಂಹನು ಹತ್ತುಸಾವಿರ ಸೇನೆಯನ್ನು ರಹಸ್ಯವಾಗಿಟ್ಟುಕೊಂಡಿದ್ದಾನೆ; ನೀವಿಂದು ರಹಸ್ಯವಾಗಿ ಬರುವಿರಿಯೆಂದು ತಿಳಿದವನಿಲ್ಲಿಗೆ ಮೊದಲೇ ಬಂದಿದ್ದಾನೆ; ಈಗೇನನ್ನೂ ಮಾಡದೆ ಸುಮ್ಮನಿದ್ದು, ನೀವು ದುರ್ಗವನ್ನು ಜಯಿಸಿ ನಿಶ್ಚಿಂತರಾಗಿರುವಾಗ ಬಂದು ಮುತ್ತಿಗೆ ಹಾಕುವನು.

ಪ್ರಹರಿಯು ಕೇಳಿ ಸ್ವಲ್ಪ ಹೊತ್ತು ಮಾತಿಲ್ಲದವನಾಗಿದ್ದು ಬಳಿಕ ಎಚ್ಚರಗೊಂಡವನಂತೆ 'ಅದು ಹೇಗೆ?' ಎಂದನು.

ವಿಮಲೆ—ಅದು ದುರ್ಗದಲ್ಲಿರುವವರೆಲ್ಲರಿಗೂ ತಿಳಿದಿದೆ! ನಾನೂ ಬಲ್ಲೆನು.

ಪ್ರಹರಿಯು ಆಹ್ಲಾದ ಪರಿಪೂರ್ಣನಾಗಿ, 'ನನ್ನ ಅದೃಷ್ಟವೆ! ಕೇಳು! ನಿನ್ನಿಂದಿಂದೊಂದು ದೊಡ್ಡ ಪದವಿಯೆನಗೆ ಬಂದಂತಾಯಿತು; ಈಗಲೇ ಹೋಗಿ ಸೇನಾಪತಿಗೆ ತಿಳಿಸಿಬರುತ್ತೇನೆ; ಇಂತಹ ದೊಡ್ಡ ಸಮಾಚಾರವನ್ನು ತಿಳಿಸಿದರೆ ಮಹತ್ತಾದ ಪದವಿಯುಂಟಾಗುವುದು; ಪುನಃ ಜಾಗ್ರತೆ ಹಿಂದಿರುಗಿ ಬರುವೆನು—

ನೀನಿಲ್ಲಿರು' ಎಂದನು. ಅವನ ಮನಸ್ಸಿನಲ್ಲಿ ವಿಮಲೆಯ ವಿಚಾರವಾಗಿ ಎಳ್ಳಷ್ಟಾದರೂ ಅನುಮಾನವಿರಲಿಲ್ಲ.

ವಿಮಲೆ—ನೀನು ಬರುವಿಯಷ್ಟೆ?

ಪ್ರಹರಿ—ಬಾರದೆ ಮತ್ತೆಲ್ಲಿಗೆ ಹೋಗುವೆನು, ಒಂದು ಕ್ಷಣದಲ್ಲಿ ಬಂದುಬಿಟ್ಟೆ.

ವಿಮಲೆ—ನನ್ನನ್ನು ಮರೆಯಬೇಡ.

ಪ್ರಹರಿ—ಇಲ್ಲ—ಇಲ್ಲ—ಎಂದಿಗೂ ಮರೆಯುವುದಿಲ್ಲ.

ವಿಮಲೆ—ನನ್ನಾಣೆ, ಮರೆಯಕೂಡದು.

ಪ್ರಹರಿಯು, 'ಹೆದರಲೇಕೆ?' ಎಂದು ಹೇಳಿ, ಊರ್ಧ್ವಶ್ವಾಸವನ್ನು ಬಿಡುತ್ತ ಓಡಿಹೋದನು. ಪ್ರಹರಿಯು ಕಣ್ಣುಮರೆಯಾಗುತ್ತಲೆ, ಪ್ರೇಮಿಕಾ ಪ್ರೇಮಿಕಿಯಾದಾ ವಿಮಲೆಯು ಪಲಾಯನವಾಗಿ ಹೋದಳು.

ಉಸ್ಮಾನ್‌ಖಾನನು ವಿಮಲೆಯ ಕಟಾಕ್ಷಕ್ಕೆ ಹೆದರಬೇಕೆಂದು ಹೇಳಿದ್ದ ಮಾತು ಸಾರ್ಥಕವಾಯಿತು.

---

## ಇಪ್ಪತ್ತನೆಯ ಪರಿಚ್ಛೇದ

## ಕೊಟಡಿಯಿಂದ ಕೊಟಡಿಗೆ

ವಿಮಲೆಯು ಸೆರೆಯಿಂದ ಬಿಡುಗಡೆಯಾಗಿ, ವರ್ತಮಾನವನ್ನು ವೀರೇಂದ್ರಸಿಂಹನಿಗೆ ಮೊದಲಾಗಿ ತಿಳಿಸುವುದು ಕರ್ತವ್ಯವೆಂದೂರ್ಧ್ವಶ್ವಾಸವನ್ನುಬಿಡುತ್ತಾ ವೀರೇಂದ್ರಸಿಂಹನ ಶಯನಾಗಾರವನ್ನು ಕುರಿತು ವೇಗವಾಗಿ ಓಡುತ್ತಾ ಅರ್ಧ ಹಾದಿ ಹೋಗುವುದರೊಳಗೆ 'ಅಲ್ಲಲ್ಲಾ-ಹೋ!' ಎಂಬ ತುಮುಲ ಧ್ವನಿಯು ಕಿವಿಗೆ ಬಿದ್ದಿತು. ಕೇಳಿ ಪಠಾನ ಸೇನೆಯ ಜಯಧ್ವನಿಯೆಂದು ತಿಳಿದು ಹೆಚ್ಚು ವ್ಯಾಕುಲವುಳ್ಳವಳಾದಳು. ಕೋಲಾಹಲಧ್ವನಿಯಾದರೋ ಅತಿಶಯ ವೃದ್ಧಿಯನ್ನು ಹೊಂದುತಿದ್ದಿತು. ಆದರೂ ವಿಮಲೆಯು ಅರಮನೆಯ ಪರಿವಾರದವರು ಎಚ್ಚರವಾಗಿರುವರೆಂಬ ನಂಬಿಕೆಯಿಂದ ವೀರೇಂದ್ರಸಿಂಹನ ಶಯನಾಗಾರಕ್ಕೆ ಸಮೀಪ ಹೋಗಿ ನೋಡಲಲ್ಲಿ ಹೆಚ್ಚು ಗದ್ದಲವಾಗುತಿದ್ದಿತು. ಅವಳಲ್ಲಿಗೆ ಹೋಗುವುದರೊಳಗೆ ಪಠಾನ ಸೈನಿಕರು ಬಾಗಿಲನ್ನೊಡೆದು ಕೊಟಡಿಯೊಳಗೆ ಪ್ರವೇಶಿಸಿದ್ದರು. ವಿಮಲೆಯು ಬಾಗಿಲಿಗೆ ಮರೆಯಾಗಿ ನಿಂತು ನೋಡಿದಳು. ವೀರೇಂದ್ರಸಿಂಹನು ನಡುವಿಗೆ ನಡುಕಟ್ಟನ್ನು ಬಿಗಿದುಕಟ್ಟಿ ರಕ್ತಮಯವಾದ ಶರೀರವುಳ್ಳವನಾಗಿ ಕೈಯಲ್ಲೊರೆಯುಗಿದ ಕತ್ತಿಯನ್ನು ಹಿಡಿದು ಉನ್ಮತ್ತನಂತೆ ವೇಗವಾಗಿ ತಿರುಗಿಸುತಿದ್ದನು. ಆದರೆ ಅವನ ಯುದ್ಧೋದ್ಯಮವು ವಿಫಲವಾಯಿತು. ಬಲಿಷ್ಠನಾದೊಬ್ಬ ಪಠಾನನು ಉದ್ದವಾದೊಂದು ಕತ್ತಿಯಿಂದ ಹೊಡಿಯಲದು ವೀರೇಂದ್ರಸಿಂಹನ

ಕತ್ತಿಗೆ ತಗಲಿ, ಕತ್ತಿಯು ಹಸ್ತಚ್ಯುತವಾಗಿ ದೂರ ಹೋಗಿ ಬಿದ್ದಿತು. ನಿರಾಯುಧನಾಗುತಲೇ ಶತ್ರುಗಳವನನ್ನು ಬಂದಿಯಾಗಿ ಹಿಡಿದರು.

ವಿಮಲೆಯು ಅದನ್ನು ಕಂಡು ಹತಾಶಳಾಗಿ ಅಲ್ಲಿಂದ ಹೊರಟು, ತಿಲೋತ್ತಮೆಯನ್ನು ರಕ್ಷಿಸಲಿನ್ನೂ ಸಮಯವಿರುವುದೆಂದೂಹಿಸಿ ಅವಳ ಕೊಟಡಿಗೆ ಓಡಿಬರುತಿದ್ದಾಗ ಮುಂದುವರಿದು ಹೋಗುವುದಸಾಧ್ಯವಾಯಿತು. ಪಠಾನಸೇನೆಯವರೆಲ್ಲೆಲ್ಲಿಯೂ ಮುತ್ತಿಕೊಂಡಿದ್ದರು. ಪಠಾನರು ದುರ್ಗವನ್ನು ಜಯಿಸಿದರೆಂಬುದಕ್ಕೆ ಸಂದೇಹವು ತೋರಲಿಲ್ಲ.

ವಿಮಲೆಯು ತಿಲೋತ್ತಮೆಯ ಕೊಟಡಿಗೆ ಹೋಗುವುದರೊಳಗೆ ದಾರಿಯಲ್ಲಿ ಪಠಾನರ ಕೈಗೆ ಸಿಗುವುದು ನಿಜವೆಂದು ತಿಳಿದು ಹಿಂದಿರುಗಿದಳು. ಜಗತ್ಸಿಂಹನಿಗೂ ತಿಲೋತ್ತಮೆಗೂ ವಿಪತ್ಕರವಾದೀ ಸಮಾಚಾರವನ್ನು ತಿಳಿಸುವುದು ಹೇಗೆಂದು ಚಿಂತಿಸುತ್ತ ಕಾತರೆಯಾಗಿ ಅಲ್ಲೊಂದು ಕೊಟಡಿಯಲ್ಲಿ ನಿಂತಿದ್ದಳು. ಕೆಲವು ಮಂದಿ ಸೈನಿಕರು ವಿಮಲೆಯಿದ್ದ ಕೊಟಡಿಯನ್ನು ಕೊಳ್ಳೆಹೊಡಿಯುವುದಕ್ಕೆ ಬರುತ್ತಿದ್ದುದನ್ನು ಕಂಡು, ಎದೆಗುಂದಿ ಕೊಟಡಿಯಲ್ಲೊಂದು ಪೆಟ್ಟಿಗೆಯ ಹಿಂದೆ ಅವಿತುಕೊಂಡಳು. ಸೈನಿಕರು ಬಂದು ಕೊಟಡಿಯಲ್ಲಿದ್ದುದನ್ನೆಲ್ಲ ಲೂಟಿಮಾಡತೊಡಗಿದರು. ವಿಮಲೆಗೆ ಉಪಾಯವಾವದೂ ತೋರಲಿಲ್ಲ. ಲೂಟಿಮಾಡುವುದೆಲ್ಲಾ ತೀರಿದ ಬಳಿಕ ಪೆಟ್ಟಿಗೆಯನ್ನು ತೆಗೆದು ನೋಡಲು ಕೆಲವರು ಬರುವವರಾಗಿದ್ದ ಕಾರಣ, ಅಲ್ಲಿದ್ದರೆ ಕಂಡುಹಿಡಿಯುವರೆಂದು ಧೈರ್ಯದಿಂದ ಸ್ವಲ್ಪಹೊತ್ತು ಅಲ್ಲಿಯೇ ನಿಶ್ಶಬ್ದವಾಗಿ ಪೆಟ್ಟಿಗೆಯ ಪಕ್ಕದಿಂದಿಣಿಕಿ ನೋಡುತ್ತಿದ್ದವಳು ವಿಪತ್ಕಾಲಕ್ಕೆ ತಕ್ಕಂತೆ ಒದುಹುವ ಅತುಲ ಸಾಹಸದಿಂದ ಸೈನಿಕರೆಲ್ಲರೂ ಲೂಟಿಮಾಡುವುದರಲ್ಲಿ ವ್ಯಾಪೃತರಾಗಿದ್ದಾಗ ಮೆಲ್ಲನೆ ಪೆಟ್ಟಿಗೆಯ ಪಾರ್ಶ್ವದಿಂದ ಹೊರಟು ಓಡಿಹೋದಳು. ಸೈನಿಕರು ಲೂಟಿಯಲ್ಲಾಸಕ್ತರಾಗಿದ್ದ ಕಾರಣ, ಅವಳು ಹೊರಗೆ ಹೋದುದನ್ನು ನೋಡಲಿಲ್ಲ. ವಿಮಲೆಯು ಕೊಟಡಿಯ ಬಾಗಿಲಬಿಟ್ಟು ಸ್ವಲ್ಪದೂರ ಹೋಗುವುದರೊಳು ಸೈನಿಕನೊಬ್ಬನು ಬಂದು ಹಿಂದಿನಿಂದವಳ ಕೈಯನ್ನು ಹಿಡಿದುಕೊಂಡನು. ವಿಮಲೆಯು ಹಿಂದಿರುಗಿ ನೋಡಿದಳು. ರಹಿಂಷೇಕನಾಗಿದ್ದನು.

ರಹಿಂಷೇಕನು, 'ಇದೇನು ಪರಾರಿ! ಪವ್ವನೆ ಪಲಾಯನವೆಲ್ಲಿಗೆ?' ಎಂದನು.

ಎರಡನೆಯ ತಡವೆ ಪುನಃ ರಹಿಮುಷೇಕನ ಕೈಗೆ ಸಿಗುತಲೇ ವಿಮಲೆಯ ಮುಖವು ವಿಶುಷ್ಕವಾಗಿದ್ದರೂ, ಅವಳದನ್ನು ತೋರದೆ ಕ್ಷಣದಲ್ಲವಳ ಪ್ರತಿಭೆಯ ಪ್ರಭಾವದಿಂದ ಹರ್ಷಚಿಹ್ನೆಗಳನ್ನು ತೋರುತ್ತ, ಅವನಿಂದಲೇ ಸ್ವಕಾರ್ಯನಿರ್ವಾಹವಾಗಬೇಕೆಂದು ಯೋಚಿಸಿ, ಅವನ ಪ್ರಶ್ನೆಗೆ ಪ್ರತ್ಯುತ್ತರವಾಗಿ, 'ಸುಮ್ಮನಿರು–ಗದ್ದಲಮಾಡಬೇಡ–ಹೊರಗೆ ಬಾ' ಎಂದು ಹೇಳಿ, ಅವನ ಕೈಯನ್ನು ಹಿಡಿದುಕೊಂಡು ಹೊರಗೆ ಕರೆತಂದಳು. ರಹಿಮನು ಆಕ್ಷೇಪವಿಲ್ಲದೆ ಮರಧ

ಬೊಂಬೆಯಂತೆ ಅವಳ ಹಿಂದೆ ಬಂದನು. ವಿಮಲೆಯು ಅವನನ್ನಾರೂ ಇಲ್ಲದೆಡೆ ಕೊಂಡೊಯ್ದು, 'ಛೀ! ಛೀ! ನೀನು ಹೀಗೆಮಾಡುವುದೆ? ನನ್ನನ್ನಲ್ಲಿ ಬಿಟ್ಟಿಲ್ಲಿಗೆ ಹೊರಟುಹೋದೆ? ನಿನ್ನನ್ನು ಹುಡುಕಿದುದೊಂದೆಡೆಯಲ್ಲ. ಎಲ್ಲಿ ನೋಡಿದರೂ ಸಿಗಲಿಲ್ಲ'ವೆಂದು ಹೇಳಿ, ಷೇಕ್‌ಜಿಯನ್ನು ವಿಶಾಲಕಟಾಕ್ಷದಿಂದ ನೋಡಿದಮಾತ್ರದಿಂದವನ ಕೋಪವು ದೂರವಾಯಿತು. ಅವನು ವಿಮಲೆಯನ್ನು ಕುರಿತು, 'ಸೇನಾಪತಿಗೆ ಜಗತ್ಸಿಂಹನ ಸಮಾಚಾರವನ್ನು ತಿಳಿಸಲವನನ್ನು ಹುಡುಕುತಿದ್ದೆನು; ಅವನಿರುವ ಸ್ಥಳವು ಗೊತ್ತಾಗದೆ ನಿನ್ನನ್ನು ಹುಡುಕಿಕೊಂಡು ಬಂದೆನು; ನೀನು ಮಹಡಿಯಮೇಲಿರಲಿಲ್ಲವಾಗಿ, ಅಲ್ಲಲ್ಲಿ ಹುಡುಕುತಿದ್ದೆನು' ಎಂದನು.

ವಿಮಲೆಯು, 'ನೀನು ಬರಲಿಲ್ಲವಾಗಿ, ನನ್ನನ್ನು ಮರೆತಿರಬೇಕೆಂದು ತಿಳಿದು ನಿನ್ನನ್ನು ಹುಡುಕುತ ಬಂದೆನು; ನಾವಕಾಶದಿಂದಿನ್ನು ಪ್ರಯೋಜನವಿಲ್ಲ; ದುರ್ಗವೇನೋ ನಿಮ್ಮ ಸ್ವಾಧೀನವಾಯಿತು; ನಾವಿನ್ನು ಪಲಾಯನದ ಪ್ರಯತ್ನ ಜರುಗಿಸುವುದೊಳ್ಳೆಯದು' ಎಂದು ಹೇಳಿದಳು. ಷೇಕ್‌ಜಿಯು, 'ಈಗ ರಾತ್ರಿ; ನಾಳೆ ಪ್ರಾತಃಕಾಲ ಹೋಗೋಣ; ಸೇನಾಪತಿಗೆ ತಿಳಿಸದೆ ಬರುವುದು ಸರಿಯಲ್ಲ; ನಾಳೆ ಬೆಳಿಗ್ಗೆ ಸೇನಾಪತಿಯ ಅಪ್ಪಣೆಯನ್ನು ಪಡೆದು ಹೊರಡೋಣ' ಎಂದನು.

ವಿಮಲೆಯು, ಹಾಗಾದರೆ, ನಡಿ, ಬೇಗನೆ ನನ್ನಾಭರಣಾದಿ ಪದಾರ್ಥಗಳನ್ನೆಲ್ಲ ಭದ್ರಪಡಿಸಿಕೊಳ್ಳದಿದ್ದರೆ, ಬೇರೆ ಸಿಪಾಯಿಗಳು ಹೋಗಿ ಲೂಟಿಮಾಡಿಕೊಂಡು ಹೋಗುವರು' ಎಂದು ಹೇಳಿದಳು.

ಸೈನಿಕನು, 'ನಡಿ' ಎಂದನು.

ರಹಿಮನ ಜತೆಯಲ್ಲಿದ್ದರೆ ಬೇರೆ ಸೈನಿಕರ ಬಾಧೆಯಿಲ್ಲದೆ ತಪ್ಪಿಸಿಕೊಳ್ಳಬಹುದೆಂಬ ತಾತ್ಪರ್ಯದಿಂದ ವಿಮಲೆಯು ಅವನನ್ನು ಸಂಗಡ ಕರೆದುಕೊಂಡುಹೋದಳು. ಅವಳೂಹೆಯು ಕೂಡಲೇ ಸಾದೃಶ್ಯಕ್ಕೆ ಬಂದಿತು. ಸ್ವಲ್ಪದೂರ ಹೋಗುವುದರೊಳಗೆ ಧನಹರಣಾಸಕ್ತರಾದ ಬೇರೆ ಸಿಪಾಯಿಗಳೆದುರಿಗೆ ಬಂದವರು ವಿಮಲೆಯನ್ನು ನೋಡಿ ಕೋಲಾಹಲಧ್ವನಿಯನ್ನು ಮಾಡಿ, ರಹಿಮನಿಗೆ ಒಳ್ಳೆಯ ಷಿಕಾರಿ ಸಿಗಿತೆಂದು ಕೂಗಿದರು. ಅದನ್ನು ಕೇಳಿ ರಹಿಮನು, 'ನಿಮ್ಮ ಕೆಲಸವನ್ನು ಮಾಡಿಕೊಳ್ಳಿರಿ, ಇತ್ತ ಕಣ್ಣುಹಾಕಬೇಡಿರಿ' ಎಂದನು. ಅವನ ಭಾವವನ್ನರಿತವರಾಗಿ ಸೈನಿಕರು ಸುಮ್ಮನಾದರು. ಅವರಲ್ಲೊಬ್ಬನು ಮಾತ್ರ, 'ರಹಿಂ! ನಿನ್ನದೃಷ್ಟವೊಳ್ಳೆಯದು, ಆದರೆ ನವಾಬರು ಕಂಡು ಅವಳನ್ನು ನಿನ್ನ ಕೈತಪ್ಪಿಸದಿರಬೇಕು' ಎಂದನು.

ರಹಿಮನೂ ವಿಮಲೆಯೂ ಮುಂದುವರಿದು ಹೋದರು. ವಿಮಲೆಯು ರಹಿಮನನ್ನು ತನ್ನ ಶಯನಾಗಾರದ ಕೆಳಗಣ ಚಿಕ್ಕಮನೆಗೆ ಕೊಂಡೊಯ್ದು, 'ಇದೆನ್ನ ಮತ್ತೊಂದು ಚಿಕ್ಕಮನೆ, ಇಲ್ಲಿರುವುದನ್ನೆಲ್ಲಾ ಸಂಗ್ರಹಮಾಡಿಕೊ, ಮೇಲೆ ಮಲಗುವ ಕೊಟಡಿಗೆ ಹೋಗಿ, ನನ್ನಾಭರಣಾದಿಗಳನ್ನು ತೆಗೆದುಕೊಂಡು ಬರುವೆನು' ಎಂದು ಹೇಳಿ ಬೀಗದಕೈಗಳೊಂದು ಜೊಂಪನ್ನವನಿಗೆ ಕೊಟ್ಟಳು.

ರಹಿಮುಸು ಕೊಟಡಿಯಲ್ಲಿದ್ದ ಹಣ ಮುಂತಾದುದನೆಲ್ಲಾ ಕಂಡು ಹಿಗ್ಗಿ ಪೆಟ್ಟಿಗೆಗಳ ಬೀಗವನ್ನು ತೆಗೆಯಲಾರಂಭಿಸಿದನು. ವಿಮಲೆಯುಮೇಲವನಿಗೆ ತಿಲಾರ್ಧವೂ ಅನುಮಾನವಿರಲಿಲ್ಲ. ವಿಮಲೆಯು ಕೊಟಡಿಯಿಂದ ಹೊರಗೆ ಬಂದು, ಬಾಗಿಲೆಳೆದುಕೊಂಡು ಹೊರಗಣ ಚಿಲಕವನ್ನು ಹಾಕಿ ಬೀಗವನ್ನು ಹಾಕಿದಳು. ರಹಿಮುಸು ಕೊಟಡಿಯಲ್ಲಿ ಬಂದಿಯಾಗಿರುತ್ತಿದ್ದನು.

ವಿಮಲೆಯು ಊರ್ಧ್ವಶ್ವಾಸವನ್ನು ಬಿಡುತ್ತ ಮಹಡಿಯಮೇಲಣ ಮತ್ತೊಂದು ಕೊಟಡಿಗೆ ಹೋದಳು. ವಿಮಲೆ ತಿಲೋತ್ತಮೆಯರ ಕೊಟಡಿಗಳು ಅರಮನೆಯಲ್ಲೊತ್ತಟ್ಟು ಕಡೆಯ ಭಾಗದಲ್ಲಿದ್ದುದರಿಂದ ಅತ್ಯಾಚಾರಿಗಳಾಗಿದ್ದಾ ಸೈನಿಕರು ಅಲ್ಲಿಗಿನ್ನೂ ಬಂದಿರಲಿಲ್ಲ. ತಿಲೋತ್ತಮೆಯೂ ಜಗತ್ಸಿಂಹನೂ ಸೈನಿಕರ ಕೋಲಾಹಲದ ಗದ್ದಲವನ್ನು ಕೇಳಿದ್ದರೋ ಇಲ್ಲವೋ ಸಂದೇಹವಾಗಿದ್ದಿತು. ವಿಮಲೆಯು ತಿಲೋತ್ತಮೆಯ ಕೊಟಡಿಯೊಳಗೊಮ್ಮೆಂದೊಮ್ಮೆ ಹೋಗದೆ ಒಳಗಿದ್ದವರ ತತ್ಕಾಲದ ಭಾವವನ್ನು ತಿಳಿಯಲು ಕುತೂಹಲದಿಂದ ಬಾಗಿಲಲ್ಲಿ ನಿಂತು ಕದದ ಬೀಗದಕಿವಿಯಿಂದಿಣಿಕಿ ನೋಡಿದಳು. ಪ್ರಕೃತಿಯ ಸ್ವಭಾವವು ಎಂತಹದುದೊ! ಅಂತಹ ಸಮಯದಲ್ಲೂ ವಿಮಲೆಯು ಕುತೂಹಲವುಳ್ಳವಳಾಗಿದ್ದಳು!! ಕೊಟಡಿಯೊಳಗಿದ್ದವರ ಭಾವವನ್ನು ನೋಡಿ ವಿಸ್ಮಿತೆಯಾದಳು. ತಿಲೋತ್ತಮೆಯು ಪರ್ಯಂಕದಮೇಲೆ ಕುಳಿತಿದ್ದಳು. ಜಗತ್ಸಿಂಹನದರ ಬಳಿ ನೀರವವಾಗಿ* ನಿಂತು ತಿಲೋತ್ತಮೆಯ ಮುಖಮಂಡಲವನೀಕ್ಷಿಸುತ ತನ್ನ ಹಸ್ತದಿಂದವಳ ಕರಪಲ್ಲವವನ್ನು ಹಿಡಿದುಕೊಂಡಿದ್ದನು. ತಿಲೋತ್ತಮೆಯ ಕಣ್ಗಳಿಂದ ಬಾಷ್ಪವಾರಿಯು ಸುರಿಯುತಿದ್ದಿತು. ಜಗತ್ಸಿಂಹನು ತನ್ನ ಕಣ್ಣುಗಳನ್ನೊರಿಸಿಕೊಳ್ಳುತ್ತಿದ್ದನು.

ವಿಮಲೆಯು ಅವರಾ ಅಶ್ರುವಿಸರ್ಜನೆಯು ವಿರಹಾತ್ಪೂರ್ವ ಉಂಟಾಗುವ ರೋದನಜನ್ಯವಾದುದೆಂದು ತಿಳಿದಳು. ಅದೆಂತಹದುದೇ ಆಗಲಿ; ಅವರಿಬ್ಬರಾದರೋ, ಸನ್ನಿಹಿತವಾಗಿದ್ದ ವಿಪತ್ತನ್ನು ಸ್ವಲ್ಪವೂ ತಿಳಿದು ಯೋಚಿಸಿರಲಿಲ್ಲ. ಮನಸಿಜ ಮನ್ಮಥನ ಮಹಿಮೆಯೆಂತಹದುದೊ! ಅದಕ್ಕಿಹದಲ್ಲೆಣೆಯಿಲ್ಲವು. ಅಂತಹ ಕೋಲಾಹಲದಲ್ಲಿಯೂ ಮನ್ಮಥನ ಶರಜಾಲದಲ್ಲಿ ಬಿದ್ದು ಬದ್ಧವಾಗಿದ್ದಾ ಯುಗ್ಮಕ್ಕೆ ಶ್ರೋತ್ರೇಂದ್ರಿಯವಿದ್ದರೂ ಇಲ್ಲದಹಾಗಾಗಿದ್ದಿತು!!!

---

* ನೀರವವಾಗಿ = ಶಬ್ದವಿಲ್ಲದೆ.

# ಇಪ್ಪತ್ತೊಂದನೆಯ ಪರಿಚ್ಛೇದ

## ಖಡ್ಗಾಖಡ್ಗಿ

ವಿಮಲೆಯು ಕೊಟಡಿಯೊಳಗೆ ಪ್ರವೇಶಿಸಿ ಜಗತ್ಸಿಂಹನಿಗೆ ಸನ್ನಿಹಿತವಾಗಿದ್ದ ವಿಪತ್ತನ್ನು ಕುರಿತು ಕಷ್ಟದಿಂದ ತಿಳುಹಿದಳು. ಆದರೂ ಜಗತ್ಸಿಂಹ ನದನ್ನು ನಂಬನು. ಕೋಲಾಹಲಧ್ವನಿಯನ್ನು ತಾನಾಗಿಯೇ ಕೇಳಿದ ಬಳಿಕವನ ಅನುಮಾನ ಪರಿಚ್ಛೇದವಾಯಿತು. ವಿಮಲೆಯು ಕುಮಾರನನ್ನು ಕುರಿತು, 'ಪಠಾನರು ಮಾಡುವ ಜಯಘೋಷವು ಕೇಳುತಿದೆ; ಬೇಗನಾವದಾದರೂ ಒಂದುಪಾಯವನ್ನು ಮಾಡಿ ರಕ್ಷಿಸು; ನಾವಿಲ್ಲಿದ್ದರೆ ನಿಸ್ಸಂಶಯವಾಗಿ ವಿನಷ್ಟ ರಾಗುವೆವು, ಶತ್ರುಗಳೊಂದುಕ್ಷಣದಲ್ಲಿಲ್ಲಿಗೆ ಬಂದುಬಿಡುವರು' ಎಂದಳ .

ಜಗತ್ಸಿಂಹನು ಕೇಳಿ ಕ್ಷಣಕಾಲ ಚಿಂತಾಮಗ್ನನಾಗಿದ್ದು, ಬಳಿಕ, 'ವೀರೇಂದ್ರಸಿಂಹನೇನನ್ನು ಮಾಡುತಿರುವನು?' ಎಂದು ಕೇಳಿದನು.

ವಿಮಲೆಯು, 'ಶತ್ರುವಿನ ಹಸ್ತಗತನಾದನು' ಎಂದಳು.

ಅದನ್ನು ಕೇಳಿ ತಿಲೋತ್ತಮೆಯು ಕಂಠದಿಂದ ಅಸ್ಫುಟ ಚೀತ್ಕಾರಧ್ವನಿಯು ಹುಟ್ಟಿ ಮಂಚದಮೇಲವಳು ಮೂರ್ಛಿತೆಯಾಗಿ ಬಿದ್ದಳು.

ಜಗತ್ಸಿಂಹನದನ್ನು ಕಂಡು ವಿಶುಷ್ಕವದನನಾಗಿ, ವಿಮಲೆಯನ್ನು ಕುರಿತು, 'ತಿಲೋತ್ತಮೆಯನ್ನು ನೋಡಿಕೊ' ಎಂದನು.

ತಕ್ಷಣದಲ್ಲಿ ವಿಮಲೆಯೊಂದು ಅತ್ತರದಾನನ್ನು ತಂದಾ ಗಂಧವಾರಿಯನ್ನವಳ ಮುಖಕ್ಕೆ ತಳದು, ಕಾತರೆಯಾಗಿ, ಬೀಸಣಿಗೆಯಿಂದವಳಿಗೆ ಗಾಳಿಯನ್ನು ಬೀಸ ಲಾರಂಭಿಸಿದಳು.

ಶತ್ರುಗಳ ಕೋಲಾಹಲಧ್ವನಿಯು ಸಮಿಾಪಿಸುತ ಬಂದುದನ್ನು ಕೇಳಿ ವಿಮ ಲೆಯು ರೋದನವಮಾಡುತ್ತ, 'ಅದೋ, ಬಂದರು. ರಾಜಕುಮಾರ! ರಕ್ಷಣೆ ಯಾಗುವುದು ಹೇಗೆ?' ಎಂದಳು.

ಜಗತ್ಸಿಂಹನು ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತ, 'ಭಗವಂತ! ನಿನ್ನಿಚ್ಛೆಯು ಹೀಗಿದ್ದಿತೆ! ಇಂತಹ ವಿಪತ್ಕಾಲದಲ್ಲಿ ನಾನೀ ಕೊಟಡಿಯಲ್ಲಿ ಹೆಂಗಸ ರೊಡನೆ ಪಿಂಜರಬದ್ಧನಾಗಿರಬೇಕಾಗಿ ಬಂದಿತೆ!' ಎಂದು ಪರಿತಪಿಸಿದನು. ಅದನ್ನು ಕೇಳಿ ದರ್ಪಿತಹೃದಯವುಳ್ಳಾ ವಿಮಲೆಯ ಮನಸ್ಸು ಅಳುಕಿ, ಕಣ್ಣೀರು ತುಂಬಿ ದವಳಾಗಿ, 'ರಾಜಪುತ್ರ! ಅಷ್ಟೊಂದು ಪರಿತಪಿಸಲೇಕೆ? ಹೆಂಗಸಾದೆನ್ನಿಂದ ಮತ್ತೇನಾಗದಿದ್ದರೂ, ತಿಲೋತ್ತಮೆಯ ಪಕ್ಕದಲ್ಲಿದ್ದು ಪ್ರಾಣವನ್ನಾದರೂ ಬಿಡ ಬಲ್ಲೆನು' ಎಂದಳು. ಆ ಮಾತು ರಾಜಕುಮಾರನ ಅಂತಃಕರಣಕ್ಕೆ ತಟ್ಟಿ, ಅವನು, 'ತಿಲೋತ್ತಮೆಯನ್ನಾಸ್ಥಿತಿಯಲ್ಲಿ ಬಿಟ್ಟು ಹೋಗೆನು' ಎಂದು ಹೇಳಿ, ಅವಳ ಪಕ್ಕದಲ್ಲಿದ್ದು ತಾನೂ ಪ್ರಾಣವನ್ನು ಬಿಡುವೆನೆಂದು ಕಾತರನಾಗಿ ಹೇಳಿದನು.

ಶತ್ರುಗಳ ಭೀಮನಾದವು ಪ್ರತಿಕ್ಷಣವೂ ಸಮೀಪಿಸುತಬಂದು ಆಯುಧಗಳ ಝುಂಝನಾ ರವವೂ ಕೇಳುತಬಂದುದನ್ನು ಕೇಳಿ ವಿಮಲೆಯು, 'ತಿಲೋತ್ತಮೆ! ನೀನೀ ಸಮಯದಲ್ಲಿ ಅಚೇತನಳಾಗಬಹುದೆ! ನಿನ್ನನ್ನು ಹೇಗೆ ರಕ್ಷಿಸಲಿ!' ಎಂದು ಹೇಳುತ ರೋದನಮಾಡತೊಡಗಿದಳು.

ತಿಲೋತ್ತಮೆಯ ಕಣ್ಣುಗಳುನ್ಮೀಲನವಾದುವು. ಅದನ್ನು ಕಂಡು ವಿಮಲೆಯು, 'ರಾಜಕುಮಾರ! ತಿಲೋತ್ತಮೆಗೆ ಚೇತನವುಂಟಾಯಿತು, ಅವಳನ್ನುಳಿಸಲಿನ್ನೂ ಕಾಲವಿದೆ' ಎಂದಳು. ರಾಜಕುಮಾರನು, 'ನಾವೀಕೊಟಡಿಯಲ್ಲಿದ್ದರೆ, ರಕ್ಷಣೆಯಾಗುವುದಸಂಭವ; ಇಲ್ಲಿಂದ ಹೊರಗಾದರೆ ಹೇಗಾದರೂ ಮಾಡಿ ನಿಮ್ಮನ್ನು ಅರಮನೆಯಿಂದ ಹೊರಗೆ ಕರೆದುಕೊಂಡು ಹೋಗಲೆತ್ನಿಸುವೆನು; ಆದರೆ ತಿಲೋತ್ತಮೆಗೆ ಗತಿಶಕ್ತಿಯೇ ಹೋಗಿರುವಕಾರಣ ಅದು ಸಾಧ್ಯವೆ?' ಎಂದು ಹೇಳುತ್ತಿದ್ದಹಾಗೆ, ಕಿವಿಗೊಟ್ಟು ಕೇಳಿ, 'ವಿಮಲೆ! ಅವರಾಗಲೇ ಮೆಟ್ಟಿಲುಗಳನ್ನು ಹತ್ತಿ ಬರುವಂತಿದೆ; ಮೊದಲೆನ್ನ ಪ್ರಾಣವನ್ನು ಕೊಡುವೆನು; ಹಾಗೆ ಪ್ರಾಣವನ್ನು ಕೊಟ್ಟರೂ ನಿಮ್ಮನ್ನುಳಿಸಿದಂತಾಗುವುದಿಲ್ಲವೆಂದು ಪರಿತಪಿಸುತ್ತೇನೆ' ಎಂದನು.

ವಿಮಲೆಯು, ಕಣ್ಣುಮುಚ್ಚಿ ತೆಗೆಯುವುದರೊಳಗೆ, ತಿಲೋತ್ತಮೆಯನ್ನೆತ್ತಿಕೊಂಡು, 'ಹಾಗಾದರೆ ಹೊರಡಿ, ತಿಲೋತ್ತಮೆಯನ್ನೆತ್ತಿಕೊಂಡು ಬರುವೆನು' ಎಂದಳು.

ವಿಮಲೆಯೂ ಜಗತ್ಸಿಂಹನೂ ಮೂರು ಹೆಜ್ಜೆಯಲ್ಲಿ ಕೊಟಡಿಯ ಬಾಗಿಲ ಹತ್ತಿರ ಬಂದು ಬಾಗಿಲನ್ನು ತೆರೆಯುವದರೊಳಗೆ, ನಾಲ್ಕುಮಂದಿ ಪಠಾನಸೈನಿಕರು ಬಾಗಿಲಬಳಿ ಬಂದಿದ್ದರು. ಜಗತ್ಸಿಂಹನು ವಿಮಲೆಯನ್ನು ಕುರಿತು, 'ಮುಂದು ವರಿದು ಬರಬೇಡ, ನನ್ನ ಹಿಂದಿರು' ಎಂದನು. ಪಠಾನರು ತಮ್ಮೆದುರಿಗೆ ಬರುತಿದ್ದ ಜಗತ್ಸಿಂಹನನ್ನು ಕಂಡು, 'ಅಲ್ಲಾಹೊ!' ಎಂದು ಪಿಶಾಚಿಗಳಂತೆ ಬೊಬ್ಬಿಟ್ಟು ಕೂಗಿ ಕಟಿಯಲ್ಲಿ ಕಟ್ಟಿದ್ದ ಆಯುಧಗಳ ಝುಂಝನ ಶಬ್ದವನ್ನು ಮಾಡತೊಡಗಿದರು. ಅವರನ್ನು ಕಂಡೊಡನೆ ಜಗತ್ಸಿಂಹನ ಕತ್ತಿಯೊಬ್ಬ ಪಠಾನನ ಹೃದಯದಲ್ಲಿ ಆಮೂಲವಾಗಿ ಸಮಾರೋಪಿತವಾಯಿತು. ಪಠಾನನು ಭಯಂಕರವಾಗಿ ಬೇಳಿಡುತ ಅಸುವಳಿದನು. ಮತ್ತೊಬ್ಬ ಪಠಾನನ ಭಲ್ಲೆಯವು ಜಗತ್ಸಿಂಹನ ಕುತ್ತಿಗೆಗೆ ತಾಕಿತು. ಅಷ್ಟರೊಳಗೆ ಕುಮಾರನದನ್ನು ಎಡಗೈಯಿಂದ ಹಿಡಿದು, ಅದರಿಂದದನ್ನು ಹಿಡಿದಿದ್ದವನನ್ನಿರಿದು ನೆಲಕ್ಕೆ ಕೆಡಹಿದನು. ಉಳಿದಿಬ್ಬರು ಪಠಾನರೊಮ್ಮೆಗೆ ಜಗತ್ಸಿಂಹನ ತಲೆಗೆ ಗುರಿಯಿಟ್ಟು ಕತ್ತಿಯಿಂದ ಹೊಡೆದರು. ಜಗತ್ಸಿಂಹನು ಉಸುರಿಗುಕ್ಕಲವಿಲ್ಲದೆ ಬಲಗೈಲಿದ್ದ ಕತ್ತಿಯಿಂದ ಹೊಡೆಯಲಾ ಆಘಾತದಿಂದೊಬ್ಬನ ಕೈಯಲ್ಲಿದ್ದ ಕತ್ತಿಯು ಛೇದನವಾದವನ ಬಾಹುಗಳೊಡನೆ ದೂರಹೋಗಿ ಬಿದ್ದಿತು. ಆದರೆ ಮತ್ತೊಬ್ಬನ ಹೊಡತವನ್ನು ನಿವಾರಣೆ ಮಾಡಲಾಗದೆ ಪೆಟ್ಟು ಜಗತ್ಸಿಂಹನ ತಲೆಗೆ ಬೀಳುವುದು ತಪ್ಪಿ, ಭುಜದಮೇಲೆ

ಬಿದ್ದು ದಾರುಣವಾದ ಗಾಯವನ್ನುಂಟುಮಾಡಿತು. ರಾಜಕುಮಾರನಾ ಪೆಟ್ಟಿನಿಂದ, ವ್ಯಾಧನ ಅಂಬು ತಗಲಿದ ವ್ಯಾಘ್ರದೋಪಾದಿಯಲ್ಲಿ, ದ್ವಿಗುಣಿತ ಕೋಪಾನಲದಿಂದ ಪ್ರಜ್ವಲಿತನಾಗಿ, ಪಠಾಣನು ಮತ್ತೊಂದುತಡವೆ ಹೊಡೆಯಲು ಕತ್ತಿಯನ್ನೆತ್ತುವುದರೊಳಗೆ ರಕ್ತಮಯವಾದ ತನ್ನ ಕತ್ತಿಯನ್ನೆರಡು ಮುಷ್ಟಿಗಳಿಂದ ದೃಢವಾಗಿ ಹಿಡಿದು ಮುಂದಕ್ಕೆ ಹಾರಿ ಕತ್ತಿಯನ್ನೆತ್ತಿದ್ದಾ ಪಠಾಣನ ತಲೆಗೆ ಹೊಡೆದನು. ಉಷ್ಣೀಷ ಸಹಿತವಾಗಿ ಅವನ ತಲೆಯೆರಡು ತುಂಡಾಗಿ ಕತ್ತರಿಸಿ ಕೆಳಗೆ ಬಿದ್ದಿತು. ಅಷ್ಟರೊಳಗೆ ಮೊದಲು ಕೈಕತ್ತರಿಸಲ್ಪಟ್ಟು ಬಿದ್ದಿದ್ದ ಪಠಾಣನು ತನ್ನ ಕಟಿಯಲ್ಲಿದ್ದ ಚೂರಿಯನ್ನೆಡಗೈಯಿಂದ ತೆಗೆದು ರಾಜಪುತ್ರನಿಗೆ ಗುರಿಯಿಟ್ಟು ಹಿಡಿದಿದ್ದನು. ರಾಜಕುಮಾರನು ಮತ್ತೊಬ್ಬ ಪಠಾಣನನ್ನು ಹೊಡೆಯಲು ಹಾರಿದಾಗಾ ಚೂರಿಯು ವಿಶಾಲವಾದವನ ಬಾಹುವಿನ ಮಧ್ಯದಲ್ಲಿ ಚುಚ್ಚಿ ಗಭೀರವಾದ ಗಾಯವನ್ನುಂಟುಮಾಡಿತು. ರಾಜಪುತ್ರನಾ ಗಾಯವನ್ನು ಸೂಜೀ ವೇಧೆಯೆಂದದಕ್ಕೆ ಲಕ್ಷ್ಯಕೊಡದೆ ಪಠಾಣನ ಕಟಿದೇಶಕ್ಕೆ ಬಲವಾಗಿ ಕಾಲಿಂದೊದೆಯಲು ಕೊಂತವು ಕೊಡಿತಾಕಿ ಕೊಡುಪೆಸೆದಂತೆ*, ಯವನನು ದೂರಹೋಗಿ ಬಿದ್ದನು, ರಾಜಪುತ್ರನಾ ಕೂಡಲೆ ಹೋಗಿ ಅವನ ಶಿರಚ್ಛೇದನಮಾಡಲುದ್ಯಮಿಸಿದನು. ಆ ಸಮಯಕ್ಕೆ ಸರಿಯಾಗಿ 'ಅಲ್ಲಲ್ಲಾಹೊ!' ಎಂದು ಬೊಬ್ಬಿಡುತ ಅಗಣಿತ ಪಠಾಣ ಸೈನಿಕರು ಪ್ರವಾಹದಂತೋಡಿಬಂದರು. ರಾಜಪುತ್ರನದನ್ನು ಕಂಡು ಮುಂದೆ ಯುದ್ಧಮಾಡುವುದು ಮರಣಕ್ಕೆ ಕಾರಣವೆಂದು ತಿಳಿದುಕೊಂಡನು.

ರಾಜಪುತ್ರನ ಅಂಗಾಂಗವೆಲ್ಲವೂ ರಕ್ತಪ್ಲಾವಿತವಾಗಿ ಧಾರೆಧಾರೆಯಾಗಿ ರಕ್ತವು ಸುರಿಯುತಿದ್ದುದರಿಂದವನ ದೇಹವು ಕ್ರಮವಾಗಿ ಅಲ್ಲರಿಯಿಂದಸವಳಿದು† ಕ್ಷೀಣವಾಗುತ ಬರುತಿದ್ದಿತು.

ತಿಲೋತ್ತಮೆಯು ಅಚೇತನಳಾಗಿನ್ನೂ ವಿಮಲೆಯ ಕೊಂಕಳಲ್ಲಿದ್ದಳು. ವಿಮಲೆಯು ತಿಲೋತ್ತಮೆಯನ್ನೆತ್ತಿಕೊಂಡಿದ್ದಳು. ಅವಳ ಬಟ್ಟೆಯೂ ರಾಜಪುತ್ರನ ರಕ್ತದಿಂದ ತೊಯ್ದಿದ್ದಿತು.

ಕೊಟಡಿಯಲ್ಲಿ ಪಠಾಣರ ಸೈನಿಕರು ತುಂಬಿದ್ದರು. ರಾಜಪುತ್ರನು ಕತ್ತಿಯ ಮೇಲೆ ಭಾರವನ್ನಿಟ್ಟೂರಿಕೊಂಡು ಅಸುರುಸಿರನ್ನು‡ ಬಿಡುತ್ತಾ ನಿಂತಿದ್ದನು. ಆಗ ಪಠಾಣನೊಬ್ಬನು ರಾಜಕುಮಾರನನ್ನು ಕುರಿತು, 'ಎಲೇ ಗುಲಾಮ! ಕೈಲಿರುವ ಕತ್ತಿಯನ್ನು ಬಿಸುಡು, ನಿನ್ನನ್ನು ಪ್ರಾಣದಿಂದ ಬಿಡುವೆನು' ಎಂದನು. ಅದನ್ನು ಕೇಳುತ್ತಲೇ, ಜಗತ್ಸಿಂಹನು ನಿರ್ವಾಣೋನ್ಮುಖ ಅಗ್ನಿಯಲ್ಲಿ ಘೃತಾಹುತಿಯಿಂದೇಳುವ ಅಗ್ನಿಶಿಖಿಯೋಪಾದಿಯಲ್ಲಿ ಮುಂದಕ್ಕೆ ಹಾರಿಬಂದು ದಾಂಭಿಕನಾದಾ

* ಕೊಂತವು ಕೊಡಿತಾಕಿ ಕೊಡುಪೆಸೆದಂತೆ= ಕೊರಡು ಗುರಿತಾಗಿ ಕೊಡುಪಿ ಎಸೆದಂತೆ.

† ಅಲ್ಲರಿಯಿಂದಸವಳಿದು= ದಣಿಕೆಯಿಂದ ಬಲವು ಕಡಿಮೆಯಾಗಿ.

‡ ಅಸುರುಸಿರನ್ನು= ಕಷ್ಟದಿಂದ ನಿಟ್ಟುಸಿರನ್ನು.

ಪಠಾಣನ ಮಸ್ತಕವ ಛೇದಿಸಿ ಕಾಲಡಿಹಾಕಿ ತುಳಿದನು. ಅನಂತರ ಕತ್ತಿಯನ್ನು ತಿರುಗಿಸುತ್ತ, 'ಯವನ ನರಾಧಮಗಳಿರಾ! ರಾಜಪೂತರು ಅಸುವಳಿಯುವ* ಬಗೆಯನ್ನು ನೋಡಿರಿ' ಎಂದು ಘಟ್ಟಿಯಾಗಿ ಕೂಗಿ ಹೇಳಿದನು. ಅವನ ಕತ್ತಿಯು ಮಿಂಚಿನಂತೆ ಥಳಥಳಿಸುತ ವಿರಾಮವಿಲ್ಲದೆ ತಿರುಗುತಿದ್ದಿತು. ರಾಜಕುಮಾರನು, ತಾನೊಬ್ಬನೇ ನಿಂತು ಅಷ್ಟೊಂದು ಮಂದಿ ಶತ್ರುಗಳನ್ನೆದುರಿಸಿ ಯುದ್ಧಮಾಡುವು ದಸಾಧ್ಯವೆಂದು ತಿಳಿದು ಸಾಧ್ಯವಾದಷ್ಟು ಮಂದಿ ಶತ್ರುಗಳನ್ನು ನಿಪಾತಮಾಡಿ ಪ್ರಾಣತ್ಯಾಗಮಾಡಬೇಕೆಂಬಭಿಪ್ರಾಯವುಳ್ಳವನಾಗಿ ಶತ್ರು ತರಂಗದ ಮಧ್ಯದಲ್ಲಿ ಬಿದ್ದು ಕತ್ತಿಯನ್ನು ವಜ್ರಮುಷ್ಟಿಯಿಂದ ಹಿಡಿದು ತಿರುಗಿಸಲಾರಂಭಿಸಿದನು. ಆತ್ಮರಕ್ಷಣೆಯ ವಿಚಾರದಲ್ಲಿ ಸ್ವಲ್ಪವೂ ದೃಷ್ಟಿಯಿಡದೆ, ಹಿಂದುಮುಂದು ನೋಡದೆ, ನಿಂದವ್ವಳಿಸುತ್ತಾ ಬಂದ ಬಂದವರನ್ನೆಡಬಿಡದೆ ಅಪ್ಪಳಿಸಿ ಕೆಡಹೊಡಿಯಲಾರಂಭಿಸಿದನು. ಒಬ್ಬನು ಬಿದ್ದನು; ಇಬ್ಬರು ಬಿದ್ದರು; ಮೂವರು ಬಿದ್ದರು, ಪ್ರತಿಪೆಟ್ಟಿಗೊಬ್ಬೊಬ್ಬ ಪಠಾಣನು ನೆಲಕ್ಕೆ ಬಿದ್ದನು. ಅನೇಕರಿಗೆ ಅಂಗಭೇದವಾಯಿತು. ಅವ್ಯರ್ಥವಾದಾ ಪೆಟ್ಟುಗಳನ್ನು ತಾಳಲಾರದೆ ಪಠಾಣರನೇಕರು ರಾಜಪುತ್ರನನ್ನು ನಾಲ್ಕೂದಿಕ್ಕುಗಳಿಂದ ಮುತ್ತಿಕೊಂಡು, ಮಳೆಕರೆದಂತೆ, ಅಸ್ತ್ರಗಳನೆಸೆದು, ಘಾಯಗಳನ್ನು ಮಾಡಿದರು. ಅಷ್ಟೊಂದು ಖಡ್ಗಾಖಡ್ಗಿ ಯುದ್ಧವಾದ ಬಳಿಕ ರಾಜಪುತ್ರನಿಗೆ ಹೆಚ್ಚು ಕೈನಡೆಯುವುದು ನಿಂತಿತು. ಹೆಚ್ಚು ಪೆಟ್ಟುಗಳು ತಾಕಿ ಮೈಯಿಂದ ರಕ್ತಪ್ರವಾಹವು ಹೊರಟು, ಅಲಕಡೆಯಾಗಿ† ಬಾಹುಬಲವು ಕ್ಷೀಣಿಸುತ ಬಂದಿತು; ತಲೆಯು ತಿರುಗಲಾರಂಭಿಸಿತು; ಕಣ್ಣು ಮುಚ್ಚಿಕೊಂಡು ಬಂದಿತು; ಶ್ರವಣೇಂದ್ರಿಯಗಳ ಶಕ್ತಿಯು ಕಡಿಮೆಯಾಗಿ ಅಷ್ಟೊಂದು ಕೋಲಾಹಲವೆಲ್ಲಿಯೋ ದೂರದಿಂದ ಕೇಳುವಂತಾಯಿತು. 'ರಾಜಪುತ್ರನನ್ನು ಪ್ರಾಣದಿಂದ ವಧೆಮಾಡಕೂಡದು, ಹುಲಿಯನ್ನಸುವೆರಸಿ‡ ಹಿಡಿದು ಬೋನಿನೊಳಗೆ ಕೂಡಬೇಕು' ಎಂದು ನುಡಿದ ನುಡಿಯು ರಾಜಕುಮಾರನಿಗೆ ಕೇಳಿಬಂದಿತು. ಮತ್ತಾವದೂ ಕೇಳಿಸಲಿಲ್ಲ; ಉಸ್ಮಾನ್‌ಖಾನನು ಹಾಗೆಂದು ಸೈನಿಕರಿಗೆ ಅಪ್ಪಣೆಮಾಡಿದ್ದನು.

ರಾಜಪುತ್ರನಿಗೆ ಬಾಹುಬಲವು ಶಿಥಿಲವಾಗಿ ನೆಲದಮೇಲೆ ಲಂಬಾಯಮಾನವಾಗಿ ಬಿದ್ದನು. ಬಲವಿಹೀನವಾದವನ ಮುಷ್ಟಿಯಿಂದ ಕತ್ತಿಯು ಕೈಬಿಟ್ಟು ಝಂಝಣಶಬ್ದ ಸಹಕಾರವಾಗಿ ಅವನ ಪಾರ್ಶ್ವ ಬಿದ್ದಿತು. ಅವನೂ ಸ್ವಹಸ್ತದಿಂದ ಹೊಡೆದಿದ್ದೊಬ್ಬ ಪಠಾಣನ ಮೃತದೇಹದಮೇಲೆ ಮೂರ್ಛಾವಸ್ಥೆಯಲ್ಲಿ ಅಚೇತನನಾಗಿ ಬಿದ್ದನು. ಕೂಡಲೇ ಅನೇಕ ಪಠಾಣರು ಅವನುಷ್ಣೀಷದಲ್ಲಿದ್ದ ರತ್ನಗಳನ್ನಪಹರಿಸಲೋಡಿಬಂದರು. ಅದನ್ನು ಕಂಡು ಉಸ್ಮಾನ್‌ಖಾನನು ಗಂಭೀರ ಸ್ವರದಿಂದ, 'ರಾಜಪುತ್ರನನ್ನಾರೂ ಮುಟ್ಟಕೂಡದು' ಎಂದು ಆಜ್ಞೆಯನ್ನು ಮಾಡಿ

* ಅಸುವಳಿಯುವ = ಪ್ರಾಣವನ್ನು ಬಿಡುವ, ಸಾಯುವ. † ಅಲಕಡೆಯಾಗಿ = ಅಂಗಾಯಾಸವಾಗಿ.
‡ ಅಸುವೆರಸಿ = ಪ್ರಾಣದಿಂದ.

ದನು. ಎಲ್ಲರೂ ಹಿಮ್ಮೆಟ್ಟಿದರು. ಅನಂತರ ಉಸ್ಮಾನ್‌ಖಾನನೂ ಮತ್ತೊಬ್ಬ ಸೈನಿಕನೂ ರಾಜಕುಮಾರನನ್ನೆತ್ತಿಕೊಂಡೊಯ್ದು ಮಂಚದಮೇಲೆ ಮಲಗಿಸಿದರು. ಜಗತ್ಸಿಂಹನು ನಾಲ್ಕುಘಂಟೆಗಳಿಗೆ ಮುಂಚೆ, ತಿಲೋತ್ತಮೆಯನ್ನು ಯಥಾವಿಧಿಯಾಗಿ ವಿವಾಹಮಾಡಿಕೊಂಡೊಂದು ದಿನವಾದರೂ ಅವಳನ್ನೊಡಗೂಡಿ ಆವ ಪರ್ಯಂಕದಲ್ಲಿ ಶಯನಮಾಡಬೇಕೆಂದು ಕ್ಷಣಮಾತ್ರ ಆಶೆಯುಳ್ಳವನಾಗಿದ್ದನೋ, ಅಂತಹ ಪರ್ಯಂಕವು ಸ್ವಲ್ಪಹೊತ್ತಿನಲ್ಲವನಿಗೆ ಮೃತ್ಯುಶಯ್ಯೆಯಾಗಿ ಪರಿಣಮಿಸಿತು!

ಉಸ್ಮಾನ್‌ಖಾನನು ಜಗತ್ಸಿಂಹನನ್ನು ಮಲಗಿಸಿ, ಬಳಿಕ, ಸೈನಿಕರನ್ನು ಕುರಿತು, ಹೆಂಗಸರೆಲ್ಲೆಂದು ವಿಚಾರಿಸಿದನು.

ಉಸ್ಮಾನನು ವಿಮಲೆಯನ್ನೂ ತಿಲೋತ್ತಮೆಯನ್ನೂ ಕಾಣಲಿಲ್ಲ, ವಿಮಲೆಯು, ಗುಂಪುಗುಂಪಾಗಿ ಸೈನಿಕರು ಕೊಟಡಿಗೆ ಬಂದಾಗ, ಮುಂದಾಗುವುದನ್ನು ತಿಳಿದು, ಉಪಾಯಾಂತರ ತೋರದೆ ತಿಲೋತ್ತಮೆಯನ್ನೆತ್ತಿಕೊಂಡುಹೋಗಿ ಮಂಚದಡಿ ಬಚ್ಚಿಟ್ಟುಕೊಂಡಿದ್ದಳು. ಅದನ್ನಾರೂ ಕಂಡಿರಲಿಲ್ಲ; ಉಸ್ಮಾನ್‌ಖಾನನು ಅವಳನ್ನು ಕಾಣದೆ, ಹೆಂಗಸರನ್ನು ಅರಮನೆಯಲ್ಲಿ ಹುಡುಕಿರೆಂದು ಸೈನಿಕರಿಗೆ ಅಪ್ಪಣೆಮಾಡಿ, ಸಹಚಾರಿಣಿಯಾಗಿದ್ದಾ ಹೆಂಗಸು ಅತ್ಯಂತ ಭಯಾನಕ ಬುದ್ಧಿಮತಿಯೆಂದೂ ಅವಳು ತಪ್ಪಿಸಿಕೊಂಡು ಹೋಗಿದ್ದರೆ ತನಗೆ ನಿದ್ರೆಬರಲಾರದೆಂದೂ ಹೇಳಿ, ಸೈನಿಕರು ಎಚ್ಚರದಿಂದಿರಬೇಕೆಂದೂ, ವೀರೇಂದ್ರಸಿಂಹನ ಕನ್ಯೆಯಮೇಲಾವನಾದರೂ ಕೈಯೆತ್ತಿ ಅತ್ಯಾಚಾರವನ್ನು ನಡಿಸಿದರೆ, ಅಂತಹವನಿಗೆ ಪ್ರಾಣದಂಡನೆಯಾಗುವುದೆಂದೂ ಸೈನಿಕರೆಲ್ಲರಿಗೂ ಎಚ್ಚರಿಸಿದನು.

ಸೈನಿಕರಲ್ಲಿ ಕೆಲವರು ಅರಮನೆಯಲ್ಲಿ ಅಲ್ಲಲ್ಲಿ ಹುಡುಕಲಾರಂಭಿಸಿದರು. ಒಬ್ಬಿಬ್ಬರು ಅಲ್ಲಿಯೇ ಕೊಟಡಿಯಲ್ಲಿ ಅನುಸಂಧಾನಮಾಡತೊಡಗಿ, ಒಬ್ಬನು ಬೆಳಕನ್ನು ಹಿಡಿದು ಮಂಚದಡಿ ನೋಡಿ ವಿಮಲೆಯೂ ತಿಲೋತ್ತಮೆಯೂ ಅಲ್ಲಡಗಿದ್ದುದನ್ನು ಕಂಡು, ಹೆಂಗಸರಿಬ್ಬರೂ ಇಲ್ಲಿದ್ದಾರೆಂದು ಕೂಗಿದನು. ಅದನ್ನು ಕೇಳಿ ಉಸ್ಮಾನ್‌ಖಾನನ ಮುಖವು ಹರ್ಷದಿಂದ ಪ್ರಫುಲ್ಲವಾಗಿ, ಹೆಂಗಸರನ್ನು ಕುರಿತು, 'ಭಯಪಡದೆ ಹೊರಗೆ ಬನ್ನಿರಿ' ಎಂದು ಕರೆದನು.

ವಿಮಲೆಯು ಮೊದಲು ಹೊರಗೆ ಬಂದು, ಬಳಿಕ ತಿಲೋತ್ತಮೆಯನ್ನು ಕೈಹಿಡಿದು ಕರೆತಂದು ಕುಳ್ಳಿರಿಸಿದಳು. ತಿಲೋತ್ತಮೆಗೆ ಚೈತನ್ಯವುಂಟಾಗುವ ಸಮಯವಾಗಿದ್ದಕಾರಣ ಕುಳಿತಿರಲು ಸಾಮರ್ಥ್ಯವುಳ್ಳವಳಾಗಿ, 'ನಾವೀಗೆಲ್ಲಿದ್ದೇವೆ?' ಎಂದು ಕುಗ್ಗುಡಿ ನುಡಿಯಿಂದುಸುರಿದಳು. ವಿಮಲೆಯು, 'ಭಯವಿಲ್ಲ, ಅವಕುಂಠನವನ್ನೆಳೆದುಕೊಂಡು ಕುಳಿತಿರು' ಎಂದವಳ ಕಿವಿಯಲ್ಲಿ ಹೇಳಿದಳು.

ಹೆಂಗಸರನ್ನು ಕಂಡುಹಿಡಿದ ಸೈನಿಕನು ಉಸ್ಮಾನಖಾನನಿಗೆ ಸಲಾಮನ್ನು

ಮಾಡಿ, 'ಜನಾಬ್! ಗುಲಾಮನು ಮಂಚದಡಿ ಬೊಗ್ಗಿನೋಡಿ ಹೆಂಗಸರನ್ನು ಕಂಡುಹಿಡಿದಿದ್ದಾನೆ!' ಎಂದು ಹೇಳಿದನು. ಅದಕ್ಕೆ ಉಸ್ಮಾನ್‌ಖಾನನು ಸ್ವಲ್ಪ ನಕ್ಕು, 'ನಿನಗೆ ಇನಾಮಾಗಬೇಕೆ? ನಿನ್ನ ಹೆಸರೇನು?' ಎಂದು ಕೇಳಿದನು.

ಸೈನಿಕನು, "ಗುಲಾಮನ ಹೆಸರು ಕರೀಂಭಕ್ಷ. ಕರೀಂಭಕ್ಷನೆಂದರಾರಿಗೂ ಗೊತ್ತಾಗದು, ಪೂರ್ವದಲ್ಲಿ ಮೊಗಲ ಸೇನೆಯಲ್ಲಿದ್ದೆನಾಗಿ ಜನರೆಲ್ಲರೂ ಹಾಸ್ಯಕ್ಕೆನ್ನನ್ನು 'ಮೊಗಲ ಸೇನಾಪತಿ'ಯೆಂದು ಕರೆಯುವರು" ಎಂದನು.

ಅದನ್ನು ಕೇಳಿ, ವಿಮಲೆಗೆ ಮೈನಡುಗಿ, ಅಭಿರಾಮಸ್ವಾಮಿಯು ಹೇಳಿದ್ದ ಜ್ಯೋತಿಷ ಗಣಿತದ ಫಲವು ಸ್ಮರಣೆಗೆ ಬಂದಿತು.

ಉಸ್ಮಾನ್‌ಖಾನನು ಸೈನಿಕನನ್ನು ಕುರಿತು, 'ಒಳ್ಳೆಯದು, ಜ್ಞಾಪಕವಿದೆ' ಎಂದು ಹೇಳಿದನು.



# ಎರಡನೆಯ ಭಾಗ

## ಮೊದಲನೆಯ ಪರಿಚ್ಛೇದ

### ಆಯುಷೆ

ಜಗತ್ಸಿಂಹನು ಸ್ವಲ್ಪ ಸ್ವಲ್ಪ ಚೈತನ್ಯವುಳ್ಳವನಾಗಿ ಕಣ್ದೆರೆದು ನೋಡಿದಾಗ ತಾನೊಂದು ಸುರಮ್ಯವಾದ ಚಿಕ್ಕಮನೆಯಲ್ಲಿ ಮಂಚದಮೇಲೆ ಮಲಗಿರುವುದಾಗಿ ತಿಳಿದು, ತಾನಾವಾಗಲಾ ಕೊಟಡಿಗೆ ಬಂದಿದ್ದ ನೆನವಿಲ್ಲದವನಾಗಿದ್ದನು. ಕೊಟಡಿಯು ಪ್ರಶಸ್ತವಾಗಿಯೂ ಸುಶೋಭಿತವಾಗಿಯೂ ಇದ್ದಿತು. ನೆಲಕ್ಕೆ ಕನ್ನಡಿಯ ಹಾಗೆ ನಿರ್ಮಲವಾದ ಶ್ವೇತಶಿಲೆಯನ್ನು ಹರಡಿ, ಅದರಮೇಲೆ ನಡೆದಾಡಲು ಮೃದುಳತರವಾದ ಮೊಕಮಲಿನ ಜಮಖಾನೆಯನ್ನು ಹಾಸಿದ್ದಿತು. ಮಧ್ಯದಲ್ಲಿ ವಿಧವಿಧವಾದ ಗುಲಾಬಿ ಮುಂತಾದ ಅತ್ತರುಗಳನ್ನು ತುಂಬಿದ್ದ ಭಂಗಾರ ಬೆಳ್ಳಿ ಗಜದನ್ತಾದಿಗಳಿಂದ ನಿರ್ಮಿತವಾದ ಮಹಾರ್ಹ ಪಾತ್ರ ಸಾಮಗ್ರಿಗಳು ಸವಣಿಸಿಡಲ್ಪಟ್ಟಿದ್ದುವು. ಕೊಟಡಿಯ ಬಾಗಿಲಿಗೂ ಗವಾಕ್ಷಗಳಿಗೂ ಸೊಗಸಾದ ನೀಲವರ್ಣದ ರೇಷ್ಮೇ ಬಟ್ಟೆಗಳ ಪರದೆಗಳು ತೂಗಿಹಾಕಲ್ಪಟ್ಟಿದ್ದುವು. ಅದುಕಾರಣ ಕೊಟಡಿಗೆ ಸಾಕಾದಷ್ಟು ಸ್ನಿಗ್ಧವಾದ ಬೆಳಕು ಬರುತಿದ್ದಿತು. ಬೆಳಕಿನ ಜಳವು ತಗುಲುತ್ತಿರಲಿಲ್ಲ; ಹಾಗೂ ಕೊಟಡಿಯು ಸೊಗಯಿಪ ಪರಿಮಳಗಳಿಂದಾಮೋದಿತವಾಗಿದ್ದಿತು.

ಕೊಟಡಿಯು ನಿಶ್ಯಬ್ದವಾಗಿದ್ದಿತು. ಕಿಂಕರಳೊಬ್ಬಳು ನಿಶ್ಯಬ್ದವಾಗಿ ನಿಂತು ಸುವಾಸಿತ ವಾರಿಸಿಕ್ತವಾದ ವ್ಯಜನದಿಂದ ರಾಜಪುತ್ರನಿಗೆ ಘಾಳಿಯನ್ನು ಬೀಸುತಿದ್ದಳು. ಮತ್ತೊಬ್ಬ ಕಿಂಕರಳು ವಾಕ್‌ಶಕ್ತಿವಿಹೀನವಾಗಿದ್ದವಳಂತೆ ಚಿತ್ರಪ್ರತಿಮೆಯ ಹಾಗೆ ಸ್ವಲ್ಪ ಇಂಬೊತ್ತಿ ನಿಂತಿದ್ದಳು. ರಾಜಕುಮಾರನು ಮಲಗಿದ್ದ ದಂತಖಚಿತವಾದ ಮಂಚದಮೇಲೆ ಪಾರ್ಶ್ವದಲ್ಲೊಬ್ಬ ರಮಣಿಯು ಕುಳಿತಿದ್ದಳು. ಅವಳು ರಾಜಕುಮಾರನ ಶರೀರದಲ್ಲಿದ್ದ ಘಾಯಗಳಿಗೆ ಔಷಧ ಲೇಪನಾದಿಗಳನ್ನು ಬಹು ಜಾಗರೂಕತೆಯಿಂದ ಹಚ್ಚುತಿದ್ದಳು. ಕೆಳಗಡೆ ಜಮಖಾನದಮೇಲೆ ಉತ್ತಮೋತ್ತಮ ಉಡುಪುಗಳನ್ನು ಧರಿಸಿದೊಬ್ಬ ಪಠಾಣನು ಕುಳಿತು ತಾಂಬೂಲ ಚರ್ವಣಮಾಡುತ ಮುಂದಿಟ್ಟಿದ್ದೊಂದು ಫಾರಷಿಯ ಪುಸ್ತಕದಮೇಲೆ ದೃಷ್ಟಿಯುಳ್ಳವನಾಗಿದ್ದನು. ಅಲ್ಲಿದ್ದವರಲ್ಲಾರೂ ಮಾತೊಂದನ್ನಾದರೂ ಉಸಿರದೆ ಮೌನಭಾವವನ್ನಂಗೀಕರಿಸಿದ್ದರು.

ಅಂತೇರಕನಾಗಿ ಮಲಗಿದ್ದ ರಾಜಪುತ್ರನು ಕಣ್ತೆರೆದು ಕೊಟಡಿಯ ನಾಲ್ಕೂ ದಿಕ್ಕುಗಳನ್ನು ನೋಡಿ, ಬಳಿಕ ಒತ್ತಟ್ಟು ಮಗ್ಗಲಾಗಲು ಪ್ರಯತ್ನಪಟ್ಟನು.

ಆದರೆ ಸರ್ವಾಂಗಗಳಲ್ಲಿಯೂ ದಾರುಣ ವೇದನೆಯಾಗಿದ್ದುದರಿಂದ ಸ್ವಲ್ಪ ಅಗಲಾಡು ವುದಕ್ಕೂ ಸಾಧ್ಯವಾಗಲಿಲ್ಲ. ಮಂಚದಮೇಲೆ ಕುಳಿತಿದ್ದ ರಮಣಿಯು ರಾಜ ಕುಮಾರನ ಪ್ರಯತ್ನವನ್ನು ನೋಡಿ, ಇನಿದಾದ ವೀಣಾಸದೃಶ ಸ್ವರದಿಂದ, 'ಸ್ಥಿರವಾಗಿರಿ, ಚಂಚಲಪಡಬೇಡಿರಿ' ಎಂದು ಹೇಳಿದಳು.

ರಾಜಪುತ್ರನು ಬಹು ಕುಗ್ಗಿದ ದನಿಯಿಂದ 'ನಾನೆಲ್ಲಿದ್ದೇನೆ?' ಎಂದು ಕೇಳಿದನು.

ರಮಣಿಯು ತನ್ನ ಮಧುರಸ್ವರದಿಂದ, 'ಮಾತನಾಡಬೇಡಿ, ತಾವು ಉತ್ತಮ ಸ್ಥಳದಲ್ಲಿರುವಿರಿ, ಯೋಚನೆಪಡಬೇಡಿರಿ' ಎಂದುತ್ತರವನ್ನು ಕೊಟ್ಟಳು.

ರಾಜಪುತ್ರನು ಪುನಃ ಹೊತ್ತೆಷ್ಟೆಂದು ಕೇಳಿದನು.

ಮಧುರಭಾಷಿಣಿಯು, 'ಈಗ ಮಧ್ಯಾಹ್ನವಾಗಿದೆ, ಮಾತನಾಡಬೇಡಿ; ಮಾತನಾಡಿದರೆ ಆರೋಗ್ಯವಾಗುವುದಿಲ್ಲ, ಸುಮ್ಮನಿಲ್ಲದಿದ್ದರೆ ನಾನಿಲ್ಲಿಂದೆದ್ದು ಹೊರಟುಹೋಗುವೆನು' ಎಂದಳು.

ರಾಜಪುತ್ರನು ಕಷ್ಟದಿಂದ, 'ಮತ್ತೊಂದು ಮಾತು—ನೀನಾರು?' ಎಂದು ಕೇಳಿದನು.

ರಮಣಿಯು, ತಾನು ಆಯುಷೆಯೆಂದು ಹೇಳಿದಳು.

ರಾಜಪುತ್ರನು ನಿಸ್ತಬ್ಧನಾಗಿ ಆಯುಷೆಯ ಮುಖವನ್ನು ನೋಡತೊಡ ಗಿದನು. ರಾಜಪುತ್ರನವಳನ್ನಾವಾಗಲಾದರೂ ನೋಡಿದ್ದನೆ? ಇಲ್ಲ—ಆವಾಗಲೂ ನೋಡಿರಲಿಲ್ಲವೆಂದವನಿಗೆ ತಿಳಿಯಿತು.

ಆಯುಷೆಯು ವಯಸ್ಸಿನಲ್ಲಿ ಇಪ್ಪತ್ತೆರಡು ವರುಷದವಳಾಗಿರಬಹುದು. ಅವಳು ಪರಮ ಸುಂದರಿಯಾಗಿದ್ದಳು; ಅವಳಾ ಸೌಂದರ್ಯವನ್ನು ನಾಲ್ಕಾರು ಮಾತುಗಳಿಂದ ವರ್ಣಿಸುವುದಸಾಧ್ಯ. ತಿಲೋತ್ತಮೆಯು ರೂಪವತಿಯೇ ಅಹುದು; ಆದರೆ ತಿಲೋತ್ತಮೆಯ ಸೌಂದರ್ಯಕ್ಕೂ ಆಯುಷೆಯ ಸೌಂದರ್ಯಕ್ಕೂ ತಾರ ತಮ್ಯವುಂಟು. ಸ್ಥಿರಯೌವನೆಯಾದಾ ವಿಮಲೆಯ ಸೌಂದರ್ಯಪ್ರಾಚುರ್ಯವೂ ಜನರನ್ನು ಮೋಹಗೊಳಿಸುತಿದ್ದಿತು. ಆದರದು ಆಯುಷೆಯ ರೂಪರಾಶಿಗನು ರೂಪವಾಗಿರಲಿಲ್ಲ. ಕೆಲವು ತರುಣಿಯರ ಸೌಂದರ್ಯವು ವಸಂತಕಾಲದ ನವಸ್ಫುಟ ಮಲ್ಲಿಗೆಯಂತೆ ವ್ರೀಡಾಸಂಕುಚಿತವಾಗಿಯೂ ಕೋಮಲವಾಗಿಯೂ ನಿರ್ಮಲ ವಾಗಿಯೂ ಪರಿಮಳಯುಕ್ತವಾಗಿಯೂ ಇರುವದಲ್ಲವೆ? ತಿಲೋತ್ತಮೆಯ ಸೌಂದರ್ಯವು ಅಂತಹದುದಾಗಿದ್ದಿತು. ಮತ್ತೆ ಕೆಲವು ರಮಣಿಯರ ರೂಪವು ಅಪರಾಹ್ನದ ಸ್ಥಳಪದ್ಮದೋಪಾದಿಯೊಳು ವಾಸನೆ ರಹಿತವಾಗಿಯೂ ಮುದಿತೋ ನ್ಮುಖವಾಗಿಯೂ ಶುಕ್ಲ ಪಲ್ಲವಗಳುಳ್ಳದುದಾಗಿದ್ದರೂ ಸುಶೋಭಿತವಾಗಿಯೂ ಅಧಿಕ ವಿಕಸಿತವಾಗಿಯೂ ಅಧಿಕ ಪ್ರಭಾವವಿಶಿಷ್ಟವಾಗಿಯೂ ಮಧುರಪದಿಪೂರ್ಣ ವಾಗಿಯೂ ಇರುವುದು. ವಿಮಲೆಯು ಅಂತಹ ಸುಂದರಿಯಾಗಿದ್ದಳು. ಆಯುಷೆಯ

ಸೌಂದರ್ಯವಾದರೋ, ನವ-ರವಿ-ಕರ-ಪ್ರಫುಲ್ಲ-ಜಲ-ನಳಿನಿಯಂತೆ ಸುವಿಕಾಸಿತ ವಾಗಿಯೂ, ಸುವಾಸಿತ ರಸಪರಿಪೂರ್ಣಪ್ರದೀಪ್ತವಾಗಿ ಸಂಕುಚಿತವಾಗದೆಯೂ, ವಿಶುಷ್ಕವಾಗದೆಯೂ ಇದ್ದಿತು. ಹಾಗೂ ಕೋಮಲವಾಗಿಯೂ ಪ್ರೋಜ್ವಲ ವಾಗಿಯೂ ಇದ್ದಿತಲ್ಲದೆ ಪೂರ್ಣದಳರಾಜಿಯಲ್ಲಿ ಸೂರ್ಯಕಿರಣವು ಪ್ರತಿಫಲಿತ ವಾಗಿದ್ದಂತೆ ಮಂದಸ್ಮಿತಯುಕ್ತವಾಗಿಯೂ ಇದ್ದಿತು. ಪಾಠಕಮಹಾಶಯರೆ! ಆವಾಗಲಾದರೂ ಸೌಂದರ್ಯದ ಪ್ರಕಾಶವನ್ನು ನೋಡಿರುವಿರಾ? ಅಥವಾ ನೋಡದಿದ್ದರೆ ಕೇಳಿರುವಿರಾ? ಅನೇಕ ಸುಂದರಿಯರು ತಮ್ಮ ಸೌಂದರ್ಯದ ಪ್ರಭೆಯಿಂದ ದಶದಿಕ್ಕುಗಳನ್ನೂ ಪ್ರಕಾಶಮಾಡುವರಲ್ಲವೆ? ಅನೇಕ ವಧೂಗಳು ಮನೆಯನ್ನೆಲ್ಲ ದೀಪಲತೆಯಂತೆ ಬೆಳಗುವರೆಂದು ಕೇಳಿಲ್ಲವೆ? ವಜ್ರಧಾಮದಲ್ಲಿಯೂ ನಿಶುಂಭ ಯುದ್ಧದಲ್ಲಿಯೂ ನೀಲರೂಪದಿಂದ ಪ್ರಪಂಚವೇ ನೀಲಮಯವಾಗಿ ಪ್ರಕಾಶವಾಗಿರಲಿಲ್ಲವೆ? ಪಾಠಕಮಹಾಶಯರೆ! ಈಗಾವದಕ್ಕೆ ಸೌಂದರ್ಯದ ಪ್ರಕಾಶವೆನ್ನುವುದು ಬೋಧೆಯಾಯಿತೆ? ವಿಮಲೆಯು ತನ್ನ ಸೌಂದರ್ಯದಿಂದ ಪ್ರಕಾಶವನ್ನುಂಟುಮಾಡುತಿದ್ದಳು. ಆದರಾ ಪ್ರಕಾಶವು ಮನೆಯ ಕರದೀಪದ ಪ್ರಕಾಶದಂತೆ ಅಲ್ಪ ಪ್ರಕಾಶವಾಗಿಯೂ ತೈಲಾಪೇಕ್ಷಿತವಾಗಿಯೂ ಇದ್ದಿತು. ಹಾಗಿದ್ದರೂ ಆ ದೀಪವು ಸಂಸಾರನಿರ್ವಾಹಕ್ಕೆ ಸಾಕಾಗಿದ್ದಿತು. ಆದರಿಂದ ಮನೆಗೆ ಬೇಕಾದಷ್ಟು ಬೆಳಕಾಗುವುದು. ಅಡುಗೆಯನ್ನು ಮಾಡುವುದಕ್ಕೊಲೆ ಯನ್ನು ಹೊತ್ತಿಸಬಹುದು; ಮಲಗುವುದಕ್ಕೆ ಹಾಸಿಗೆಯನ್ನು ಹಾಸಬಹುದು, ಮತ್ತೂ ಅನೇಕ ಗೃಹಕಾರ್ಯಗಳನ್ನೆಲ್ಲಾ ಮಾಡಬಹುದು. ಆದರಾ ದೀಪದ ಜ್ವಾಲೆಯನ್ನು ಕೈಯಿಂದ ಮಾತ್ರ ಮುಟ್ಟಕೂಡದು; ಮುಟ್ಟಿದರೆ ಕೈಸುಡು ವುದು. ತಿಲೋತ್ತಮೆಯೂ ತನ್ನ ಸೌಂದರ್ಯದಿಂದ ಪ್ರಕಾಶಮಾಡುತಿದ್ದಳು. ಆದರಾ ಪ್ರಕಾಶವು ಬಾಲೇಂದು-ಜ್ಯೋತ್ಸ್ನೆಯಂತೆ ಸುವಿಮಲವಾಗಿಯೂ ಸುಮಧುರವಾಗಿಯೂ ಸುಶೀತಲವಾಗಿಯೂ ಇದ್ದಿತು. ಆದರದರಿಂದ ಗೃಹ ಕಾರ್ಯವು ನಿರ್ವಾಹವಾಗದು. ದೂರದಿಂದ ನಿಸ್ಸೃತವಾದುದರಿಂದದು ಅಷ್ಟೊಂದು ಪ್ರಖರವಾಗಿರಲಿಲ್ಲ. ಆಯಿಷೆಯೂ ತನ್ನ ರೂಪಲಾವಣ್ಯಗಳಿಂದ ಪ್ರಕಾಶಮಾಡುತ್ತಿದ್ದಳು. ಆದರಾ ಪ್ರಕಾಶವು ಪೂರ್ವಾಹ್ನದ ಸೂರ್ಯರಶ್ಮಿ ಗಳಂತೆ ಪ್ರದೀಪ್ತವಾಗಿಯೂ ಪ್ರಭಾಮಯವಾಗಿಯೂ ಅದು ಬಿದ್ದೆಡೆ ಆಹ್ಲಾದ ವನ್ನುಂಟುಮಾಡುವುದಾಗಿಯೂ ಇದ್ದಿತು.

ಉದ್ಯಾನವನಕ್ಕೆ ಪದ್ಮವು ಹೇಗೋ, ಹಾಗೆ ನಮ್ಮ ಉಪನ್ಯಾಸಕ್ಕೆ ಆಯಿಷೆಯು ಪದ್ಮಸ್ವರೂಪಳಾಗಿರುವಳು. ಆದುದರಿಂದವಳ ಅವಯವ ಲತಾ ಸೌಂದರ್ಯವನ್ನು ಪಾಠಕರ ಧ್ಯಾನ ಪ್ರಾಪ್ಯಗಳನ್ನಾಗಿ ಮಾಡಲಿಷ್ಟವುಳ್ಳವ ರಾಗಿದ್ದೇವೆ. ಆದರೆ ಹಾಗೆ ಮಾಡಬೇಕಾದರೆ, ನಾವು ಚಿತ್ರಕರ್ಮದಲ್ಲೊಬ್ಬ ದೊಡ್ಡಪಂಡಿತರಾಗಿದ್ದು ಚಿತ್ರಬರೆಯುವ ಒಂದಸಾಧಾರಣ ಲೇಖನಿಯನುಳ್ಳವ

ರಾಗಿರಬೇಕು. ಚಂಪಕವರ್ಣವಲ್ಲ; ರಕ್ತವರ್ಣವಲ್ಲ; ಅಥವಾ ಶ್ವೇತ ಪದ್ಮ ಕೋರಕವರ್ಣವಲ್ಲ; ಈ ಮೂರು ವರ್ಣಗಳೂ ಸಮ್ಮಿಶ್ರವಾದೊಂದು ವರ್ಣವನ್ನು ಸಿದ್ಧಮಾಡಲು ಶಕ್ತರಾಗಿರಬೇಕು. ಮನ್ಮಥನ ರಂಗಭೂಮಿಯು ಹಾಗೆ ಮನೋಹರವಾಗಿ ವಿಶಾಲವಾದಾ ಮುಖಕಮಲವನ್ನು ಚಿತ್ರಿಸಲು ಶಕ್ತರಾಗಿರ ಬೇಕು. ನಾವಾ ಮುಖಕಮಲದ ಮೇಲುಗಡೆ ಕುಂಚೀಕೃತವಾಗಿ ರೇಖೆಗಳ ಹಾಗೆ ಹೋಗಿ ಕಣ್ಗೊಳಿಸುತ್ತಿರುವ ಮುಂಗುರುಳಿನ ಸೀಮಾರೇಖೆಯನ್ನು ಬರೆದು, ಆ ರೇಖೆಯು ಆ ಮುಖಪದ್ಮದ ವರ್ತುಳಾಕೃತಿಯ ಅನುಗಾಮಿಯಾಗಿ ಆಕರ್ಣಪರ್ಯಂತ ಹೋಗಿ, ಅತಿ ಸುಂದರವಾಗಿ ಬೆಡಗಿನಿಂದಲ್ಲಿ ಮೇಲಕ್ಕೆ ತಿರುಗಿರುವಂತೆ ಚಿತ್ರಿಸಲು ಶಕ್ತರಾಗಿರಬೇಕು. ನಿಬಿಡವರ್ಣವುಳ್ಳಾ ಮೃದುತರ ವಾಗಿರುವ ಕೇಶರಾಶಿಯನ್ನು ಚಿತ್ರಿಸಲು ಶಕ್ತರಾಗಿರಬೇಕು. ನಾವು ಅವಳಾ ಲಲಾಟದ ಮೇಲ್ಭಾಗದಿಂದ ನಡುನೆತ್ತಿಯ ಹಿಂಭಾಗದವರೆಗೂ ಕೇಶವಿನ್ಯಾಸ ದಿಂದೆಸೆವ ಸೀಮಂತರೇಖೆಯನ್ನು ಅಷ್ಟೊಂದು ಪರಿಷ್ಕಾರವಾಗಿಯೂ ಅಷ್ಟೊಂದು ಸೂಕ್ಷ್ಮವಾಗಿಯೂ ತೋರಿಸಲು ಸಮರ್ಥರಾಗಿರಬೇಕು. ನೋಡುವವರನ್ನು ಮೋಹಗೊಳಿಸುವಂತೆ ಅಷ್ಟೊಂದು ಸೊಗಸಾಗಿ ಹೆರಳನ್ನೆತ್ತಿ ಕಟ್ಟಿರುವ ಓರೆ ತುರುಬನ್ನು ಚಿತ್ರಿಸಲು ಶಕ್ತರಾಗಿರಬೇಕು. ಲಲಾಟ ತಲದಲ್ಲಿ ಪ್ರಥಮತಃ ಪರಸ್ಪರ ಸಂಯೋಗಾಶಯವುಳ್ಳವುಗಳಾಗಿ ಬಂದು, ಬಳಿಕ ಮಿಳಿತವಾಗದಹಾಗೆ, ಪುನಃ ಅಲ್ಲಿಂದ ಹಿಂದಿರುಗುವುದರಲ್ಲಿ ವರ್ಧಿತಾಯತನವುಳ್ಳವುಗಳಾಗಿ, ಮಧ್ಯ ಸ್ಥಳಕ್ಕೆ ಬರುವುದರೊಳಗೆ ಸ್ಥೂಲರೇಖೆಗಳಾಗಿ, ಅನಂತರ ಕ್ರಮ ಕ್ರಮವಾಗಿ ಸೂಕ್ಷ್ಮಾಕಾರದಿಂದ ಆಕರ್ಣಾಂತ್ಯದಲ್ಲಿರುವ ಕೇಶವಿನ್ಯಾಸದ ರೇಖೆಯೊಡನೆ ಸೂಚ್ಯಾಗ್ರದಂತೆ ಸಮಾಪ್ತವಾಗಿರುವ ಅವಳಾ ಭ್ರೂಯುಗ್ಮವನ್ನು ತಿದ್ದಿ ತೋರಿಸಲು ಸಮರ್ಥರಾಗಿರಬೇಕು. ನಾವಾ ವಿದ್ಯುದಗ್ನಿಪೂರ್ಣವಾದ ಮೇಘ ದಂತಿರುವ ಕೋಮಲ ಚಂಚಲ ಚಕ್ಷುಪಲ್ಲವಗಳನ್ನು ಬರೆಯಲು ಶಕ್ತರಾಗಿರ ಬೇಕು. ಅವಳಾ ನಯನಯುಗಳದ ವಿಸ್ತೃತಾಯತನವನ್ನು ಬರೆಯಲು ಶಕ್ತ ರಾಗಿರಬೇಕು. ಆ ಪಲ್ಲವಗಳ ಸುಂದರವಾದ ವಕ್ರಭಂಗಿಯನ್ನೂ ಆ ಲೋಚನಗಳ ನೀಲಾರತ್ತಕ ಪ್ರಭೆಯನ್ನೂ ಅವುಗಳ ಸ್ಥೂಲಭ್ರಮರಾಕಾರದ ಕೃಷ್ಣತಾರೆಗಳನ್ನೂ ತಿದ್ದಿ ಬರೆಯಲು ಶಕ್ತರಾಗಿರಬೇಕು. ಗರ್ವವಿಸ್ಫಾರಿತ ರಂಧ್ರಸಮೇತವಾದಾ ಯಸಳಾದಾ ನಾಸಿಕ ರಸಪೂರ್ಣವಾದಾ ಓಷ್ಠಾಧರಗಳು, ಕಬರೀ ಸ್ಪರ್ಶವಾದಾ ಪ್ರಸ್ತರಶ್ವೇತ ಕಂಬುಗ್ರೀವ, ಕರ್ಣಾಭರಣವಾದಾ ಜುಮುಕಿಗಳನ್ನು ಸ್ಪರ್ಶಮಾಡ ಲೆಳಸುವಂತೆ ಹೊಳೆಯುತಿರುವ ಕಪೋಲಗಳು, ರತ್ನಾಭರಣದಿಂದಲಂಕೃತವಾದಾ ಸ್ಥೂಲವಾದರೂ ಕೋಮಲವಾದ ಬಾಹುಗಳು, ರತ್ನದುಂಗುರಗಳನ್ನು ಹೀನ ಭಾಸವುಳ್ಳವುಗಳನ್ನಾಗಿ ಮಾಡುವಾ ಹಸ್ತಾಂಗುಳಿಗಳು, ಪದ್ಮಾರಕ್ತವಾದಾ ಕೋಮಲಕರಪಲ್ಲವಗಳು, ಮುಕ್ತಾಹಾರಗಳ ಪ್ರಭೆಯನ್ನು ಧಿಕ್ಕರಿಸುವಾ

ಪೀವರೋನ್ನತ ವಕ್ಷಃಸ್ಥಳ, ಈಷದ್ದೀರ್ಘವಾಗಿ ಸುಲಲಿತವಾದಾ ಶರೀರದ ಮನೋಮೋಹನಭಂಗಿ,—ಇವೇ ಮುಂತಾದುವುಗಳನ್ನು ಚಿತ್ರಿಸಲು ಶಕ್ತರಾಗಿರ ಬೇಕು. ನಾವು ಅಂತಹ ಚಿತ್ರಕರ್ಮದಲ್ಲಿ ಕುಶಲರಾಗಿದ್ದರೆ, ಆ ಚಿತ್ರವನ್ನು ಚಿತ್ರಿಸಲೆತ್ನಿಸಲು ಧೈರ್ಯವುಳ್ಳವರಾಗುತಿದ್ದೆವು; ಅಥವಾ ಅಷ್ಟೊಂದು ಕುಶಲ ರಾಗಿದ್ದರೂ ಕೃತಕಾರ್ಯರಾಗುತಿದ್ದೆವೆಂದು ನಂಬುಗೆಯಿಲ್ಲ. ಈ ಮಿಥ್ಯಾ ಪ್ರಪಂಚದಲ್ಲಿ ಆಯಷೆಯ ಸೌಂದರ್ಯವು ಮಾತ್ರ ಸತ್ಯವಾಗಿದ್ದಿತು. ಆ ಸೌಂದರ್ಯಸಾರ! ಆ ಸಮುದ್ರೋತ್ಪನ್ನ ಕೌಸ್ತುಭರತ್ನ!! ಸಂಧ್ಯಾಸಮೀರಣ ಕಂಪಿತನೀಲೋತ್ಪಲ ತುಲ್ಯವಾದಾ ಚಂಚಲಕಟಾಕ್ಷ!!! ಅವುಗಳನ್ನೆಲ್ಲಾ ಆವ ಪ್ರಕಾರ ಚಿತ್ರಿಸಿ ಅನ್ಯರ ಹೃದಯಂಗಮಮಾಡುವುದು? ಅವಳಾ ಚಿತ್ರಕರ್ಮನ ಅಸದೃಶ ಸೃಷ್ಟಿರತ್ನವಾಗಿದ್ದಳು. ಅಂತಹದುದನ್ನಾ ಈಶ್ವರಾವೇಶ* ಪ್ರೇರಣೆ ಯಿಲ್ಲದೆ ಹೇಗೆ ಬರೆಯಲಾಪೆವು! ಆದುದರಿಂದ ನಾವಾ ಅಸಾಧ್ಯವಾದ ಕಾರ್ಯ ದಲ್ಲಿ ಪ್ರವರ್ತಿಸಲಾರೆವು.

ರಾಜಕುಮಾರನು ಅಂತಹ ಆಯಷೆಯನ್ನು ಅನೇಕ ಕ್ಷಣಗಳು ದೃಷ್ಟಿಸಿ ನೋಡುತಿರುವಾಗ ತಿಲೋತ್ತಮೆಯ ನೆನವು ಬಂದು, ಸ್ಮೃತಿಮಾತ್ರದಿಂದವನ ಹೃದಯವು ವಿದೀರ್ಣವಾಗಿ ನಾಡಿಗಳಲ್ಲಿ ಪ್ರಬಲತರ ವೇಗದಿಂದ ರಕ್ತಸಂಚಾರ ವಾಗಲಾರಂಭಿಸಿ, ಘಾತವಾದ ಘಾಯಗಳಿಂದ ಪುನಃ ರಕ್ತಪ್ರವಾಹವು ಹೊರಟು ಪುನಃ ಮೂರ್ಛಿತನಾಗಿ ಕಣ್ಣುಗಳನ್ನು ಮುಚ್ಚಿಕೊಂಡನು. ಕೂಡಲೆ ಮಂಚದಮೇಲೆ ಕುಳಿತಿದ್ದ ಸುಂದರಿಯು ಭಯಗೊಂಡೆದ್ದಳು. ಕೆಳಗೆ ಪುಸ್ತಕವ ನಿಟ್ಟುಕೊಂಡು ಕುಳಿತಿದ್ದ ಮನುಷ್ಯನು ಪುಸ್ತಕವ ನೋಡುವುದನ್ನು ಬಿಟ್ಟು ಪ್ರೇಮಭರಿತನಾಗಿ ಆಯಷೆಯನ್ನು ಆಗಾಗ್ಗೆ ನೋಡುತಿದ್ದನು. ಆ ಪಠಾನನು ಅವಳೇಳುತ್ತಿದ್ದಾಗ ಅಲುಗಾಡುತ್ತಿದ್ದ ಅವಳಾ ಕರ್ಣಾಭರಣಗಳನ್ನು ಅಪರಿತೃಪ್ತ ಲೋಚನಗಳಿಂದ ನೋಡುತಿದ್ದನು. ಆಯಷೆಯು ಎದ್ದು ಮೆಲ್ಲಮೆಲ್ಲನೆ ಪಠಾನನ ಸಮೀಪ ಬಂದು, ಅವನ ಕಿವಿಯಲ್ಲಿ, 'ಉಸ್ಮಾನ್! ಬೇಗನೆ ವೈದ್ಯನ ಬಳಿಗೆ ಜನರನ್ನು ಕಳುಹು' ಎಂದು ಹೇಳಿದಳು.

ದುರ್ಗವನ್ನು ಜಯಿಸಿದ ಉಸ್ಮಾನ್‌ಖಾನನೇ ಮಂಚದ ಬಳಿ ಕುಳಿತಿದ್ದವನು; ಆಯಷೆಯು ಹೇಳಿದ ಮಾತನ್ನು ಕೇಳಿ ಅವನೆದ್ದು ಹೋದನು.

ಉಸ್ಮಾನ್‌ಖಾನನು ಸ್ವಲ್ಪಹೊತ್ತಿನಲ್ಲಿಯೇ ವೈದ್ಯನನ್ನು ಕರೆತಂದನು. ವೈದ್ಯನು ಬಂದು ಬಹಳ ಪ್ರಯತ್ನಪಟ್ಟು ರಾಜಕುಮಾರನ ಘಾಯದಿಂದ ಹೊರಡುತಿದ್ದ ರಕ್ತಪ್ರವಾಹವನ್ನು ನಿಲ್ಲಿಸಿ, ನಾನಾವಿಧದ ಔಷಧಗಳನ್ನು ಆಯಷೆಯ ಕೈಯಲ್ಲಿ ಕೊಟ್ಟು, ಅವುಗಳನ್ನು ಪ್ರಯೋಗಿಸುವ ವಿಧಾನಗಳನ್ನವಳಿಗೆ ಹೇಳಿದನು.

---

* ಈಶ್ವರಾವೇಶ=ದೇವೋಪದೇಶ (Divine Inspiration),

ಅಯಿಷೆಯು ವೈದ್ಯನ ಕಿವಿಯ ಹತ್ತಿರ ಬಾಯಿಟ್ಟು, 'ಅವಸ್ಥಿತಿ ಕಂಡು ಬರುವುದು?' ಎಂದು ಕೇಳಿದಳು.

ವೈದ್ಯನು, 'ಜ್ವರವು ಅತಿ ಭಯಂಕರವಾಗಿದೆ' ಎಂದು ಹೇಳಿ ಅಪ್ಪಣೆಯನ್ನು ಪಡೆದು ಹೊರಟುಹೋದನು. ಉಸ್ಮಾನನು ಅವನ ಹಿಂದೆ ಹೋಗಿ ಬಾಗಿಲಲ್ಲಿ ನಿಂತು, ಮೆಲ್ಲಮೆಲ್ಲನೆ, 'ಪ್ರಾಣಕ್ಕೆ ಭಯವಿಲ್ಲವಷ್ಟೆ?' ಎಂದು ಕೇಳಿದನು. ವೈದ್ಯನು, ಆರೋಗ್ಯಲಕ್ಷಣಗಳು ಕಾಣುವುದಿಲ್ಲ; ಪುನಃ ಯಾತನೆಯುಂಟಾದರೆ ನನ್ನನ್ನು ಕರೆಯಿಸು' ಎಂದು ಹೇಳಿ ಹೊರಟುಹೋದನು.

---

## ಎರಡನೆಯ ಪರಿಚ್ಛೇದ

## ಕುಸುಮ ಮಧ್ಯದಲ್ಲಿ ಪಾಷಾಣ

ಅಂದು ರಾತ್ರಿ ಬಹಳ ಹೊತ್ತಿನವರೆಗೂ ಅಯಿಷೆಯೂ ಉಸ್ಮಾನನೂ ಜಗತ್ಸಿಂಹನ ಸಮೀಪದಲ್ಲೇ ಕುಳಿತಿದ್ದರು. ಜಗತ್ಸಿಂಹನಿಗೆ ಆಗಾಗ್ಗೆ ಸ್ವಲ್ಪಹೊತ್ತು ಚೇತನವೂ ಸ್ವಲ್ಪಹೊತ್ತು ಮೂರ್ಛೆಯೂ ಬರುತಿದ್ದಿತು. ವೈದ್ಯನು ಅನೇಕಾವರ್ತಿ ಬಂದು ಹೋಗುತಿದ್ದನು. ಅಯಿಷೆಯು ಅವಿಶ್ರಾಂತಳಾಗಿ ರಾಜಕುಮಾರನ ಶುಶ್ರೂಷೆಯನ್ನು ಮಾಡುತಿದ್ದಳು. ರಾತ್ರಿಯೆರಡನೆಯ ಝಾಮದಲ್ಲೊಬ್ಬ ಪರಿಚಾರಿಕೆಯು ಬಂದು ಅಯಿಷೆಯನ್ನು ಕುರಿತು, ರಾಣಿ ಬೇಗಂಯವರು ಜ್ಞಾಪಿಸಿದರೆಂದು ತಿಳುಹಿದಳು.

ಅಯಿಷೆಯು ಬರುವೆನೆಂದು ಹೇಳಿ ಎದ್ದಳು. ಉಸ್ಮಾನನೂ ಎದ್ದನು. ಅಯಿಷೆಯು, 'ನೀನೇಳಲೇಕೆ?' ಎಂದು ಕೇಳಿದಳು. ಉಸ್ಮಾನನು 'ರಾತ್ರಿ ಬಹಳ ಹೊತ್ತಾಗಿರುವಕಾರಣ ಸಂಗಡ ಬಂದು ಅಂತಃಪುರದಲ್ಲಿ ನಿನ್ನನ್ನು ಬಿಟ್ಟು ಬರುವೆನು' ಎಂದನು.

ಅಯಿಷೆಯು ಅಲ್ಲಿದ್ದ ದಾಸಿಯರಿಗೆ ಜಾಗರೂಕತೆಯಿಂದ ನೋಡಿಕೊಂಡಿರಬೇಕೆಂದು ಹೇಳಿ ತನ್ನ ತಾಯಿಯ ಗೃಹಾಭಿಮುಖವಾಗಿ ಹೋದಳು. ಹೋಗುತ ಹಾದಿಯಲ್ಲಿ ಉಸ್ಮಾನನು ಅಯಿಷೆಯನ್ನು ಕುರಿತು, 'ನೀನು ರಾತ್ರಿಯಲ್ಲಾ ರಾಣಿಯವರೊಂದಿಗಿರುವೆಯಾ?' ಎಂದು ಕೇಳಿದನು.

ಅಯಿಷೆಯು, 'ಇಲ್ಲ, ಪುನಃ ರಾಜಪುತ್ರನ ಬಳಿಗೆ ಹಿಂದಿರುಗಿ ಬರುವೆನು' ಎಂದಳು.

ಉಸ್ಮಾನ್—ಅಯಿಷೆ! ನಿನ್ನ ಗುಣಾತಿಶಯಕ್ಕಳವಿಲ್ಲ; ನೀನಾ ಮಹಾಶತ್ರುವಿಗೆ ಮಾಡುವಷ್ಟು ಶುಶ್ರೂಷೆಯನ್ನು ಭಗಿನಿಯಾದವಳು ತನ್ನ ಭ್ರಾತೃವಿಗೂ ಮಾಡಳು; ನೀನವನನ್ನು ಮೃತ್ಯುವಿನ ಮುಖದಿಂದ ತಪ್ಪಿಸಿ ಅವನಿಗೆ ಪ್ರಾಣದಾನವನ್ನು ಮಾಡುತ್ತಿ.

ಅಯಿಷೆಯು ಭುವನವನ್ನು ಮೋಹಗೊಳಿಸುವ ಮಂದಹಾಸಯುಕ್ತೆಯಾಗಿ,

'ಉಸ್ಮಾನ್! ನಾನು ಸ್ವಭಾವತಃ ಹೆಂಗಸು; ರೋಗಪೀಡಿತರ ಸೇವೆಯನ್ನು ಮಾಡುವುದೆನಗೆ ಪರಮ ಧರ್ಮವು; ಹಾಗವರ ಸೇವೆಮಾಡದಿದ್ದರೆ ದೋಷ ವಾಗುವುದು; ನಾನು ಧರ್ಮಬದ್ಧಳಾಗಿ ಮಾಡಬೇಕಾದ ಸೇವೆಯನ್ನು ಮಾಡಿದ ರದು ಶ್ಲಾಘ್ಯವಲ್ಲ; ಮಾಡತಕ್ಕ ಕೆಲಸವನ್ನು ಮಾಡಿದಹಾಗಾಯಿತು. ಆದ ರಾತನು ನಿನಗೆ ಪರಮ ವೈರಿಯಾಗಿದ್ದಾನೆ; ರಣಕ್ಷೇತ್ರದಲ್ಲಿ ನಿನ್ನ ಶೌರ್ಯ ದರ್ಪ ವನ್ನು ಖಂಡಿಸಲು ಪ್ರತಿಯೋಗಿ*ಯಾಗಿದ್ದಾನೆ; ನಿನ್ನ ಸ್ವಹಸ್ತದಿಂದವನೀ ಸ್ಥಿತಿಗೆ ತರಲ್ಪಟ್ಟಿದ್ದಾನೆ; ಅಂತಹವನಿಗೂ ನೀನು ಅಹೋರಾತ್ರಿ ಅವನ ಬಳಿಯಲ್ಲಿದ್ದುಪ ಚಾರಗಳನ್ನು ಮಾಡಿಸುವುದಕ್ಕೆ ಸಲುವಾಗಿ ನಿಜವಾಗಿ ನೀನು ಪ್ರಶಂಸಾ ಭಾಜನನು; ನಾನು ಶ್ಲಾಘನಾರ್ಹಳಲ್ಲ' ವೆಂದು ಹೇಳಿದಳು.

ಉಸ್ಮಾನನು ಸ್ವಲ್ಪ ನಾಚಿಕೆಗೊಂಡವನಾಗಿ, 'ಅಯುಷೆ! ನೀನು ನಿನ್ನ ಮೃದು ತರವಾದ ಸ್ವಭಾವದಂತೆ ಪ್ರಪಂಚದಲ್ಲೆಲ್ಲರೂ ಇರುವರೆಂದು ಭಾವಿಸುತ್ತಿ; ಆದರೆ ನನ್ನ ಅಭಿಪ್ರಾಯವು ಅಷ್ಟೊಂದು ಪಾರಮಾರ್ಥಿಕವಾದುದಲ್ಲ; ಜಗತ್ಸಿಂಹನು ಆರೋಗ್ಯ ಲಾಭವನ್ನು ಹೊಂದಿದರೆ, ನಮಗುಂಟಾಗುವ ಆದಾಯವನ್ನು ನೀನು ಯೋಚಿಸ ಲಾರದೆ ಹೋದೆ; ರಾಜಕುಮಾರನು ಮೃತನಾಗಿಹೋದರೆ ನಮಗದರಿಂದಾದಾಯ ವಿಲ್ಲವೆಂದು ಹೇಳುವುದಕ್ಕೂ ಆಗದು! ಏಕೆಂದರೆ, ಯುದ್ಧಾಂಗಣದಲ್ಲಿ ಮಾನ ಸಿಂಹನು ಮಗನಿಗಿಂತ ಕಡಿಮೆಯಾದವನಲ್ಲ, ಒಬ್ಬ ಯೋಧ್ಧನೊಡನೆ ಹೋರಾಡು ವುದಕ್ಕೆ ಬದಲಾಗಿ ಇಬ್ಬರ ಸಂಗಡ ಹೋರಾಡಬೇಕಾಗುವುದು; ಹೀಗೆಂದು ಯೋಚಿಸಿದರೆ ರಾಜಕುಮಾರನ ಮರಣವು ನಮಗಾದಾಯಕರವೆಂತಲೇ ಹೇಳ ಬೇಕು. ಆದರೆ ಜಗತ್ಸಿಂಹನು ಆರೋಗ್ಯವನ್ನು ಹೊಂದಿ ನಾವವನನ್ನು ಸೆರೆಯ ಲ್ಲಿಟ್ಟುಕೊಂಡಿದ್ದರೆ, ಮಾನಸಿಂಹನನ್ನು ನಮ್ಮ ಕೈಯಲ್ಲಿಟ್ಟುಕೊಂಡಹಾಗಾಗು ವುದು. ಆತನು ತನ್ನ ಪ್ರಿಯಪುತ್ರನ ಬಿಡುಗಡೆಗೆ ಸಲುವಾಗಿ ನಮಗೆ ಮಂಗಳ ಜನಕವಾದ ಸಂಧಿಯನ್ನೆಸಗುವನು; ಅದೂ ಅಲ್ಲದೆ, ಅಕ್ಬರಬಾದಷಹನೂ ಅಂತಹ ಧಕ್ಷನಾದ ಸೇನಾಪತಿಯನ್ನು ಪುನಃ ಪಡೆಯಲು ನಮಗನುಕೂಲವಾದ ಸಂಧಿ ಯನ್ನು ನಡೆಯಿಸುವುದಕ್ಕೆ ಸಮ್ಮತನಾಗುವನು; ಹಾಗೂ ನಾವು ಜಗತ್ಸಿಂಹ ನನ್ನುದಾರಭಾವದಿಂದುಪಚರಿಸಿ, ಅದರಿಂದವನಿಗೆ ಆರೋಗ್ಯವಾದರೆ ಅವನೂ ಕೃತ ಜ್ಞತೆಯಿಂದ ನಮಗನುಕೂಲವಾದ ಸಂಧಿ ನಿಬಂಧನೆಗಳಾಗುವುದರಲ್ಲಿ ಯತ್ನ ಪಡುವನು; ಅವನು ಯತ್ನಪಟ್ಟರದು ವಿಫಲವಾಗದು; ಒಂದುವೇಳೆ, ಅದಾವ ದಾಗದಿದ್ದರೂ, ಕಡೆಗೆ ಜಗತ್ಸಿಂಹನ ಸ್ವಾಧೀನಲಾಭಕ್ಕೆ ಸಲುವಾದರೂ ಮಾನ ಸಿಂಹನು ನಮಗೆ ಹೆಚ್ಚು ಹಣವನ್ನು ಕೊಡಬೇಕಾಗುವುದು; ಅವನ ಪ್ರಾಣವು, ಸಮ್ಮುಖ ಸಂಗ್ರಾಮದಲ್ಲಿ ನಾವು ಹೊಂದುವ ಜಯಕ್ಕಿಂತ, ಅಧಿಕಮೌಲ್ಯವುಳ್ಳುದು ದಾಗಿರುವುದು', ಎಂದನು.

---

* ಪ್ರತಿಯೋಗಿ = ಎದುರಾಳಿ.

ಉಸ್ಮಾನನು ಅಷ್ಟೊಂದು ದೂರ ಆಲೋಚಿಸಿಯೇ ರಾಜಪುತ್ರನ ಆರೋಗ್ಯ ವಿಚಾರದಲ್ಲಿ ಯತ್ನಶೀಲನಾಗಿರಬಹುದು, ಸಂದೇಹವಿಲ್ಲ. ಆದರದಕ್ಕೆ ಮತ್ತೊಂದು ಕಾರಣವುಂಟು. ಕೆಲವರು, ತಮ್ಮನ್ನಿತರರು ದಯಾಳುಸ್ವಭಾವದವನೆಂದು ದೂರುವ ರೆಂಬ ಲಜ್ಜಾಭಯದಿಂದ ಕಾಠಿಣ್ಯವನ್ನು ತೋರುವವರಂತೆ ನಟಿಸಿ, ದಯಾ ಶೀಲತೆಯು ಹೆಂಗಸಿಗೆ ಮಾತ್ರ ಸ್ವಭಾವಸಿದ್ಧವಾಗಿ ತಕ್ಕುದುದೆಂದು ಅಪಹಾಸ್ಯ ಮಾಡುತ್ತ, ತಾವೇನೋ ಪರೋಪಕಾರವನ್ನೇ ಮಾಡುತಿರುಪರು; ಅದನ್ನು ಕುರಿತು ಜನರು ಚರ್ಚಿಸಿ ಕೇಳಿದರೆ, ಅವರದಕುತ್ತರವಾಗಿ, ತಮಗದರಿಂದ ಪ್ರಯೋಜನವುಂಟೆಂಬ ನೆಪವನ್ನು ಹೇಳುವರು. ಅಯಷೆಯು ಉಸ್ಮಾನನನ್ನಾ ಸ್ವಭಾವದವನೆಂದು ಚೆನ್ನಾಗಿ ಬಲ್ಲಳಾಗಿ, ನಗುತ ನಗುತ, 'ಉಸ್ಮಾನ್ ಎಲ್ಲರೂ ನಿನ್ನಹಾಗೆ ಸ್ವಾರ್ಥಪರತೆಯಲ್ಲಿ ದೂರದರ್ಶಿಗಳಾಗಿದ್ದರೆ ಪ್ರಪಂಚದಲ್ಲಿ ಬೇರೆ ಧರ್ಮವೇ ಆವಶ್ಯಕವಿರದು' ಎಂದು ಹೇಳಿದಳು.

ಉಸ್ಮಾನನು ತನ್ನ ಹೇಳಿಕೆಯನ್ನೇ ಸ್ಥಿರಪಡಿಸಿಕೊಳ್ಳಲು ಪ್ರಯತ್ನಪಡುವವ ನಂತೆ ಮತ್ತೂ ಹೆಚ್ಚು ಮೃದುವಾದ ಸ್ವರದಿಂದ, 'ನಾನು ಪರಮಸ್ವಾರ್ಥಪರ ನೆಂಬುದಕ್ಕೆ ಮತ್ತೊಂದು ದೃಷ್ಟಾಂತವನ್ನು ತೋರಿಸುವೆನು' ಎಂದು ಹೇಳಿದನು.

ಅಯಷೆಯು ಮಿಂಚಿನಿಂದೊಡಗೂಡಿದ ಮೇಘಸದೃಶವಾದ ಕಣ್ಣುಗಳಿಂದ ಉಸ್ಮಾನನನ್ನು ದೃಷ್ಟಿಸಿ ನೋಡಿದಳು. ಉಸ್ಮಾನನು ಹೇಳತೊಡಗಿದನು— 'ನಾನೆನ್ನ ಹೃದಯದಲ್ಲಿ ನಾಟಿರುವ ಆಶಾಲತೆಯನ್ನು ಜಲಸೇಚನಾದಿಗಳಿಲ್ಲದೆ ಮತ್ತೆಷ್ಟು ದಿನಗಳತನಕ ಸಂರಕ್ಷಿಸಿಕೊಂಡಿರಲಿ?' ಎಂದನು. ಅದನ್ನು ಕೇಳಿ ಅಯಷೆಯ ಮುಖಕಾಂತಿಯು ಗಂಭೀರಭಾವವನ್ನು ತಾಳಿತಲ್ಲದೆ ಹೆಚ್ಚು ಹೊಸ ಸೌಂದರ್ಯದಿಂದೊಡಗೂಡಿದವಳಾಗಿ, 'ಆ ವಿಚಾರವನ್ನು ಕುರಿತು ನಮ್ಮ ತಂದೆ ಯಲ್ಲಿ ಪ್ರಸ್ತಾಪಿಸು, ನಿನಗವನಾವದನ್ನಾದರೂ ಇಲ್ಲವೆಂದು ಹೇಳನು' ಎಂದಳು.

ಉಸ್ಮಾನ್—ನಾನು ಅಲ್ಲಿಯೂ ವಿಚಾರಮಾಡದೆ ಇಲ್ಲ.

ಅಯಷೆ—ಅವನೇನೆಂದನು?

ಉಸ್ಮಾನ್—ಅವರು, ನೀನಾರನ್ನು ವರಿಸುವಿಯೋ ಅಂತಹವನಿಗೆ ನಿನ್ನನ್ನು ಧಾರೆಯೆರಿಯಬೇಕೆಂದು ನಿಮ್ಮ ತಾಯಿಗೆ ವಾಗ್ದಾನಮಾಡಿರುವುದಾಗಿ ಹೇಳಿದರು. ಅದರಿಂದಿನವರೆಗೂ ನಿನ್ನ ಮನಸ್ಸನ್ನರಿಯಲಾರದವನಾಗಿದ್ದೇನೆ.

ಅಯಷೆಯು ಪುನಃ ಹರ್ಷೋತ್ಫುಲ್ಲವದನೆಯಾಗಿ, 'ಆವಾಗಾವ ಪುರುಷನು ನಾರಿಯ ಹೃದಯವನ್ನರಿತವನಾಗಿರುವನು?' ಎಂದಳು.

ಉಸ್ಮಾನ್—ಅದರಿಂದ ನಾನೇನೆಂದು ತಿಳಿದುಕೊಳ್ಳಲಿ?

ಅಯಷೆ—ನಿನ್ನನ್ನು ಪ್ರೀತಿಸುತ್ತೇನೆಂದು ತಿಳಿಯಬೇಕು.

ಉಸ್ಮಾನನ ಮುಖವು ಹರ್ಷದಿಂದ ವಿಕಸಿತವಾಗಿ, 'ನೀನು ವರಿಸಿದ ನಿನ್ನ ವಲ್ಲಭನೆಂದು ತಿಳಿಯಲೆ?' ಎಂಧನು,

ಆಯಿಷೆ—ನೀನು ನನ್ನ ಪ್ರಿಯತಮನಾದ ಸೋದರನೆಂದು ಪ್ರೀತಿಸುತ್ತಿರುವೆನು.

ಆ ಮಾತು ಕಿವಿಗೆ ಬೀಳುತಲೇ, ಉಸ್ಮಾನನ ಮುಖವು ಬಾಡಿ ಮಲಿನವಾಯಿತು—ಅವನು, 'ಅಯ್ಯೋ, ಸೃಷ್ಟಿಕರ್ತನೆ! ಇಷ್ಟು ದಿನಗಳಾದ ಬಳಿಕ ಈ ಮಾತೆ!!! ಹಾ! ಕುಸುಮಮಧ್ಯದಲ್ಲಿ ಪಾಷಾಣವಿಟ್ಟಂತೆ, ಅಂತಹ ಕುಸುಮಸಮನಾದ ದೇಹದಲ್ಲಿಂತಹ ಪಾಷಾಣಮಯವಾದ ಹೃದಯವನಿಟ್ಟೆ!' ಎಂದುಕೊಂಡು ಸಂಕಟದಿಂದ, ಆಯಿಷೆಯನ್ನವಳ ತಾಯಿಯ ಕೊಟಡಿಯ ಬಾಗಿಲವರೆಗೆ ಕರೆತಂದುಬಿಟ್ಟು ಹಿಂದಿರುಗಿ ಹೊರಟುಹೋದನು.

---

## ಮೂರನೆಯ ಪರಿಚ್ಛೇದ

### ನೀನು ತಿಲೋತ್ತಮೆಯಲ್ಲವೆ?

ಮರುದಿನ ಪ್ರದೋಷಕಾಲದಲ್ಲಿ ಜಗತ್ಸಿಂಹನು ಮಲಗಿದ್ದ ಕೊಟಡಿಯೊಳಗೆ ಆಯಿಷೆಯೂ, ಉಸ್ಮಾನನೂ, ವೈದ್ಯನೂ ನಿಶ್ಶಬ್ದವಾಗಿ ಕುಳಿತಿದ್ದರು. ಆಯಿಷೆಯು ಮಂಚದಮೇಲೆ ಸ್ವಹಸ್ತದಿಂದ ವ್ಯಜನವನ್ನು ಬೀಸುತ್ತಿದ್ದಳು. ವೈದ್ಯನು ಕ್ಷಣಕ್ಷಣಕ್ಕೆ ಜಗತ್ಸಿಂಹನ ನಾಡಿಯನ್ನು ಹಿಡಿದು ನೋಡುತಿದ್ದನು. ಜಗತ್ಸಿಂಹನು ಅಚೇತನನಾಗಿದ್ದನು. ವೈದ್ಯನು, ಅಂದು ರಾತ್ರಿ ಜ್ವರಬಿಡುವ ಸಮಯದಲ್ಲಿ ಪ್ರಾಯಶಃ ಜಗತ್ಸಿಂಹನಿಗೆ ಪ್ರಾಣಹೋಗುವ ಸಂಭವವೆಂತಲೂ, ಆ ವಿಷಮಕಾಲವು ಕಳೆದುಹೋದರೆ ಭಯವಿಲ್ಲದೆ ನಿಶ್ಚಿಂತೆಯಾಗಿ ಬದುಕುವನೆಂತಲೂ ಹೇಳಿದ್ದನು. ಜ್ವರಬಿಡುವ ಕಾಲವು ಸಮೀಪಿಸುತಿದ್ದಕಾರಣ, ಅಲ್ಲಿದ್ದವರೆಲ್ಲರೂ ಭಯಗ್ರಸ್ತರಾಗಿ ಉಸಿರನ್ನು ಬಿಡುವುದಕ್ಕೂ ಹೆದರುತ್ತ ಕುಳಿತಿದ್ದರು. ಚಿಕಿತ್ಸಕನು ಬಾರಿಬಾರಿಗೂ ನಾಡಿಯನ್ನು ಹಿಡಿದು ನೋಡುತ್ತ, 'ನಾಡಿಯು ದುರ್ಬಲವಾಯಿತು, ಹೆಚ್ಚು ದುರ್ಬಲವಾಯಿತು, ಸ್ವಲ್ಪ ಆಡುತ್ತದೆ' ಎಂದು ಮಂತ್ರಾಗಿ ಆಗಾಗ್ಗೆ ಮೆಲ್ಲನೆ ಹೇಳುತಿದ್ದನು. ಕಡೆಗೆ ವೈದ್ಯನು, ಮುಖ ಬಾಡಿದವನಾಗಿ, 'ಮೃತ್ಯುಕಾಲವು ಸಂಪ್ರಾಪ್ತವಾಯಿತು!' ಎಂದನು.

ಆಯಿಷೆಯೂ ಉಸ್ಮಾನನೂ ನಿಸ್ಪಂದನಯನರಾಗಿ ಕೇಳುತ್ತಿದ್ದರು. ಪಂಡಿತನು ನಾಡಿಯನ್ನು ಹಿಡಿದಿದ್ದನು.

ಕೆಲವು ನಿಮಿಷಗಳಾದ ಬಳಿಕ ವೈದ್ಯನು, 'ನಾಡಿಯ ಗತಿಯು ಮಂದವಾಯಿತು!' ಎಂದನು. ಆಯಿಷೆಯ ಮುಖವು ಹೆಚ್ಚು ಮ್ಲಾನವಾಯಿತು. ಹಟಾತ್ತಾಗಿ ಜಗತ್ಸಿಂಹನ ಮುಖವು ವಿಕಾರವಾಗಿ ಬೆಳ್ಳಗಾಗುತ ಬಂದಿತು. ಕೈಗಳು ದೃಢಮುಷ್ಟಿಯಾಗಿ ಸೇದಿಕೊಂಡವು. ಕಣ್ಣುಗಳು ತಿರುಗಿದವು. ಆಯಿಷೆಯು

'ಕೃತಾಂತನ ಪೂರ್ಣಗ್ರಾಸವಾಯಿತು! ಹೆಚ್ಚು ವಿಳಂಬವಿಲ್ಲ' ಎಂದು ತಿಳಿದಳು. ಆಗ ವೈದ್ಯನು ಕೈಯಲ್ಲಿ ಔಷಧಪಾತ್ರೆಯನ್ನು ಸಿದ್ಧವಾಗಿ ಹಿಡಿದಿದ್ದವನಾ ಲಕ್ಷಣಗಳನ್ನು ಕಂಡೊಡನೆ ಕೈಯಿಂದ ರೋಗಿಯ ಬಾಯನ್ನು ತೆರೆದು ಪಾತ್ರೆಯಲ್ಲಿದ್ದ ಔಷಧವನ್ನು ಕುಡಿಸಿದನು. ಅರ್ಧ ಔಷಧವು ಹೊರಗೆ ಚಲ್ಲಿ ಸ್ವಲ್ಪ ಮಟ್ಟಿಗೆ ಹೊಟ್ಟೆಗೆ ಹೋಯಿತು. ಔಷಧವು ಹೊಟ್ಟೆಗೆ ಹೋದಬಳಿಕ ರೋಗಿಯ ರೋಗದ ಚಿಹ್ನೆಗಳು ಬದಲಾಯಿಸುತ್ತ ಬಂದುವು. ವಿಕಟಾಕಾರವು ಹೋಗಿ ಮುಖವು ಶಾಂತಸ್ವಭಾವವುಳ್ಳದುದಾಯಿತು. ಶ್ವೇತವರ್ಣವು ತಿರುಗಿ ಕ್ರಮವಾಗಿ ರಕ್ತಸಂಚಾರವುಂಟಾಯಿತು. ಕೈಗಳ ಬದ್ಧಮುಷ್ಟಿಯು ವಿಮೋಚನವಾಯಿತು. ಕಣ್ಣುಗಳು, ದೃಷ್ಟಿಯು ಸರಿಯಾಗಿ ಪುನಃ ಕೋಮಲ ವಿಕಾಸವನ್ನು ಹೊಂದಿದುವು. ಪಂಡಿತನು ತದೇಕಾಯತ್ತಚಿತ್ತನಾಗಿ ಅನೇಕ ನಿಮಿಷಗಳು ನಾಡಿಯನ್ನು ಕಿವಿಗೊಟ್ಟು ಪರೀಕ್ಷಿಸಿ ಬಳಿಕ, 'ದೇವರ ದಯೆಯಿಂದಿನ್ನು ಭಯವಿಲ್ಲ, ಕಾಲಕ್ರಮೇಣ ಆರೋಗ್ಯವಾಗುವುದು' ಎಂದು ಸಂತೋಷಿತನಾಗಿ ಹೆಕ್ಕಳದಿಂದ ಹೇಳಿದನು.

ಉಸ್ಮಾನನು 'ಜ್ವರಬಿಟ್ಟಿತೆ?' ಎಂದು ಕೇಳಿದನು.

ಭಿಷಕನು, ಬಿಟ್ಟಿತೆಂದನು.

ಆಯಿಷೆಯೂ ಉಸ್ಮಾನನೂ ಹೃಷ್ಟಚಿತ್ತರಾದರು; ವೈದ್ಯನು, 'ಮತ್ತೇನೂ ಭಯವಿಲ್ಲ; ನಾನಿನ್ನಿಲ್ಲಿದ್ದು ಪ್ರಯೋಜನವಿಲ್ಲ; ಔಷಧವನ್ನು ರಾತ್ರಿ ಎರಡನೆಯ ಝಾಮದವರೆಗೂ ಆಗಾಗ್ಗೆ ಕೊಡುತಿರಬೇಕು' ಎಂದು ಹೇಳಿ, ಕೆಲವು ಔಷಧಗಳನ್ನು ಕೊಟ್ಟು ಹೊರಟುಹೋದನು. ಉಸ್ಮಾನನು ಎರಡು ಮೂರು ಘಂಟೆಯ ಹೊತ್ತು ಕುಳಿತಿದ್ದವನು ಬಳಿಕ ತನ್ನ ಮನೆಗೆ ಹೊರಟುಹೋದನು—ಆಯಿಷೆಯು ಮೊದಲಿನಂತೆ ಮಂಚದಮೇಲೆ ಕುಳಿತಿದ್ದು ಔಷಧಾದಿಗಳನ್ನು ಸೇವನೆಮಾಡಿಸುವುದರಲ್ಲಿ ಅವಿರತಳಾಗಿದ್ದಳು.

ರಾತ್ರಿ ಎರಡನೆಯ ಝಾಮಕ್ಕೆ ತುಸು ಮುಂದಾಗಿ ರಾಜಕುಮಾರನ ನಯನೋನ್ಮೀಲನವಾಯಿತು. ಆಯಿಷೆಯ ಕೋಮಲವಾದ ಪ್ರಫುಲ್ಲ ಮುಖಕಮಲವು ಮೊದಲವನ ದೃಷ್ಟಿಗೆ ಬಿದ್ದಿತು. ಆಯಿಷೆಯು ಅವನ ಕಟಾಕ್ಷದ ಭಾವವನ್ನು ನೋಡಿ, ಅವನಿಗೆ ಬುದ್ಧಿಭ್ರಮೆಯುಂಟಾಗಿ, ಆವದನ್ನೋ ಸ್ಮರಿಸಿಕೊಳ್ಳುವುದರಲ್ಲಿ ಪ್ರಯತ್ನವು ವಿಫಲವಾದುದಕ್ಕೆ ಸಲುವಾಗಿ, ಸಂಕಟಪಡುತಿದ್ದನೆಂದು ತಿಳಿದಳು. ಜಗತ್ಸಿಂಹನು ಸ್ವಲ್ಪ ಹೊತ್ತಾದ ಬಳಿಕ ಆಯಿಷೆಯನ್ನು ಕುರಿತು, "ನಾನೆಲ್ಲಿದ್ದೇನೆ?" ಎಂದು ಕೇಳಿದನು.

ಆಯಿಷೆಯು, "ಕತಲೂಖಾನನ ದುರ್ಗದಲ್ಲಿರುವಿರಿ" ಎಂದಳು. ರಾಜಕುಮಾರನು, ಪುನಃ ಏನನ್ನೋ ಜ್ಞಾಪಿಸಿಕೊಂಡು, "ನಾನಿಲ್ಲೇಕೆ ಬಂದೆನು?" ಎಂದನು.

ಆಯಿಷೆಯು ಸ್ವಲ್ಪಹೊತ್ತು ನಿರುತ್ತರಳಾಗಿದ್ದು, ಒಳಿಕ, "ತಾವು ರೋಗ ಪೀಡಿತರಾಗಿದ್ದೀರಿ" ಎಂದಳು.

ರಾಜಕುಮಾರನು ಸ್ವಲ್ಪ ಯೋಚಿಸಿ, ತಲೆಯನ್ನಲ್ಲಾಡಿಸುತ್ತ, "ಇಲ್ಲಾ, ನಾನಿಲ್ಲಿ ಬಂದಿಯಾಗಿ ಸೆರೆಯಲ್ಲಿದ್ದೇನೆ" ಎಂದನು. ಹಾಗೆ ಹೇಳುವಾಗ ಅವನ ಮುಖದಲ್ಲೇನೋ ಭಾವೋದಯವಾಗಿದ್ದಂತೆ ತೋರಿತು.

ಆಯಿಷೆಯು ಸುಮ್ಮನಿದ್ದು, ಅವನ ಜ್ಞಾಪಕಶಕ್ತಿಯು ಪುನರುದ್ದೀಪ್ತ ವಾಗಿರುವುದೆಂದು ತಿಳಿದಳು.

ಕ್ಷಣೈಕಪರದಲ್ಲಿ ರಾಜಕುಮಾರನು, 'ನೀನಾರು?' ಎಂದು ಕೇಳಿದನು.

ಆಯಿಷೆಯು, "ನಾನು ಆಯಿಷೆ" ಎಂದಳು.

ರಾಜಕುಮಾರ—ಆಯಿಷೆಯೆನ್ನುವಳಾರು?

ಆಯಿಷೆ—ಕತಲೂಖಾನನ ಮಗಳು.

ರಾಜಕುಮಾರನು ಹೆಚ್ಚು ಮಾತನಾಡಲಾರದೆ ಸ್ವಲ್ಪಹೊತ್ತು ನಿಸ್ತಬ್ಧ ನಾಗಿದ್ದು ಬಳಿಕ, 'ಎಷ್ಟು ದಿನಗಳಿಂದಿದ್ದೇನೆ' ಎಂದು ಕೇಳಿದನು.

ಆಯಿಷೆ—ನಾಲ್ಕು ದಿನಗಳಿಂದ.

ರಾಜಕುಮಾರ—ಮಂದಾರಣದುರ್ಗವಿನ್ನೂ ನಿಮ್ಮ ವಶದಲ್ಲಿದೆಯೆ?

ಆಯಿಷೆ—ಇದೆ.

ರಾಜಕುಮಾರ—(ಸ್ವಲ್ಪ ವಿಶ್ರಾಮವನ್ನು ತೆಗೆದುಕೊಂಡು) ವೀರೇಂದ್ರಸಿಂಹ ನೇನಾದನು?

ಆಯಿಷೆ—ವೀರೇಂದ್ರಸಿಂಹನು ಸೆರೆಯಲ್ಲಿದ್ದಾನೆ, ಇಂದವನ ವಿಚಾರಣೆ.

ಅದನ್ನು ಕೇಳಿ ಜಗತ್ಸಿಂಹನ ಮುಖವು ಪೂರ್ವಾಪೇಕ್ಷೆ ಹೆಚ್ಚು ಬಳಲಿತು. ಪುನಃ ಆಯಿಷೆಯನ್ನು ಕುರಿತು, 'ಅವನ ಅರಮನೆಯಲ್ಲಿದ್ದವರ ಗತಿಯೇನಾ ಯಿತು?' ಎಂದು ಕೇಳಲು; ಆಯಿಷೆಯು ಉದ್ವಿಗ್ನಚಿತ್ತಳಾಗಿ, 'ಆ ವಿಚಾರ ವೆನಗೆ ತಿಳಿಯದು' ಎಂದಳು.

ರಾಜಕುಮಾರನು ಅಸ್ಫುಟವಾಗಿ ಏನೇನನ್ನೋ ಹೇಳಿಕೊಂಡುದುದರಲ್ಲಿ 'ತಿಲೋತ್ತಮೆ' ಎಂಬೊಂದು ಮಾತು ಆಯಿಷೆಗೆ ಕೇಳಿಬಂದಿತು.

ವೈದ್ಯನು ಕೊಟ್ಟಿದ್ದ ಸುಸ್ವಾದು ಔಷಧವನ್ನು ತರಲು ಆಯಿಷೆಯು ಎದ್ದು ಹೊರಟಳು. ರಾಜಕುಮಾರನಾಗಪಳಾ ದೋಧೂಯಮಾನವಾದ ಕರ್ಣಾಭರಣ ಸಂಯುಕ್ತ ಕಪೋಲವನ್ನೂ ಅವಳಾ ಅತಿಸೌಂದರ್ಯವಾದ ದೇಹಕಾಂತಿಯನ್ನೂ ಅನಿಮಿಷನಯನನಾಗಿ ನೋಡುತ್ತಿದ್ದನು. ಆಯಿಷೆಯು ಔಷಧವನ್ನು ತಂದು ರಾಜಪುತ್ರನಿಗೆ ಕುಡಿಸಿದಳು.

ರಾಜಪುತ್ರನು ಔಷಧವನ್ನು ಕುಡಿದು, 'ರೋಗದಿಂದಚೇತನನಾಗಿದ್ದಾ ಗಾವಳೋ ಸ್ವರ್ಗಲೋಕದ ದೇವಕನ್ಯೆಯೊಬ್ಬಳು ನನ್ನ ಪಾರ್ಶ್ವದಲ್ಲಿ ಕುಳಿತು

ಶುಶ್ರೂಷೆಯನ್ನು ಮಾಡುತ್ತಿದ್ದಂತೆ ಸ್ವಪ್ನವನ್ನು ಕಂಡೆನು; ನೀನವಳಲ್ಲವೆ? ನಿನ್ನ ಹೆಸರಾ ತಿಲೋತ್ತಮೆಯಲ್ಲವೆ?' ಎಂದನು.

ಆಯೇಷೆಯು, 'ನಿನಗೆ ತಿಲೋತ್ತಮೆಯ ಸ್ವಪ್ನವಾಗಿರಬಹುದು' ಎಂದಳು.

---

## ನಾಲ್ಕನೆಯ ಪರಿಚ್ಛೇದ

### ಅವಕುಂಠನವತಿ

ದುರ್ಗವು ಜಯವಾದ ಒಂದೆರಡು ದಿನಗಳಮೇಲೆ ಒಂದಾನೊಂದು ದಿನ ಮಧ್ಯಾಹ್ನದ ಸಮಯದಲ್ಲಿ ಕತಲೂಖಾನನು ತನ್ನ ಅರಮನೆಯಲ್ಲಿ ದರ್ಬಾರನ್ನು ಮಾಡಿಕೊಂಡು ಕುಳಿತಿದ್ದನು. ಉಭಯ ಪಾರ್ಶ್ವಗಳಲ್ಲಿಯೂ ಶ್ರೇಣೀಬದ್ಧರಾಗಿ ಪಾರಿಷದ್ವರ್ಗದವರು ನಿಂತಿದ್ದರು. ಎದುರಿಗಿದ್ದ ಚೌಕದಲ್ಲಿ ಅನೇಕ ಸಹಸ್ರ ಜನರು ನಿಶ್ಶಬ್ದವಾಗಿ ನಮ್ರಭಾವದಿಂದ ನಿಂತಿದ್ದರು. ವೀರೇಂದ್ರ ಸಿಂಹನ ವಿಚಾರಣೆಗೆದು ಗೊತ್ತಾಗಿದ್ದ ದಿನವಾಗಿದ್ದಿತು.

ಕೆಲವು ಶಸ್ತ್ರಪಾಣಿಗಳಾದ ಪಹರೇದವರು ಶೃಂಖಲಾಬದ್ಧನಾಗಿದ್ದ ವೀರೇಂದ್ರ ಸಿಂಹನನ್ನು ದರ್ಬಾರಿನೆದುರಿಗೆ ಕರೆತಂದು ನಿಲ್ಲಿಸಿದರು. ವೀರೇಂದ್ರಸಿಂಹನ ಮುಖವು ರಕ್ತಿಮಾಪೂರ್ಣವಾಗಿದ್ದರೂ ಭೀತಿಚಿಹ್ನೆಗಳದರಲ್ಲಿ ಅಣುಮಾತ್ರವೂ ಕಂಡುಬರುತಿರಲಿಲ್ಲ; ತೇಜಃಪುಂಜವಾದವನ ಕಣ್ಣುಗಳಿಂದ ಅಗ್ನಿಕಣಗಳು ಸುರಿಯುತಿದ್ದವು; ನಾಸಿಕಾರಂಧ್ರವು ವರ್ಧಿತಾಯತನವಾಗಿ ಕಂಪಿತವಾಗು ತಿದ್ದಿತು; ಹಲ್ಲುಗಳಿಂದ ಅಧರದಂಶನವನ್ನು ಮಾಡುತಿದ್ದನು. ಕತಲೂಖಾನನು ವೀರೇಂದ್ರಸಿಂಹನನ್ನು ಕುರಿತು, 'ವೀರೇಂದ್ರಸಿಂಹ! ನಿನ್ನಪರಾಧವನ್ನು ಕುರಿತು ವಿಚಾರಮಾಡುವೆನು; ನೀನೆನಗೇಕೆ ವಿರುದ್ಧಾಚಾರಿಯಾದೆ?' ಎಂದು ಕೇಳಿದನು.

ವೀರೇಂದ್ರಸಿಂಹನು ತನ್ನ ಲೋಹಿತಮೂರ್ತಿಯಿಂದ ಪ್ರಕಟಿತವಾದ ಕ್ರೋಧ ವನ್ನಡಗಿಸಿಕೊಂಡು, 'ನಿನಗೆ ವಿರುದ್ಧವಾಗಿ ಮಾಡಿರುವ ಕೆಲಸವಾವದು? ಮೊದ ಲದನ್ನೆನಗೆ ಹೇಳು' ಎಂದನು.

ಅಲ್ಲಿದ್ದ ದರ್ಬಾರಿನವನೊಬ್ಬನು, 'ಅದಬಿನಿಂದ ಮಾತನಾಡು' ಎಂದೆಚ್ಚರಿ ಸಿದನು.

ಕತಲೂಖಾನನು, 'ಆವ ನಿಮಿತ್ತವಾಗಿ ನನ್ನ ಅಪ್ಪಣೆಯಂತೆ ಹಣವನ್ನೂ ಸೇನೆಯನ್ನೂ ಕಳುಹಿಸಲಸಮ್ಮತನಾದೆ?' ಎಂದನು.

ವೀರೇಂದ್ರಸಿಂಹನು ನಿರ್ಭಯನಾಗಿ, 'ನೀನು ರಾಜವಿದ್ರೋಹಿ, ದಸ್ಯು, ನಿನಗೆ ದ್ರವ್ಯವನ್ನು ಕೊಡಲೇಕೆ? ನಿನಗೆ ಸೈನ್ಯವನ್ನು ಕೊಡಲೇಕೆ?' ಎಂದನು.

ನೋಡುತಿದ್ದವರೆಲ್ಲರೂ, ತನ್ನ ತಲೆಯನ್ನು ತಾನೇ ಛೇದಿಸಿಕೊಳ್ಳಲುದ್ಯುಕ್ತ ನಾಗಿದ್ದಾನೆಂದೆಂದುಕೊಂಡರು.

ಕತಲೂಖಾನನು ಕ್ರೋಧದಿಂದ ಕಂಪಿತ ಕಳೇಬರನಾದನು. ಆದರೆ ಕ್ರೋಧವನ್ನು ಸಂವರಣಮಾಡುವದನಸಿಗೆ ಅಭ್ಯಾಸಸಿದ್ಧವಾಗಿದ್ದುದರಿಂದ ಸ್ಥಿರ ಭಾವವನ್ನು ತಾಳಿ, 'ನೀನು ನಮ್ಮ ಅಧಿಕಾರದಲ್ಲಿದ್ದು ಮೊಗಲರ ಪಕ್ಷವನ್ನು ವಹಿಸಿದೇಕೆ?' ಎಂದು ಕೇಳಿದನು.

ವೀರೇಂದ್ರ—ನಿನಗೆ ಅಧಿಕಾರವೆಲ್ಲಿಯದು?

ಕತಲೂಖಾನನು ಹೆಚ್ಚು ಕ್ರೋಧಾನ್ವಿತನಾಗಿ, 'ಎಲೈ ನೀಚ, ದುರಾತ್ಮನೆ! ನಿನ್ನ ನಿಜಕರ್ಮೋಚಿತವಾದ ಫಲವನ್ನನುಭವಿಸುವೆ; ನೀನೀಗಲೂ ಪ್ರಾಣದಿಂದಿರ ಬಹುದಾಗಿದ್ದಿತು; ಆದರೆ ನೀನು ನಿರ್ಬೋಧನನು; ನಿನ್ನ ಗರ್ವವೇ ನಿನಗೆ ಶತ್ರುವಾಗಿ ನಿನ್ನ ಮರಣಕ್ಕೆ ಕಾರಣವಾಗಿದೆ' ಎಂದನು.

ವೀರೇಂದ್ರಸಿಂಹನು ಗರ್ವದಿಂದ ನಕ್ಕು, 'ಕತಲೂಖಾನ್! ನಾನು ಯಾವಾಗ ನಿನ್ನೆದುರಿಗೆ ಶೃಂಖಲಾಬದ್ಧನಾಗಿ ಬಂದೆನೋ ಆಗಲೇ ನಿನ್ನ ದಯೆಯುಂಟಾಗುವುದೆಂಬ ದುರಾಶೆಯನ್ನು ಮರೆತೆನು; ನಿನ್ನಂತಹ ಶತ್ರುವಿನ ದಯೆಯಿಂದ ಪ್ರಾಣವನ್ನುಳಿಸಿಕೊಳ್ಳುವುದರಿಂದೇನು ಪ್ರಯೋಜನ? ನೀನೆನ್ನ ಪ್ರಾಣವಧೆಯನ್ನು ಮಾಡಿ ಅಷ್ಟರಲ್ಲಿಯೇ ತೃಪ್ತನಾದರೆ, ನಿನ್ನನ್ನಾಶೀರ್ವದಿಸಿ ಸಂತೋಷದಿಂದ ಪ್ರಾಣತ್ಯಾಗವನ್ನು ಮಾಡುವೆನು; ಆದರೆ ನೀನು ಪವಿತ್ರವಾದೆನ್ನ ಕುಲವನ್ನು ಕಳಂಕಮಾಡಿದೆ; ನೀನು ನನ್ನ ಪ್ರಾಣಕ್ಕಿಂತಲೂ ಅಧಿಕವಾದ ಪ್ರಾಣವನ್ನು'—ಎಂದು ಹೇಳುವುದರಲ್ಲಿ, ವೀರೇಂದ್ರನಿಗೆ ಮುಂದೆ ಮಾತು ಸಾಗದೆ ಕಂಠರೋಧವಾಯಿತು; ಸ್ವರವು ಗದ್ಗದವಾಗಿ ಲೋಚನಗಳು ಬಾಷ್ಪಾಕುಲವಾದುವು. ಗರ್ವಿತನಾಗಿ ನಿರ್ಭೀಕನಾಗಿದ್ದಾ ವೀರೇಂದ್ರಸಿಂಹನು ಅಧೋವದನನಾಗಿ ಮಗುವಿನಂತೆ ರೋದನ ಮಾಡಿದನು.

ಕತಲೂಖಾನನು ಸ್ವಭಾವತಃ ಅತ್ಯಂತ ಕಾಠಿಣ್ಯಹೃದಯನು. ಪರರ ದುಃಖದಲ್ಲುಲ್ಲಾಸವುಳ್ಳವನಾಗಿದ್ದುದರಿಂದ, ದರ್ಪಿತನಾದ ತನ್ನಾ ಶತ್ರುವಿನ ಅವಸ್ಥೆಯನ್ನು ನೋಡಿ ಹರ್ಷೋತ್ಫುಲ್ಲನಯನನಾಗಿ, 'ವೀರೇಂದ್ರಸಿಂಹ! ನೀನೆನ್ನಲ್ಲೇನೂ ಕೇಳಿಕೊಳ್ಳುವುದಿಲ್ಲನೆ? ನಿನಗೆ ಕಾಲವು ಸಮೀಪಿಸಿತು, ವಿವೇಚನೆಯನ್ನು ಮಾಡಿನೋಡು' ಎಂದನು.

ವೀರೇಂದ್ರಸಿಂಹನ ಹೃದಯವನ್ನು ದಗ್ಧಮಾಡುತಿದ್ದ ಸಂತಾಪಾಗ್ನಿಯು ರೋದನದಿಂದ ಸ್ವಲ್ಪ ಶಮನವಾಗಿ, ಪೂರ್ವಾಪೇಕ್ಷ ಸ್ಥಿರಭಾವದೊಡನೆ, 'ನಾನು ಮತ್ತೇನನ್ನೂ ಕೇಳಿಕೊಳ್ಳತಕ್ಕುದಿಲ್ಲ; ನನ್ನ ಪ್ರಾರ್ಥನೆಯೇನೆಂದರೆ—ನನ್ನ ವಧೆ ಕಾರ್ಯವನ್ನು ಶೀಘ್ರವಾಗಿ ಪೂರ್ತಿಗೊಳಿಸು' ಎಂದನು.

ಕತಲೂಖಾನ್—ಅದಾಗುವುದು, ಮತ್ತಾವುದು?

ಉತ್ತರ—ಈ ಜನ್ಮದಲ್ಲಿ ಮತ್ತಾವುದೂ ಇಲ್ಲ.

ಕತಲೂಖಾನ್—ಮರಣಕಾಲದಲ್ಲಿ ನಿನ್ನ ಮಗಳನ್ನು ನೋಡುವುದಿಲ್ಲವೆ?

ಪ್ರಶ್ನೆಯನ್ನು ಕೇಳಿ ಅಲ್ಲಿದ್ದ ಜನರೆಲ್ಲರೂ ಪರಿತಾಪದಿಂದ ನಿಶ್ಶಬ್ದ ವಾಗಿದ್ದರು.

ವೀರೇಂದ್ರನ ಕಣ್ಣುಗಳಲ್ಲಿ ಉಜ್ವಲಾಗ್ನಿಯು ಪ್ರಜ್ವಲಿಸಿ, 'ನಿನ್ನ ಗೃಹದಲ್ಲೆನ್ನ ಮಗಳು ಜೀವಿತಳಾಗಿದ್ದರೆ ನಾನು ನೋಡಲಾರೆನು, ಮೃತಳಾಗಿದ್ದರವಳ ದೇಹವನ್ನು ತರಿಸು, ಮುದ್ದಿಟ್ಟುಕೊಂಡು ಪ್ರಾಣವನ್ನು ಬಿಡುವೆನು' ಎಂದನು.

ಅದನ್ನು ಕೇಳಿ, ಅಲ್ಲಿ ನೆರೆದಿದ್ದ ಅಸಂಖ್ಯಾಕ ಜನರೆಲ್ಲರೂ, ನೆಲದಮೇಲೊಂದು ಸೂಜಿ ಬಿದ್ದರದರ ಶಬ್ದವನ್ನು ಕೇಳಬಹುದಾದಂತೆ ನಿಶ್ಶಬ್ದವಾಗಿ ನಿಸ್ತಬ್ಧರಾಗಿದ್ದರು.

ಕತಲೂಖಾನನ ಇಙ್ಗಿತೆಯನ್ನು ತಿಳಿದು, ಪಹರೇದವರು ವೀರೇಂದ್ರಸಿಂಹನನ್ನು ವಧ್ಯಭೂಮಿಗೆ ಕೊಂಡೊಯ್ದರು. ವೀರೇಂದ್ರನಲ್ಲಿಗೆ ಕರೆತರಲ್ಪಡುವುದರೊಳಗೆ ಮುಸಲ್ಮಾನನೊಬ್ಬನು ಬಂದು ವೀರೇಂದ್ರನ ಕಿವಿಯಲ್ಲೇನನ್ನೋ ಹೇಳಿದನು. ವೀರೇಂದ್ರನಿಗದು ಗೊತ್ತಾಗಲಿಲ್ಲ. ಮುಸಲ್ಮಾನನು ತನ್ನ ಕೈಲಿದ್ದೊಂದು ಕಾಗದವನ್ನು ವೀರೇಂದ್ರನ ಕೈಯಲ್ಲಿ ಕೊಟ್ಟನು. ವೀರೇಂದ್ರನು ಅನ್ಯಮನಸ್ಕನಾಗಿ ಕಾಗದವನ್ನು ಬಿಚ್ಚಿ ನೋಡಲಾಗದು ವಿಮಲೆಯ ಹಸ್ತಾಕ್ಷರವಾಗಿದ್ದಿತು. ವೀರೇಂದ್ರನದನ್ನು ನೋಡಿ, ಅತ್ಯಂತ ವಿರಕ್ತನಾಗಿ ಕಾಗದವನ್ನು ಮುದುಡಿ ಎಸುಟುಬಿಟ್ಟನು. ಪತ್ರವಾಹಕನಾ ಬಿದ್ದಿದ್ದ ಪತ್ರವನ್ನು ತೆಗೆದುಕೊಂಡನು. ಹತ್ತಿರ ನೋಡುತ್ತಿದ್ದವರಲ್ಲೊಬ್ಬನು ತನ್ನ ಪಕ್ಕದಲ್ಲಿದ್ದ ಮತ್ತೊಬ್ಬನನ್ನು ಕುರಿತು ಅನುಚ್ಚ ಸ್ವರದಿಂದ, 'ಮಗಳ ಕಾಗದವೆಂದು ತೋರುತ್ತದೆಯಲ್ಲವೆ?' ಎಂದನು.

ಆ ಮಾತು ವೀರೇಂದ್ರನ ಕಿವಿಗೆ ಬಿದ್ದಿತು. ಆಗಲವನು ಶಬ್ದವು ಬಂದಕಡೆಗೆ ಮುಖವನ್ನು ತಿರುಗಿಸಿಕೊಂಡು, 'ನನಗೆ ಮಗಳೆಂದು ಹೇಳುವವರಾರು? ನನಗೆ ಮಗಳಿಲ್ಲ' ಎಂದನು.

ಪತ್ರವಾಹಕನು ಪತ್ರವನ್ನು ತೆಗೆದುಕೊಂಡು ಹೋಗುತ್ತಾ ಪಹರೇದವನನ್ನು ಕುರಿತು, ತಾನು ಹಿಂದಿರುಗಿ ಬರುವತನಕ ತಡೆಮಾಡೆಂದು ಹೇಳಿದನು. ಪಹರೇದವನು, 'ಅಪ್ಪಣೆಪ್ರಕಾರ'ವೆಂದು ಹೇಳಿದನು.

ಕಾಗದವನ್ನು ತಂದವನು ಉದಾರಮನಸ್ಕನಾದ ಉಸ್ಮಾನ್‌ಖಾನನಾಗಿದ್ದನು.

ಉಸ್ಮಾನನು ಕಾಗದವನ್ನು ತೆಗೆದುಕೊಂಡು, ಅಂತಃಪುರದ ತಳಹದಿಯ ಗೋಡೆಯ ಬಳಿಗೆ ಹೋದನು. ಅಲ್ಲೊಂದು ವಕುಳವೃಕ್ಷದ ಮರೆಯಲೊಬ್ಬ ಅವಕುಂಠನವತಿಯಾದ ಹೆಂಗಸು ನಿಂತಿದ್ದಳು. ಉಸ್ಮಾನನು ಅವಳ ಬಳಿ ಹೋಗಿ, ನಾಲ್ಕೂಕಡೆ ನೋಡಿ, ನಡೆದುದನೆಲ್ಲಾ ವಿವರವಾಗಿ ಅವಳಿಗೆ ತಿಳುಹಿದನು. ಅವಕುಂಠನವತಿಯು, 'ತಮಗೆ ಶ್ರಮಕೊಟ್ಟಂತಾಯಿತು; ಆದರೆ ತಮ್ಮಿಂದಲೇ

ನಮಗೀ ದೆಶೆಯುಂಟಾಯಿತು; ನೀವೀ ಕೆಲಸವನ್ನು ಮಾಡಿಕೊಡಬೇಕು ಎಂದಳು.

ಉಸ್ಮಾನನು ನಿಸ್ತಬ್ಧನಾಗಿ ನಿಂತನು.

ಅವಕುಂಠನವತಿಯು ಮನಃಕ್ಲೇಶವನ್ನನುಭವಿಸುತ್ತಾ ಕಂಪಿತ ಸ್ವರದಿಂದ, 'ನೀವೀ ಕೆಲಸವನ್ನು ಮಾಡದಿದ್ದರೆ, ನಾನು ಅನಾಥಳು, ದೇವರು ನೋಡಿಕೊಳ್ಳಲಿ!' ಎಂದಳು.

ಉಸ್ಮಾನ್‌ಖಾನ್—ತಾಯೆ! ನೀನರಿಯೆ, ಅದು ಬಹಳ ಅಪಾಯವಾದ ಕೆಲಸವಾಗಿದೆ; ಕತಲೂಖಾನನಿಗೆ ತಿಳಿದರೆ ನನಗವನು ಪ್ರಾಣಾಂತ ದಂಡನೆಯನ್ನು ವಿಧಿಸುವನು.

ಹೆಂಗಸು—ಕತಲೂಖಾನನೆ! ನನಗೇಕೆ ವಂಚಿಸುವಿರಿ? ಕತಲೂಖಾನನು ನಿಮ್ಮನ್ನಾವ ವಿಧವಾಗಿಯೂ ಘಾತಿಸನು.

ಉಸ್ಮಾನನು, 'ನೀನು ಕತಲೂಖಾನನನ್ನರಿಯೆ; ಆದರೂ ಚಿಂತಿಲ್ಲ, ನಡಿ, ನಿನ್ನನ್ನು ವಧ್ಯಭೂಮಿಗೆ ಕರೆದುಕೊಂಡು ಹೋಗುವೆನು' ಎಂದನು.

ಅದೇ ಪ್ರಕಾರ ಅವಕುಂಠನವತಿಯು ಉಸ್ಮಾನನ ಹಿಂದೆ ವಧ್ಯಭೂಮಿಗೆ ಹೋಗಿ ಅಲ್ಲಿ ನಿಸ್ತಬ್ಧಳಾಗಿ ನಿಂತುಕೊಂಡಳು. ವೀರೇಂದ್ರಸಿಂಹನು ಅವಳನ್ನು ನೋಡದೆ ಭಿಕ್ಷುಕವೇಷಧಾರಿಯಾದೊಬ್ಬ ಬ್ರಾಹ್ಮಣನ ಸಂಗಡ ಮಾತನಾಡುತಿದ್ದನು. ಅವಕುಂಠನವತಿಯು, ಮುಖಾವರಣದೊಳಗಿಂದಲೇ ನೋಡಿ ಭಿಕ್ಷುಕವೇಷಧಾರಿಯನ್ನು ಅಭಿರಾಮಸ್ವಾಮಿಯೆಂದು ಗುರುತಿಸಿದಳು.

ವೀರೇಂದ್ರಸಿಂಹನು ಅಭಿರಾಮಸ್ವಾಮಿಯನ್ನು ಕುರಿತು, 'ಗುರುದೇವ! ಹಾಗಾದರೆ, ಅಪ್ಪಣೆಯನ್ನು ತೆಗೆದುಕೊಳ್ಳುತ್ತೇನೆ; ತಮಗೆ ಮತ್ತೇನನ್ನು ಹೇಳಲಿ? ಇಹದಲ್ಲೆನಗೆ ಮತ್ತಾವುದೂ ಪ್ರಾರ್ಥನೀಯವಾದುದಿಲ್ಲ, ಆರಿಗೆ ಸಲುವಾಗಿ ಪ್ರಾರ್ಥಿಸಲಿ?' ಎಂದನು.

ಅಭಿರಾಮಸ್ವಾಮಿಯು ವೀರೇಂದ್ರನಿಗೆ ಹಿಂದೆ ನಿಂತಿದ್ದ ಅವಕುಂಠನವತಿಯನ್ನು ಕೈಯಿಂದ ತೋರಿದನು. ವೀರೇಂದ್ರನತ್ತಕಡೆ ಮುಖವನ್ನು ತಿರುಗಿಸಲಾ ರಮಣಿಯು ಅವಕುಂಠನವನ್ನು ತೆಗೆದುಹಾಕಿ, ವೀರೇಂದ್ರನ ಶೃಂಖಲಾಬದ್ಧವಾಗಿದ್ದ ಪಾದತಲದಲ್ಲಿ ಬಿದ್ದಳು. ವೀರೇಂದ್ರನು ಗದ್ಗದ ಸ್ವರದಿಂದ, 'ವಿಮಲೆ!' ಎಂದು ಕೂಗಿದನು.

ವಿಮಲೆಯು, 'ಸ್ವಾಮಿನ್! ಪ್ರಭೋ! ಪ್ರಾಣೇಶ!' ಎಂದು ಹೇಳುತ್ತಾ ಉನ್ಮಾದಿನಿಯಂತೆ ಅಧಿಕತರ ಉಚ್ಚ ಸ್ವರದಿಂದ, 'ನಾನೀಗ ಪ್ರಪಂಚಕ್ಕೆಲ್ಲಾ ಹೇಳುತ್ತೇನೆ, ನನ್ನನ್ನಾರೂ ಅಡ್ಡಿಮಾಡರು, ಸ್ವಾಮಿ! ನನ್ನ ಕಂಠರತ್ನವೆ! ಎಲ್ಲಿಗೆ ಹೋಗುತ್ತಿ! ನಮ್ಮನ್ನೆಲ್ಲಿ ಬಿಟ್ಟು ಹೋಗುತ್ತಿ!' ಎಂದು ರೋದನ ಮಾಡಿದಳು.

ವೀರೇಂದ್ರನ ಕಣ್ಣುಗಳಲ್ಲಿ ಅನರ್ಗಳ ಅಶ್ರುಧಾರೆಯು ಸುರಿಯಲಾರಂಭವಾಗಿ, ವಿಮಲೆಯುನವನು ಕೈಹಿಡಿದೆಬ್ಬಿಸಿ, 'ವಿಮಲೆ! ನಾನು ಹೋಗುತ್ತೇನೆ, ನೀನೂ ನನ್ನ ಹಿಂದೆ ಬಾ' ಎಂದನು.

ವಿಮಲೆಯು ಬರುವೆನೆಂದು ಹೇಳಿ, ಆರಿಗೂ ಕೇಳದಹಾಗೆ, 'ಬರುತ್ತೇನೆ, ಆದರೆ ನನ್ನೀ ದುಃಖಕ್ಕೆ ಪ್ರತೀಕಾರವನ್ನು ಮಾಡಿಕೊಂಡು ತಾವಿರುವಲ್ಲಿಗೆ ಬಂದು ಬಿಡುವೆನು' ಎಂದಳು.

ನಿರ್ವಾಣೋನ್ಮುಖದೀಪದಂತೆ ವೀರೇಂದ್ರನ ಮುಖವು ಹರ್ಷೋತ್ಫುಲ್ಲವಾಗಿ, 'ಮಾಡುವಿಯಾ? ಸಾಧ್ಯವೆ?' ಎಂದು ಕೇಳಿದನು.

ವಿಮಲೆಯು ತನ್ನ ಬಲಗೈಯನ್ನು ತೋರಿಸುತ್ತಾ, 'ಇದೇ ಕೈಯಿಂದ' ಎಂದು ಹೇಳಿ, 'ಈ ಕೈಲಿರುವ ಆಭರಣವನ್ನು ತ್ಯಾಗಮಾಡುತ್ತೇನೆ. ಅದರಿಂದಿನ್ನು ಪ್ರಯೋಜನವಿಲ್ಲ' ಎಂದು ಹೇಳಿ, ಕಂಕಣಾದಿ ಆಭರಣಗಳನ್ನು ದೂರ ಬಿಸುಡುತ್ತಾ, 'ಇನ್ನೀ ಕೈಗೆ ಹರಿತವಾದ ಲೋಹವು ಹೊರತು ಮತ್ತಾವುದೂ ಆಭರಣವಾಗದು' ಎಂದಳು.

ವೀರೇಂದ್ರನು ಹೃಷ್ಟಚಿತ್ತನಾಗಿ, 'ನೀನು ಮಾಡಬಲ್ಲೆ, ಜಗದೀಶನು ನಿನ್ನ ಮನೋರಥವನ್ನು ಸಫಲವನ್ನಾಗಿ ಮಾಡಲಿ!' ಎಂದು ಹೇಳಿ, 'ಮತ್ತೇನು! ಈಗ ಹೋಗು' ಎಂದನು.

ಅವಕುಂಠನವತಿಯಾಗಿದ್ದ ವಿಮಲೆಯು, 'ನನಗೀ ರೀತಿ ವೈಧವ್ಯ ಪ್ರಾಪ್ತಿಯು ಹಣೆಯಲ್ಲಿ ಬರೆದಿದ್ದಿತು!' ಎಂದೆಂದುಕೊಂಡು, ನಿವಾರ್ಯವಾಗದ ದುಃಖದಿಂದ ಹೊರಟುಹೋದಳು.

ಅನಂತರ ವಧಕಾರ್ಯವು ನಡೆಯಿತು.

---

## ಐದನೆಯ ಪರಿಚ್ಛೇದ

### ವಿ ತ ಂ ತು

ತಿಲೋತ್ತಮೆಯು ಎಲ್ಲಿ? ತಂದೆಯಿಲ್ಲದಾ ಅನಾಥೆಯಾದಾ ಬಾಲೆಯು ಎಲ್ಲಿ? ವಿಮಲೆಯು ಎಲ್ಲಿಗೆ ಹೋದಳು? ವಿಮಲೆಯು ತನ್ನ ಸ್ವಾಮಿಯ ವಧ್ಯಭೂಮಿಗೆಲ್ಲಿಂದ ಬಂದು ದರ್ಶನವನ್ನು ತೆಗೆದುಕೊಂಡು ಪುನಃ ಎಲ್ಲಿಗೆ ಹೊರಟು ಹೋದಳು?

ವೀರೇಂದ್ರಸಿಂಹನು ಮೃತ್ಯುಕಾಲದಲ್ಲಿ ತನ್ನ ಪ್ರಿಯತಮೆಯಾದ ಕನ್ಯೆಯನ್ನು ನೋಡಲು ಬಯಸಲಿಲ್ಲೇಕೆ? ಅವಳ ನಾಮೋಲ್ಲೇಖ ಮಾತ್ರದಿಂದಲೇ ಹುತಾಶನೋಪಾದಿಯಲ್ಲಿ ಪ್ರದೀಪ್ತನಾದನೇಕೆ? ತನಗೆ ಮಗಳಿಲ್ಲವೆಂದು ಹೇಳಿದನೇಕೆ? ವಿಮಲೆಯ ಕಾಗದವನ್ನು ಓದಿನೋಡದೆ ಬಿಸುಟುಬಿಟ್ಟನೇಕೆ?

ಏಕೆ? ವೀರೇಂದ್ರಸಿಂಹನು ಕತಲೂಖಾನನನ್ನು ಕುರಿತು ಮಾಡಿದ ತಿರಸ್ಕಾರವನ್ನು ಜ್ಞಾಪಿಸಿಕೊಂಡು ನೋಡಿರಿ; ಎಂತಹ ಭಯಾನಕ ವ್ಯಾಪಾರವು ನಡೆದುಹೋಗಿದೆ!

ತನ್ನ ನಿರ್ಮಲವಾದ ಕುಲವು ಕಳಂಕಸ್ಪರ್ಶವಾಯಿತೆಂದು ಶೃಂಖಲಾಬದ್ಧವಾಗಿದ್ದಾ ವ್ಯಾಘ್ರವು ಗರ್ಜಿಸಲಿಲ್ಲವೆ?

ಹೀಗಿರುತ್ತಾ, ಪುನಃ, ತಿಲೋತ್ತಮೆಯೂ ವಿಮಲೆಯೂ ಎಲ್ಲಿದ್ದಾರೆಂದು ಕೇಳಲೇಕೆ? ಕತಲೂಖಾನನ ಉಪಪತ್ನಿಗಳಿರುವ ಆವಾಸಗೃಹದಲ್ಲಿ ಸಂಧಾನ ಮಾಡಿ ನೋಡಿದರೆ ಸಿಗುವರು.

ಇಹಸಂಸಾರದ ಗತಿಯು ಹೀಗೆಯೇವೇ ಸರಿ! ಅದೃಷ್ಟಚಕ್ರಕ್ಕೆ ನಿದಾರುಣವಾದೀ ಆವರ್ತನವೇ ಹೊರತು ಬೇರೆ ಇಲ್ಲವು! ರೂಪವೂ, ಯೌವನವೂ, ಸರಳತೆಯೂ, ಅಮಲತೆಯೂ ಎಲ್ಲವೂ ಅದರಡಿ ಬಿದ್ದು ಚೂರ್ಣೀಭೂತವಾಗಿ ಹೋಗುವುವು!!

ಕತಲೂಖಾನನು ತಾನು ಜಯಿಸಿದ ದುರ್ಗ ನಗರಗಳಲ್ಲಿ ಉತ್ಕೃಷ್ಟ ಸುಂದರಿಯರು ಬಂದಿಯರಾಗಿ ಸಿಕ್ಕವರನ್ನು ಆತ್ಮಸೇವೆಗೆ ಸಲುವಾಗಿ ತನ್ನಂತಃಪುರಕ್ಕೆ ಕಳುಹಿಸುವ ನಿಯಮವುಳ್ಳವನಾಗಿದ್ದನು. ಮಂದಾರಣ ದುರ್ಗವನ್ನು ಜಯಿಸಿದ ಮರುದಿನ ಅಲ್ಲಿ ಸಿಕ್ಕ ಬಂದಿಯರನ್ನು ವಿನಿಯೋಗಮಾಡಿ, ವಿಮಲೆಯನ್ನೂ, ತಿಲೋತ್ತಮೆಯನ್ನೂ ನೋಡಿ, ಮೊದಲವರನ್ನು ನಿಜವಿಲಾಸಗೃಹಕ್ಕೆ ಕಳುಹಿಸಿ, ಬಳಿಕ ಬೇರೆ ಕೆಲಸಗಳನ್ನು ಮಾಡತೊಡಗಿದನು. ರಾಜಪೂತ ಸೈನಿಕರು ತಮ್ಮ ಸೇನಾಪತಿಯು ಬಂದಿಯಾಗಿರುವುದನ್ನು ತಿಳಿದು ಅವನ ಬಿಡುಗಡೆ ಸಲುವಾಗಿ ಪಠಾನರ ಸೈನ್ಯವನ್ನೆದುರಿಸಲು ಸನ್ನಾಹಮಾಡುತಿದ್ದರೆಂದು ವರ್ತಮಾನವನ್ನು ಕೇಳಿ, ಕತಲೂಖಾನನದರ ನಿವಾರಣೆಗೇರ್ಪಾಡುಮಾಡುತಿದ್ದನಾದಕಾರಣ ಹೊಸದಾಗಿ ಸಿಕ್ಕ ಬಂದಿಯರ ಅಂಗಸಂಗ ಸುಖಲಾಭಕ್ಕವನಿಗವಕಾಶವು ದೊರೆಯಲಿಲ್ಲ.

ವಿಮಲೆಯೂ ತಿಲೋತ್ತಮೆಯೂ ಬೇರೆ ಬೇರೆ ಕೊಟಡಿಯಲ್ಲಿಡಲ್ಪಟ್ಟಿದ್ದರು. ಪಾಠಕಮಹಾಶಯ! ಪಿತೃವಿಹೀನೆಯಾಗಿ ಶೋಕಗ್ರಸ್ತೆಯಾದಾ ಯುವತಿಯ ಧೂಳೀಧೂಸರ ದೇಹಲತೆಯು ನೆಲದಮೇಲೆ ಬಿದ್ದಿರುವ ಸ್ಥಳವನ್ನು ನೋಡುವುದರಿಂದ ಪ್ರಯೋಜನವಿಲ್ಲ. ಆ ಸ್ಥಿತಿಯಲ್ಲಿರುವ ತಿಲೋತ್ತಮೆಯನ್ನು ನೋಡಬಿಚ್ಛೈಸುವವರಾರು? ನೂತನ ಲತೆಯು ಮಧೂದಯದಲ್ಲಿ ಮಂದಮಾರುತನಿಂದ ಮನೋಹರಮಪ್ಪಂತೆ ಕಂಪಿತವಾಗುತಿದ್ದರದರ ಕಂಪಲರ ಸುವಾಸನೆಯ ಆಶೆಗೆ ಸಲುವಾಗಿ ಸಾದರದಿಂದೆಲ್ಲರೂ ಅದನಾಶ್ರಯಿಸುವರು. ಅಂತಹ ಲತೆಯು ಗ್ರೀಷ್ಮಚಂಡಮಾರುತದಿಂದ ಅವಲಂಬಿತ ವೃಕ್ಷದೊಡನೆ ಭೂತಲಶಾಯಿನಿಯಾದರದರ ಬಳಿ ಹೋಗುವವರಾರು? ಸೌದೆಗೆ ಸಲುವಾಗಿ ಕಾಡಿಗೆ ಹೋಗುವವರೂ

ಮರವನ್ನು ಮಾತ್ರ ಕಡಿದುಕೊಂಡು ಲತೆಯನ್ನು ಕಾಲಿಂದ ತುಳಿದು ಕಿತ್ತು ಹಾಕುವರು. ಆದುದರಿಂದ, ಪಾತಕಮಹಾಶಯ! ತಿಲೋತ್ತಮೆಯನ್ನು ಬಿಟ್ಟು ಮತ್ತೆಲ್ಲಾದರೂ ಹೋಗೋಣ. ಚಂಚಲೆಯಾಗಿ ಚತುರೆಯಾಗಿ ರಸಪ್ರಿಯೆಯಾಗಿ ರಸಿಕೆಯಾಗಿದ್ದಾ ವಿಮಲೆಯು ಗಂಭೀರಭಾವದಿಂದ ಅನುತಾಪಿತೆಯಾಗಿ ಮಲಿನ ವಸ್ತ್ರಧಾರಿಣಿಯಾಗಿ ವಿತಂತುವಾಗಿ ಕಣ್ಣುಗಳನ್ನು ಸೆರಗಿನಿಂದೊರಸಿಕೊಳ್ಳುತ್ತ ಕುಳಿತಿದ್ದಾಳೆ. ಅವಳನ್ನು ನೋಡಿ ಬರೋಣ—ಬನ್ನಿ.

ಇವಳೇ ವಿಮಲೆ! ಆ ಕೇಶವಿನ್ಯಾಸವೆಲ್ಲಿ! ತಲೆಯೆಲ್ಲಾ ಧೂಳೀಧೂಸರವಾಗಿದೆ. ಕಾರುಕಾರ್ಯಖಚಿತವಾದಾ ಪೀತಾಂಬರವೆಲ್ಲಿ! ರತ್ನಖಚಿತವಾದಾ ಕಂಚುಕವೆಲ್ಲಿ! ಎಲ್ಲವೂ ಮಲಿನವಾಗಿವೆ. ಅಂಗವಸ್ತ್ರವು ಜೀರ್ಣವಾಗಿದೆ. ಅವಳಾ ಅಲಂಕಾರಭಾರವೆಲ್ಲಿಹೋಯಿತು! ಅಂಸಸ್ಪರ್ಶಲೋಭಿಯಾದಾ* ಕರ್ಣಾಭರಣವೇನಾಯಿತು! ಕಣ್ಣುಗಳೇಕೆ ಊದಿವೆ! ಆ ಕಟಾಕ್ಷವೆಲ್ಲಿ! ಕಪಾಲದಲ್ಲಿ ಗಾಯವೇಕೆ? ರಕ್ತವೇಕೆ ಬರುತ್ತಿದೆ!

ವಿಮಲೆಯು ಉಸ್ಮಾನನನ್ನೆದುರುನೋಡುತ್ತ ಕುಳಿತಿದ್ದಳು.

ಉಸ್ಮಾನನು ಪಠಾನರ ಕುಲತಿಲಕನಾಗಿದ್ದನು. ಯುದ್ಧವು ಅವನಿಗೆ ಧರ್ಮವಾಗಿತ್ತಾದಕಾರಣ ಯುದ್ಧದಲ್ಲಿ ಜಯಕ್ಕೆ ಸಲುವಾಗಿ ಅವನಾವಕಾರ್ಯಕ್ಕೂ ಹಿಂಜರಿಯುತ್ತಿರಲಿಲ್ಲ; ಯುದ್ಧಪ್ರಯೋಜನವು ಸಿದ್ಧಿಯಾದೊಡನೆ, ಪರಾಜಿತರಾದವರ ಮೇಲಾವಾಗಲೂ ನಿಷ್ಪ್ರಯೋಜನವಾಗಿ ಸ್ವಲ್ಪವಾದರೂ ಅತ್ಯಾಚಾರವನ್ನು ನಡೆಯಿಸತಕ್ಕವನಾಗಿರಲಿಲ್ಲ. ಕತಲೂಖಾನನು ಸ್ವಂತವಾಗಿ ವಿಮಲೆಯನ್ನೂ ತಿಲೋತ್ತಮೆಯನ್ನೂ ಆ ಸ್ಥಿತಿಯಲ್ಲಿಡದಿದ್ದರೆ, ಉಸ್ಮಾನನೆಂದಿಗೂ ಅವರನ್ನಾರೀತಿ ಸೆರೆಯಲ್ಲಿಡುತ್ತಿರಲಿಲ್ಲ. ಅವನ ಅಂತಃಕರಣದಿಂದಲೇ ವಿಮಲೆಯು ವಧ್ಯಭೂಮಿಗೆ ಹೋಗಿ ತನ್ನ ಪತಿಯ ಚರಮದರ್ಶನವನ್ನು ತೆಗೆದುಕೊಂಡು ಬಂದಳು. ವಿಮಲೆಯು ವೀರೇಂದ್ರಸಿಂಹನ ಪತ್ನಿಯೆಂದು ತಿಳಿದ ಬಳಿಕ ಉಸ್ಮಾನನ ದಯಾರ್ದ್ರಚಿತ್ತವು ಮತ್ತೂ ಹೆಚ್ಚಾಗಿ ಅದ್ರೀಭೂತವಾಯಿತು. ಉಸ್ಮಾನನು ಕತಲೂಖಾನನ ಅಣ್ಣನ ಮಗನಾಗಿದ್ದನು.† ಆದುದರಿಂದವನು ಅಂತಃಪುರದಲ್ಲೆಲ್ಲಿಹೋಗಬೇಕಾಗಿದ್ದರೂ ಅಡ್ಡಿಯಿರಲಿಲ್ಲ. ಮೊದಲದು ದೃಷ್ಟಾಂತವಾಗಿದೆ. ಆದರೆ ಕತಲೂಖಾನನ ಉಪಪತ್ನಿಯರಿರುವ ವಿಹಾರಗೃಹಕ್ಕೆ ಹೋಗಲವನ ಮಗನಿಗೂ ಅಪ್ಪಣೆಯಿರಲಿಲ್ಲ. ಉಸ್ಮಾನನು ಕತಲೂಖಾನನ ಬಲಭುಜವಾಗಿದ್ದನು. ಉಸ್ಮಾನನ ಬಾಹುಬಲದಿಂದಲೇ ಕತಲೂಖಾನನು ಆಮೋದರ ನದಿಯ ತೀರದವರೆಗೆ ಉತ್ಕಲದೇಶದ ಅಧಿಕಾರವನ್ನು ಮಾಡುತಿದ್ದನು. ಆದುದರಿಂದ ಅಹಲೇಕಾರರೆಲ್ಲರೂ ಉಸ್ಮಾನನನ್ನು ಕತಲೂಖಾನನಂತೆಯೇ ಗೌರವಿಸು

* ಅಂಸಸ್ಪರ್ಶಲೋಭಿಯಾದ=ಭುಜವ ಸೋಕಲೆಳಸುವ.

† ಚರಿತ್ರೆಯಲ್ಲಿ ಉಸ್ಮಾನನು ಕತಲೂಖಾನನಿಗೆ ಮಗನೆಂದು ಹೇಳಿದೆ.

ತಿದ್ದರು. ಅತಏವ, ಆ ದಿವಸ ಪ್ರಾತಃಕಾಲದಲ್ಲಿ ಅವನಪ್ಪಣೆಯ ಪ್ರಕಾರ, ವಿಮಲೆಯ ಪ್ರಾರ್ಥನಾನುಸಾರವಾಗಿ, ಅವಳು ತನ್ನ ಸ್ವಾಮಿಯ ಚರಮದರ್ಶನ ವನ್ನು ಮಾಡಲವಕಾಶವುಂಟಾಯಿತು.

ವಿಮಲೆಯು, ವೈಧವ್ಯವು ಪ್ರಾಪ್ತವಾದ ಎರಡು ದಿನಗಳಾದ ಬಳಿಕ, ತನ್ನ ಲ್ಲುಳಿದಿದ್ದ ಆಭರಣಾದಿಗಳನ್ನು ತನಗೆ ಸೇವಕಳಾಗಿ ನೇಮಿಸಲ್ಪಟ್ಟಿದ್ದ ದಾಸಿಯ ಕೈಯಲ್ಲಿ ಕೊಟ್ಟಳು. ದಾಸಿಯು, ಏನಾಜ್ಞೆಯೆಂದು ಕೇಳಿದಳು.

ವಿಮಲೆಯು, 'ನೀನು ಮೊನ್ನೆದಿನ ಹೋಗಿದ್ದಹಾಗೆ, ಪುನಃ ಉಸ್ಮಾನನ ಬಳಿಗೆ ಹೋಗಿ, ಅವನನ್ನು ಮತ್ತೊಂದಾವರ್ತಿ ನೋಡಲಿಷ್ಟವುಳ್ಳವಳಾಗಿದ್ದೇ ನೆಂದೂ, ಪುನಃ ತೊಂದರೆಕೊಡುವುದಿಲ್ಲವೆಂದೂ ಹೇಳಿದೆನೆಂದು ಹೇಳು' ಎಂದಳು.

ದಾಸಿಯು ಹೋಗಿ ಅದೇ ಪ್ರಕಾರ ಅವನಿಗೆ ಹೇಳಿದಳು. ಉಸ್ಮಾನನು, ಅಂತಃಪುರಕ್ಕೆ ತಾನು ಹೋಗಿಬರುವುದು ಇಬ್ಬರಿಗೂ ಅಪಾಯವಾದುದರಿಂದ ವಿಮಲೆಯೇ ತನ್ನ ಮನೆಗೆ ಬರಲು ಹೇಳಿಕಳುಹಿದನು.

ದಾಸಿಯು ಒಂದದನ್ನು ವಿಮಲೆಗೆ ತಿಳುಹಿದಳು. ವಿಮಲೆಯು ತಾನು ಹೋಗುವ ಬಗೆ ಹೇಗೆಂದು ಕೇಳಿದಳು. ಅದಕ್ಕೆ ದಾಸಿಯು, ಅವನದಕ್ಕುಪಾಯ ವನ್ನು ಮಾಡುವುದಾಗಿ ಹೇಳಿದನೆಂದಳು.

ಸಾಯಂಕಾಲವಾದಬಳಿಕ ಆಯುಷೆಯ ಪರಿಚಾರಿಕೆಯೊಬ್ಬಳು ಬಂದು ಅಂತಃ ಪುರದ ಪಹರೇದವನ ಸಂಗಡ ಮಾತನಾಡಿ, ವಿಮಲೆಯನ್ನು ಸಂಗಡ ಕರೆದು ಕೊಂಡುಹೋಗಿ ಉಸ್ಮಾನನ ಬಳಿ ಬಿಟ್ಟಳು.

ಉಸ್ಮಾನನು ವಿಮಲೆಯನ್ನು ಕುರಿತು, 'ನಿನಗೆ ಸಲುವಾಗಿ ಮತ್ತಾವ ಉಪಕಾರವನ್ನು ಮಾಡಬಲ್ಲೆನು ? ಹೇಳು' ಎಂದನು.

ವಿಮಲೆಯು, 'ಮತ್ತಾವದೂ ಹೆಚ್ಚಿನ ಸಂಗತಿಯಲ್ಲ; ರಾಜಕುಮಾರ ಜಗತ್ಸಿಂಹನು ಜೀವದಿಂದಿದ್ದಾನೆಯೆ ?' ಎಂದು ಕೇಳಿದಳು.

ಉಸ್ಮಾನ್‌ಖಾನ್—ಜೀವದಿಂದಿದ್ದಾನೆ.

ವಿಮಲೆ—ಸ್ವತಂತ್ರನಾಗಿದ್ದಾನೋ ? ಅಥವಾ ಸೆರೆಯಲ್ಲಿದ್ದಾನೋ ?

ಉಸ್ಮಾನ್—ಸೆರೆಯಲ್ಲಿಯೇ ಇದ್ದಾನೆ, ಆದರೆ ಕೇವಲ ಕಾರಾಗಾರ ವಾಸವಲ್ಲ, ಮೈಯೆಲ್ಲಾ ಅಸ್ತ್ರಘಾತವಾಗಿ ಅದರ ವೇದನೆಯಿಂದ ಶಯ್ಯಾಗತ ನಾಗಿದ್ದಾನೆ.

ವಿಮಲೆ—ಈ ಅಭಾಗಿನಿಯ ಸಂಪರ್ಕಮಾತ್ರದಿಂದ ಅವನಿಗೂ ಅಮಂಗಳ ವುಂಟಾಯಿತು. ಅವನು ನಿಜವಾಗಿ ದೇವಲೋಕದ ಮನುಷ್ಯನು; ರಾಜ ಕುಮಾರನು ಪುನರ್ಜೀವಿತನಾಗಿ ಆರೋಗ್ಯಲಾಭವನ್ನು ಹೊಂದಿದರೆ, ಈ ಪತ್ರ ವನ್ನವನಿಗೆ ಕೊಡಬೇಕು. ಅದುವರೆಗದು ನಿನ್ನಲ್ಲಿರಲಿ; ಇದೆನ್ನ ಪ್ರಾರ್ಥನೆ— ಎಂದೊಂದು ಕಾಗದವನ್ನು ಕೊಟ್ಟಳು.

ಉಸ್ಮಾನನು ಕಾಗದವನ್ನು ಹಿಂದಕ್ಕೆ ಕೊಟ್ಟು, 'ಇದೆಸಗನುಚಿತವಾದ ಕಾರ್ಯವು; ರಾಜಕುಮಾರನಾವ ಅವಸ್ಥೆಯಲ್ಲಿದ್ದರೂ ಬಂದಿಯಂತಲೇ ಗಣ್ಯ ನಾಗಿರುವನು. ಬಂದಿಗಳಿಗೆ ಕೊಡುವ ಕಾಗದಪತ್ರಗಳನ್ನು ನಾನೋದಿನೋಡದೆ ತಲ್ಪಿಸಕೂಡದು; ಅದಲ್ಲದೆ ನಮ್ಮ ಪ್ರಭುವಿನ ಅಪ್ಪಣೆಗದು ವಿರುದ್ಧವಾದ ಕೆಲಸ ವಾಗಿದೆ' ಎಂದನು.

ವಿಮಲೆ—ಈ ಕಾಗದದಲ್ಲಿ ನಿಮಗನಿಷ್ಟಸಂಪಾದಕವಾದಾವ ಸಂಗತಿಯೂ ಇಲ್ಲವಾದಕಾರಣ, ಮಾಡಕೂಡದಾದ ಕೆಲಸವಲ್ಲ; ನಿನಗೆ ಪ್ರಭುವಿನ ಆಜ್ಞೆ ಯೆಂದರೇನು? ನೀನೇ ಪ್ರಭು.

ಉಸ್ಮಾನ್—ಬೇರೆ ಸಂಗತಿಗಳಲ್ಲೊಮ್ಮೊಮ್ಮೆ ನನ್ನ ಪಿತೃವ್ಯನ ಅಪ್ಪಣೆಗೆ ವಿರುದ್ಧವಾಗಿ ನಡೆಯಬಲ್ಲೆನಾದರೂ ಇಂತಹ ವಿಚಾರದಲ್ಲದಾಗಲಾರದು. ನೀನೀ ಕಾಗದದಲ್ಲಿ ವಿರೋಧವಾದ ಮಾತುಗಳಿಲ್ಲನೆಂದು ಹೇಳುವುದನ್ನು ನಾನಪನಂಬಿಕೆ ಪಡುವುದಿಲ್ಲ; ಆದರೀ ವಿಷಯದಲ್ಲಿ ನಿಯಮವನುಲ್ಲಂಘಿಸಿ ನಡೆಯಲಾರೆನು; ನನ್ನಿಂದೀ ಕಾರ್ಯವಾಗುತಕ್ಕುದಲ್ಲ.

ವಿಮಲೆಯು ಕ್ಷುಣ್ಣಳಾಗಿ, 'ಹಾಗಿದ್ದರೆ, ನೀನದನ್ನೋದಿನೋಡಿ ಕೊಡ ಬಹುದು' ಎಂದಳು.

ಉಸ್ಮಾನನು ಕಾಗದವನ್ನು ತೆಗೆದುಕೊಂಡೋದಲಾರಂಭಿಸಿದನು.

---

## ಆರನೆಯ ಪರಿಚ್ಛೇದ

## ವಿಮಲೆಯ ಪತ್ರ

"ಯುವರಾಜ! ನಾನಾಪಾಗಲಾದರೂ ಒಂದು ದಿನ ನನ್ನ ಪರಿಚಯು ವನ್ನು ತಿಳಿಸುವೆನೆಂದು ಹೇಳಿದ್ದೆನಷ್ಟೆ; ಅದಕ್ಕೀಗ ಸಮಯವು ಸಂಪ್ರಾಪ್ತವಾಗಿದೆ.

ನಮ್ಮ ತಿಲೋತ್ತಮೆಯು ಅಂಬರ ಸಿಂಹಾಸನಾರೂಢಳಾದ ಬಳಿಕ ನನ್ನ ಪರಿಚಯವನ್ನು ಸಮಗ್ರವಾಗಿ ತಿಳಿಸಬೇಕೆಂದಾಶೆಯುಳ್ಳವಳಾಗಿದ್ದೆನು. ಆದರಾ ಆಶೆಯು ನಿಷ್ಫಲವಾಗಿ ಹೋಯಿತು. ಸ್ವಲ್ಪ ದಿವಸಗಳಲ್ಲಿ ಪೃಥಿವಿಯಲ್ಲಿ ತಿಲೋತ್ತಮೆಯೆಂಬುವಳೂ ವಿಮಲೆಯೆಂಬುವಳೂ ಇರಲಿಲ್ಲವೆಂದು ನಿನಗೆ ಸುದ್ದಿಯು ಮುಟ್ಟುವುದೆಂದು ತಿಳಿಯುತ್ತೇವೆ. ಈಗಾಗಲೇ ನಮ್ಮ ಪರಮಾಯು ರ್ದಾಯವು ಪೂರೈಸಿಬಂದಿದೆ.

ಆದುದರಿಂದೀ ಪತ್ರವನ್ನೀಗಲೇ ಬರೆಯಬೇಕಾಯಿತು. ನಾನು ಮಹಾ ಪಾಪಿಯೆನಿ, ಬಹುವಿಧವಾದ ಆಕರ್ಮಗಳನ್ನಾಚರಿಸಿದೇನೆ. ನನಗೆ ಲೋಕಾಂ ತರ ಪ್ರಾಪ್ತಿಯಾದರೆ ಜನರೆನ್ನನ್ನು ನಿಂದಿಸುವರು. ನನ್ನ ವಿಚಾರವಾಗಿ ಏಷ್ಟೊಂದು

ಅಗೌರವದ ಮಾತುಗಳನ್ನಾಡುವರೋ, ಹೇಳಲಾರೆನು. ನನ್ನನ್ನಾ ದುರ್ನಾಮದಿಂದುಂಟಾಗುವ ಕಳಂಕದಿಂದೆನ್ನಾವ ಬಂಧುವಾದವನು ದೂರಮಾಡಬಲ್ಲನು? ಅಂತಹ ಸುಹೃತ್ತನಾವನಾದರೂ ಇದ್ದಾನೆಯೆ? ಇದ್ದಾನೆ. ಆದರವನು ಸ್ವಲ್ಪ ದಿನಗಳಲ್ಲೇ ಲೋಕಾಲಯವನ್ನು ಬಿಟ್ಟು ತಪಸ್ಸುಮಾಡಲರಣ್ಯಕ್ಕೆ ಹೊರಟು ಹೋಗುವನು. ಅಭಿರಾಮಸ್ವಾಮಿಯಿಂದ ದಾಸಿಯಾದೆನ್ನ ಕಾರ್ಯೋದ್ಧಾರ ವಾಗದು. ಹೇ ರಾಜಕುಮಾರ! ನಾನೊಂದುದಿನವಾದರೂ ನಿನ್ನ ಆತ್ಮೀಯ ಜನರಲ್ಲಿ ಗಣ್ಯಳಾಗುವೆನೆಂದು ನಂಬಿದ್ದೆನು. ನೀನೆನಗೊಂದು ದಿನವಾದರೂ ಆತ್ಮೀಯನಾಗಿ ಆಚರಿಸುವೆಯೆಂದು ನಂಬಿದ್ದೆನು. ಈಗಾ ಮಾತನ್ನಾರನ್ನು ಕುರಿತು ಹೇಳುತ್ತೇನೆ? ನಮ್ಮಂತಹ ಹತಭಾಗಿನಿಯರ ಮಂದಭಾಗ್ಯವು ಎಷ್ಟೆಂದು ಹೇಳಿದರೂ ತೀರದು. ನಮ್ಮಾ ಮಂದಭಾಗ್ಯವು ಅಗ್ನಿಶಿಖೆಯಂತೆ ಸಮೀಪದಲ್ಲಿದ್ದ ಬಂಧುವಿಗೂ ಸ್ಪರ್ಶಮಾಡಿದೆ. ವಿಮಲೆಯು ಬಿಟಿಕಿ*ಯಾಗಿದ್ದಳೆಂತಲೂ, ದಾಸಿಯ ವೇಷದಲ್ಲಿ ವೇಶ್ಯೆಯಾಗಿದ್ದಳೆಂತಲೂ ಜನರು ನಾನಾವಿಧವಾಗಿ ಹೇಳುವ ರಾದರೆ, ಅವಳು ನೀಚಜಾತಿ ಸಂಭೂತಳಾದರೂ, ಅವಳು ಮಂದಭಾಗಿನಿಯಾದರೂ, ಅವಳು ದುಶ್ಶಾಸಿತವಾದ ರಸನಾದೋಷದಿಂದ ಶತಾಪರಾಧಗಳನ್ನು ಮಾಡಿದವ ಳಾದರೂ, ವೇಶ್ಯೆಯಲ್ಲವೆಂತಲೂ, ಶುದ್ಧಳಾದ ವಿಮಲೆಯೆಂತಲೂ ಹೇಳಬೇಕು. ಮೊನ್ನೆ ಸ್ವರ್ಗಸ್ಥರಾಗಿರುವವರು ವಿಮಲೆಯ ಅದೃಷ್ಟಪ್ರಸಾದದಿಂದವಳನ್ನು ಯಥಾಶಾಸ್ತ್ರವಿಧಿಯಾಗಿ ಪಾಣಿಗ್ರಹಣಮಾಡಿಕೊಂಡವರು. ಅವರೊಂದು ದಿನ ವಾದರೂ ವಿಮಲೆಯ ಶುದ್ಧ ಚರಿತೆಯ ವಿಷಯದಲ್ಲನುಮಾನಪಡಲಿಲ್ಲ. ಅವ ಳಾವಾಗಲೂ ತನ್ನ ಪತಿಯಲ್ಲಿ ವಿಶ್ವಾಸಘಾತುಕಿಯಾಗಿಲ್ಲ.

ಇದುವರೆಗದನ್ನಾರೂ ಅರಿಯರು. ಈಗ ಹೇಳಿದರಾರು ನಂಬುವರು? ಪಾಣಿಗೃಹೀತಳಾದ ಪತ್ನಿಯಾಗಿದ್ದರೂ ಆವ ಕಾರಣದಿಂದ ದಾಸಿಯಹಾಗಾ ಚರಿಸುತಿದ್ದೆನೋ ಅದನ್ನು ಕುರಿತು ವಿಜ್ಞಾಪಿಸುವೆನು, ಲಾಲಿಸು.

ಮಂದಾರಣದುರ್ಗಕ್ಕೆ ಸಮೀಪವಾದೊಂದು ಗ್ರಾಮದಲ್ಲಿ ಶಶಿಶೇಖರ ಭಟ್ಟಾಚಾರ್ಯನೆಂಬೊಬ್ಬ ಬ್ರಾಹ್ಮಣನು ವಾಸವಾಗಿದ್ದನು. ಶಶಿಶೇಖರನು ಸಂಪನ್ನನಾದೊಬ್ಬ ಬ್ರಾಹ್ಮಣನ ಕುಮಾರನಾಗಿದ್ದನು. ಯೌವನಕಾಲದಲ್ಲಿ ಯಥಾಯೋಗ್ಯವಾಗಿ ವಿದ್ಯಾಧ್ಯಯನವನ್ನು ಮಾಡಿದ್ದನು. ಆದರೆ ಅಧ್ಯಯನ ಮಾತ್ರದಿಂದ ಸ್ವಭಾವ ದೋಷವು ದೂರವಾಗದು. ಜಗದೀಶ್ವರನ ಅನುಗ್ರಹದಿಂದ ಶಶಿಶೇಖರನು ಸರ್ವಗುಣಸಂಪನ್ನನಾಗಿದ್ದರೂ, ಒಂದು ದೋಷದಿಂದವನು ಮುಕ್ತ ನಾಗಿರಲಿಲ್ಲ. ಆ ದೋಷವು ಯೌವನ ಪ್ರಾಗಲ್ಭ್ಯದಿಂದುಂಟಾದ ಪ್ರಬಲ ದೋಷ ವಾಗಿದ್ದಿತು.

ಮಂದಾರಣದುರ್ಗದಲ್ಲಿ ಜಯಧರಸಿಂಹನ ಒಬ್ಬನುಚರನ ವಂಶದಲ್ಲಿ ಪತಿ

* ಬಿಟಿಕಿ=ಸ್ವೇಚ್ಛಾಚಾರಿಣಿ, ಅಸತಿ.

ವಿರಹಿಣಿಯಾದೊಬ್ಬ ರಮಣಿಯಿದ್ದಳು. ಅವಳು ಅಲೌಕಿಕ ಸುಂದರಿಯಾಗಿದ್ದಳು. ಅವಳ ಪತಿಯು ರಾಜನ ಸೇನೆಯಲ್ಲಿ ಸೈನಿಕನಾಗಿದ್ದಕಾರಣ ಬಹುದಿನ ದೇಶತ್ಯಾಗಿಯಾಗಿರಬೇಕಾಗಿಬಂದಿತು. ಆ ಸುಂದರಿಯು ಶಶಿಶೇಖರನ ಕಣ್ಣಿಗೆ ಬಿದ್ದು, ಅಲ್ಪ ಕಾಲದಲ್ಲಿಯೇ ಪತಿವಿರಹಿತಳಾಗಿದ್ದವಳಿಗೆ ಗರ್ಭಸಂಚಾರವಾಯಿತು.

ಅಗ್ನಿಯೂ ಪಾಪವೂ ಬಹುದಿನ ಗೋಪ್ಯವಾಗಿರುವುದಿಲ್ಲ. ಶಶಿಶೇಖರನ ದುಷ್ಕೃತಿಯು ಅವನ ತಂದೆಯ ಕಿವಿಗೆ ಬಿದ್ದಿತು. ಪುತ್ರಕೃತ ಪರಕುಲ ಕಳಂಕವನ್ನು ಹೋಗಲಾಡಿಸುವ ನಿಮಿತ್ತವಾಗಿ ಶಶಿಶೇಖರನ ತಂದೆಯು ಕಾಗದವನ್ನು ಬರೆದು ಗರ್ಭವತಿಯ ಸ್ವಾಮಿಯನ್ನೊಡನೆ ಮನೆಗೆ ಕರೆಯಿಸಿದನಲ್ಲದೆ ಅಪರಾಧಿಯಾಗಿದ್ದ ಪುತ್ರನನ್ನು ಬಹುವಿಧವಾಗಿ ಭರ್ತ್ಸನೆಮಾಡಿದನು. ಶಶಿಶೇಖರನು ಕಳಂಕಿತನಾಗಿ ದೇಶತ್ಯಾಗಿಯಾಗಿ ಹೊರಟುಹೋದನು.

ಶಶಿಶೇಖರನು ಪಿತೃಗೃಹವನ್ನು ಬಿಟ್ಟು ಕಾಶಿಗೆ ಹೋಗಿ, ಅಲ್ಲಿ ಮಹಾಕವಿ ದಂಡಿಯ ಖ್ಯಾತಿಯನ್ನು ಕೇಳಿ ಅವನಲ್ಲಿ ಅಧ್ಯಯನಾರಂಭವನ್ನು ಮಾಡಿದನು. ಅವನ ಬುದ್ಧಿಯು ಅತಿತೀಕ್ಷ್ಣವಾದುದಾದಕಾರಣ ದರ್ಶನಾದಿ ಅನೇಕ ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು; ಜ್ಯೋತಿಷ್ಯದಲ್ಲಿ ಅದ್ವಿತೀಯ ಮಹೋಪಾಧ್ಯಾಯನಾದನು. ಅಧ್ಯಾಪಕನು ಬಹಳ ಸಂತೋಷಪಟ್ಟು ಚೆನ್ನಾಗಿ ವಿದ್ಯವನ್ನು ಹೇಳುತ್ತಿದ್ದನು.

ಶಶಿಶೇಖರನು ಕಾಶಿಯಲ್ಲೊಬ್ಬ ಶೂದ್ರಳ ಮನೆಯ ಬಳಿ ವಾಸಮಾಡುತಿದ್ದನು. ಶೂದ್ರಳಿಗೆ ನವಯುವತಿಯಾದ ಕನ್ಯೆಯೊಬ್ಬಳಿದ್ದಳು. ಅವಳು ಬ್ರಾಹ್ಮಣನಲ್ಲಿ ಭಕ್ತಿಪ್ರಯುಕ್ತವಾಗಿ ಆಹಾರಕ್ಕೆ ಬೇಕಾದ ಉಪಸಾಮಗ್ರಿಗಳನ್ನು ಸಿದ್ಧಮಾಡಿಕೊಡುತ್ತಾ ಅವನ ಗೃಹಕಾರ್ಯಗಳನ್ನು ಮಾಡಿಕೊಡುತಿದ್ದಳು. ಮಾತಾಪಿತೃಗಳ ದುಷ್ಕೃತಿಗಳನ್ನು ಮರೆಮಾಡತಕ್ಕುದು ಮಕ್ಕಳಿಗೆ ಕರ್ತವ್ಯವಾದುದು. ಅಧಿಕ ಹೇಳಲೇಕೆ? ಶಶಿಶೇಖರನ ಔರಸಳಾಗಿ ಶೂದ್ರಕನ್ಯೆಯ ಗರ್ಭದಲ್ಲೀ ಅಭಾಗಿನಿಯು ಜನ್ಮಗ್ರಹಣಮಾಡಿದಳು.

ಅದನ್ನು ಕೇಳಿ, ಅಧ್ಯಾಪಕನಾದ ದಂಡಿಯು ಶಿಷ್ಯನನ್ನು ಕುರಿತು, 'ಶಿಷ್ಯ! ನಾನು ದುಷ್ಕರ್ಮಾಚಾರಿಗಳಿಗೆ ಪಾಠವನ್ನು ಹೇಳುವುದಿಲ್ಲ; ನೀನಿನ್ನು ಕಾಶೀಧಾಮದಲ್ಲಿ ಮುಖತೋರಿಸಬೇಡ' ಎಂದು ಹೇಳಿದನು.

ಶಶಿಶೇಖರನು ಲಜ್ಜಿತನಾಗಿ ಕಾಶಿಯಿಂದ ಹೊರಟುಹೋದನು.

ನನ್ನ ಮಾತಾಮಹಿಯು ಮಗಳನ್ನು ದುಶ್ಚಾರಿಣಿಯೆಂದು ಮನೆಯಿಂದಟ್ಟಿಬಿಟ್ಟಳು. ದುಃಖಭಾಗಿನಿಯಾದೆನ್ನ ಮಾತೆಯೊನ್ನೊಡನೆ ಒಂದು ಕುಟೀರದಲ್ಲಿರುತಿದ್ದಳು. ನಿತ್ಯವೂ ಕಾಯಿಕ ಪರಿಶ್ರಮದಿಂದ ಜೀವನ ನಿರ್ವಾಹಮಾಡುತಿದ್ದಳು. ಆ ದುಃಖಿನಿಯನ್ನಾರೂ ಕೇಳುತ್ತಿರಲಿಲ್ಲ. ನನ್ನ ಜನಕನ ಸಮಾಚಾರವೂ ತಿಳಿಯಲಿಲ್ಲ. ಕೆಲವು ವರ್ಷಗಳಾದ ಬಳಿಕ ಶೀತಕಾಲದಲ್ಲೊಬ್ಬ ಧನಾಢ್ಯನಾದ ಪಠಾಣನು

ವಂಗದೇಶದಿಂದ ಕಾಶೀಮಾರ್ಗವಾಗಿ ದಿಲ್ಲಿಗೆ ಹೋಗುತ್ತಿದ್ದನು. ಕಾಶೀಗವನು ಬಂದಾಗ ರಾತ್ರಿ ಬಹಳ ಹೊತ್ತಾಗಿದ್ದುದರಿಂದ ಅವನಿಗುಳುಕೊಳ್ಳಲಾರೂ ಸ್ಥಳವನ್ನು ಕೊಡದೆ ಹೋದರು. ಪಠಾಣನು ಸಂಗಡ ಹೆಂಡತಿಯನ್ನೂ ಒಬ್ಬ ನವ ಕುಮಾರನನ್ನೂ ಕರೆತಂದಿದ್ದನು. ಹುಡುಗನ ತಾಯಿಯು ನಮ್ಮ ಕುಟೀರಕ್ಕೆ ಬಂದು ಕುಟೀರದಲ್ಲಿ ರಾತ್ರಿ ಉಳಿದಿದ್ದು ಹೋಗಲೆನ್ನ ತಾಯಿಯ ಅಪ್ಪಣೆಯನ್ನು ಬೇಡಿ, ಆ ದೊಡ್ಡ ನಗರದಲ್ಲುಳಿಯುಲು ಸ್ಥಳವನ್ನು ಕೊಡದ ಹಿಂದೂಗಳೆಷ್ಟೊಂದು ಕಠಿಣಹೃದಯರೆಂದೂ, ಶೀತದಲ್ಲಿ ಹುಡುಗನನ್ನು ಕಟ್ಟಿಕೊಂಡೆಲ್ಲಿಗೆ ಹೋಗಲೆಂದೂ, ರಾತ್ರಿ ಉಳಿದಿದ್ದು ಬೆಳಿಗ್ಗೆ ಹೋಗುವವರಾಗಿದ್ದಕಾರಣ ದಯಮಾಡಿ ಸ್ವಲ್ಪ ಸ್ಥಳ ಕೊಟ್ಟರೆ, ಅದರಿಂದುಪಕೃತರಾಗಿ ಹೋಗುವಾಗ ಬಹುಮಾನವನ್ನು ಕೊಡುವುದಾಗಿಯೂ ಹೇಳಿದಳು. ವಸ್ತುತಃ, ಪಠಾಣನು ಅವಸರ ನಿಮಿತ್ತವಾಗಿ ದಿಲ್ಲಿಗೆ ಹೋಗುತಿದ್ದನಾದುದರಿಂದ ಪರಿಜನರಾರೂ ಇಲ್ಲದೆ ಒಬ್ಬ ಭೃತ್ಯನನ್ನು ಮಾತ್ರ ಕರೆತಂದಿದ್ದನು. ನಮ್ಮ ತಾಯಿಯು ದರಿದ್ರಳಾಗಿದ್ದರೂ ದಯಾರ್ದ್ರಹೃದಯವುಳ್ಳವಳಾಗಿದ್ದಳು; ಧನಲೋಭದಿಂದಲೋ, ಬಾಲಕನ ಮೇಲಿನ ದಯೆಯಿಂದಲೋ ಪಠಾಣನಿಗೆ ಕುಟೀರದಲ್ಲಿ ಸ್ಥಳವನ್ನು ಕೊಟ್ಟಳು. ಪಠಾಣನು ಹೆಂಡತಿ ಮಗು ಸಮೇತನಾಗಿ ಕುಟೀರದೊಂದು ಭಾಗದಲ್ಲಿ ಮಲಗಿದ್ದನು. ಮತ್ತೊಂದು ಭಾಗದಲ್ಲಿ ನಾವು ತಾಯಿಮಗಳು ಮಲಗಿದ್ದೆವು.

ಆ ಕಾಲದಲ್ಲಿ ಕಾಶಿಯಲ್ಲಿ ಮಕ್ಕಳ ಕಳವು ಬಹಳವಾಗಿ ನಡೆಯುತಿದ್ದಿತು. ಆಗೆನಗಾರು ವರುಷವಾದಕಾರಣ ವಿದ್ಯಮಾನಗಳೆನಗೆ ಚೆನ್ನಾಗಿ ನೆನಪಿಲ್ಲ. ನನ್ನ ತಾಯಿಯು ಹೇಳುತಿದ್ದುದನ್ನು ವಿಜ್ಞಾಪಿಸುತ್ತೇನೆ.

ಅರ್ಧರಾತ್ರಿಯಲ್ಲಿ ದೀಪವುರಿಯುತಿದ್ದಿತು. ಆಗ ಕಳ್ಳನೊಬ್ಬನು, ಕುಟೀರದ ಗೋಡೆಯಲ್ಲಿ ಕನ್ನವನ್ನು ಕೊರೆದು ಹುಡುಗನನ್ನು ಅಪಹರಣಮಾಡಿಕೊಂಡು ಹೋಗುತಿದ್ದನು. ನಾನು ಎಚ್ಚರವಾಗಿದ್ದವಳದನ್ನು ಕಂಡು ಘಟ್ಟಿಯಾಗಿ ಕೂಗಿಕೊಂಡೆನು. ನನ್ನಾಗದ್ದಲದಿಂದೆಲ್ಲರಿಗೂ ಎಚ್ಚರವಾಯಿತು.

ಪಠಾಣನ ಹೆಂಡತಿಯು ಮಗ್ಗುಲಲ್ಲಿ ಮಗುವಿಲ್ಲದುದನ್ನು ಕಂಡು ಘಟ್ಟಿಯಾಗಿ ಆರ್ತನಾದವನ್ನು ಮಾಡತೊಡಗಿದಳು. ಕಳ್ಳನಾಗ ಕನ್ನದಿಂದ ಹೊರಬಿದ್ದು ಹೊರಟು ಮುಂದುವರಿದು ಹೋಗುತಿದ್ದನಾದಕಾರಣ ಪಠಾಣನೆದ್ದು ಹೊರಗೆ ಹೋದೊಡನೆ ಕೈಗೆ ಸಿಕ್ಕುಬಿದ್ದನು. ಪಠಾಣನಾ ಕಳ್ಳನನ್ನು ಹಿಡಿತಂದು ಮಗುವನ್ನು ಬಿಡಿಸಿಕೊಂಡು ಬಳಿಕವನು ಬಹಳ ಹೇಳಿಕೊಳ್ಳಲವನೊಂದು ಕಿವಿಯನ್ನು ಮಾತ್ರ ಛೇದಿಸಿ ಬಿಟ್ಟುಬಿಟ್ಟನು.''

ಉಸ್ಮಾನನು ಕಾಗದವನ್ನದುವರೆಗೆ ಓದಿ ಸ್ವಲ್ಪವೇನೋ ಜ್ಞಾಪಿಸಿಕೊಂಡಂತಿದ್ದು ಬಳಿಕ ವಿಮಲೆಯನ್ನು ಕುರಿತು, 'ನಿನಗೆ ಬೇರೆ ಆವದೂ ಹೆಸರಿರಲಿಲ್ಲವೇ?' ಎಂದು ಕೇಳಿದನು.

ವಿಮಲೆಯು, 'ಇದ್ದಿತು, ಆದರದು ಮುಸಲ್ಮಾನಿ ಹೆಸರಾಗಿದ್ದುದರಿಂದೆನ್ನ ತಂದೆಯದನ್ನು ಬದಲಾಯಿಸಿ ವಿಮಲೆಯೆಂದು ಹೆಸರಿಟ್ಟನು' ಎಂದಳು.

ಉಸ್ಮಾನನು, 'ಆ ಹೆಸರು ಮೆಹರು ಎಂದಿದ್ದಿತೆ?' ಎಂದನು.

ವಿಮಲೆಯು ವಿಸ್ಮಿತೆಯಾಗಿ, 'ನೀನದನ್ನು ಹೇಗೆ ಬಲ್ಲೆ?' ಎಂದು ಕೇಳಿದಳು.

ಉಸ್ಮಾನನು, 'ನಾನಾ ಅಪಹೃತನಾಗಿದ್ದ ಹುಡುಗನು,' ಎಂದು ಹೇಳಿದನು.

ವಿಮಲೆಯು ಕೇಳಿ ಅತ್ಯಾಶ್ಚರ್ಯಪಟ್ಟಳು. ಉಸ್ಮಾನನು ಪುನಃ ಕಾಗದವನ್ನು ಓದತೊಡಗಿದನು.

"ಮರುದಿನ ಪ್ರಾತಃಕಾಲದಲ್ಲಿ ಪಠಾನನು ಎದ್ದು ನನ್ನ ತಾಯಿಯಿಂದ ಬೀಳ್ಕೊಳ್ಳುವಾಗ, 'ನಿನ್ನ ಮಗಳು ಮಾಡಿದುಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನೀಗ ಮಾಡಲಸಾಧ್ಯ; ನಿನಗೇನಾದರೂ ಇಷ್ಟವಿದ್ದರೆ ಹೇಳು, ನಾನು ದಿಲ್ಲಿಗೆ ಹೋಗಿ ಅಲ್ಲಿಂದ ಬೇಕಾದುದನ್ನು ಕಳುಹುವೆನು, ದ್ರವ್ಯಬೇಕಾದರದನ್ನೂ ಕೊಡುವೆನು' ಎಂದು ಹೇಳಿದನು.

ನನ್ನ ತಾಯಿ—ದ್ರವ್ಯದಿಂದೆನಗೆ ಪ್ರಯೋಜನವಿಲ್ಲ, ಸ್ವಂತ ಪರಿಶ್ರಮದಿಂದ ಸ್ವಚ್ಛಂದವಾಗಿ ಕಾಲಯಾಪನೆಯನ್ನು ಮಾಡುತ್ತೇನೆ, ಆದರೆ ಬಾದಷಹನಲ್ಲಿ ನಿನ್ನ ಮಾತು ನಡೆಯುವದಾಗಿದ್ದರೆ—

ಅಷ್ಟರೊಳಗೆ ಪಠಾನನು, 'ರಾಜಧಾನಿಯಲ್ಲೆನಗೆ ಹೆಚ್ಚು ಅಧಿಕಾರವುಂಟು, ಏನುಪಕಾರವಾಗಬೇಕಾದರೂ ಮಾಡಬಲ್ಲೆನು' ಎಂದನು.

ನನ್ನ ತಾಯಿ—ಹಾಗಾದರೆ, ಈ ಹುಡುಗಿಯ ತಂದೆಯಿರುವ ಸ್ಥಳವನ್ನು ಅನುಸಂಧಾನಮಾಡಿ ಸಮಾಚಾರವನ್ನು ಕೊಡಬೇಕು.

ಪಠಾನನು ವಾಗ್ದಾನಮಾಡಿ ಹೊರಟುಹೋದನು. ಹೊರಟುಹೋಗುವಾಗೆನ್ನ ತಾಯಿಗೆ ಸ್ವಲ್ಪ ಹಣವನ್ನು ಕೊಡಲು ಬಂದನು. ನನ್ನ ತಾಯಿಯು ಅದನ್ನು ತೆಗೆದುಕೊಳ್ಳಲಿಲ್ಲ. ಪಠಾನನು ಹೋಗಿ ನನ್ನ ತಂದೆಯನ್ನು ಅನುಸಂಧಾನ ಮಾಡಲು ರಾಜಪುರುಷರನ್ನು ನಿಯಮಿಸಿದನು. ಆದರಾವುದೂ ಗೊತ್ತಾಗದೆ ಹದಿನಾಲ್ಕು ವರುಷಗಳು ಕಳೆದುಹೋದವು.

ಅನಂತರ ದೈವಾನುಗ್ರಹದಿಂದ ರಾಜಪುರುಷರು ನನ್ನ ತಂದೆಯಿದ್ದ ಸ್ಥಳವನ್ನು ಗೊತ್ತುಮಾಡಿ, ಮೊದಲು ಪ್ರಚಾರವಾಗಿದ್ದ ರಾಜಾಜ್ಞಾನುಸಾರವಾಗಿ ನನ್ನ ತಾಯಿಗೆ ಕಾಗದವನ್ನು ಬರೆದರು. ಶಶಿಶೇಖರಭಟ್ಟಾಚಾರ್ಯನು ತನ್ನ ಹೆಸರನ್ನು ಬದಲಾಯಿಸಿಕೊಂಡು, ಅಭಿರಾಮಸ್ವಾಮಿಯೆಂಬ ಹೆಸರನ್ನಿಟ್ಟುಕೊಂಡಿದ್ದನು. ಆ ಸಮಾಚಾರವು ಬಂದೊಡನೇ ನನ್ನ ತಾಯಿಯು ಸ್ವರ್ಗಸ್ಥೆಯಾದಳು. ಮಂತ್ರಪೂರ್ವಕವಲ್ಲದೆ ಪಾಣಿಗ್ರಹಣಮಾಡಿಕೊಳ್ಳಲ್ಪಡುವವರಿಗೆ ಸ್ವರ್ಗಾ

ರೋಹಣದ ಅಧಿಕಾರವಿದ್ದರೆ ನನ್ನ ತಾಯಿಯೂ ಸ್ವರ್ಗಾರೋಹಣ ಮಾಡಿದ್ದಾಳೆ; ಅದಕ್ಕೆ ಸಂದೇಹವಿಲ್ಲ.

ತಂದೆಯ ಸಮಾಚಾರವು ಬರುತ್ತಲೇ ಕಾಶಿಯಲ್ಲಿರಲೆನಗಿಷ್ಟವಾಗಲಿಲ್ಲ; ಇಹದಲ್ಲೆನ್ನಪಾಲಿಗೆ ಉಳಿದಿದ್ದವರು ನನ್ನ ತಂದೆಯೊಬ್ಬನಾಗಿದ್ದನು. ಅವನು ದಿಲ್ಲಿಯಲ್ಲಿರುತ್ತಾ ನಾನು ಕಾಶಿಯಲ್ಲಿರಲೇಕೆಂಬ ಚಿಂತೆಯು ಹುಟ್ಟಿ, ಏಕಾಕಿನಿಯಾಗಿ ಪಿತೃದರ್ಶನಾರ್ಥವಾಗಿ ಯಾತ್ರೆ ಹೊರಟೆನು. ನನ್ನ ತಂದೆಯು ನನ್ನನ್ನು ನೋಡಿ ಮೊದಲು ಸ್ವಲ್ಪ ರುಷ್ಟನಾದನು. ಆದರೆ ನಾನು ಬಹಳವಾಗಿ ರೋದನ ಮಾಡಿ ಹೇಳಿಕೊಂಡಿದ್ದರಮೇಲೆ ತನ್ನ ಸೇವಾರ್ಥವಾಗಿ ತನ್ನ ಬಳಿಯಲ್ಲಿರಬಹುದೆಂದು ಅನುಮತಿಯನ್ನು ಕೊಟ್ಟು ಮೊದಲೆನಗಿದ್ದ 'ಮೆಹರು' ಎಂಬ ಹೆಸರನ್ನು ಬದಲಾಯಿಸಿ ವಿಮಲೆಯೆಂದು ಹೆಸರಿಟ್ಟನು. ನಾನು ಪಿತ್ರಾಲಯದಲ್ಲಿದ್ದು ಯಥಾವಿಧಿಯಾಗಿ ಪಿತೃಸೇವೆಯಲ್ಲಿದ್ದುಕೊಂಡಿದ್ದೆನು. ಸ್ವಾರ್ಥಸಿದ್ಧಿಗೋಸ್ಕರವಾಗಲಿ ತಂದೆಯ ಪ್ರೀತಿಲಾಭಕ್ಕೋಸ್ಕರವಾಗಲಿ ನಾನು ಪಿತೃಸೇವೆಯನ್ನು ಮಾಡಲಿಲ್ಲ; ಆ ಪಿತೃಸೇವೆಯಲ್ಲೆನಗೆ ಆಂತರಿಕವಾದ ಆನಂದವುಂಟಾಗಿದ್ದಿತು. ತಂದೆಯನ್ನು ಬಿಟ್ಟೆನಗಾರೂ ಇರಲಿಲ್ಲ. ಒಂದೊಂದುತಡವೆ ಪಿತೃಸೇವೆಗಿಂತಲೂ ಇಹಸಂಸಾರದಲ್ಲಿ ಮತ್ತಾವ ಸುಖವೂ ಇಲ್ಲವೆಂದು ತಿಳಿಯುತಿದ್ದೆನು. ತಂದೆಯು ನನ್ನ ಭಕ್ತಿಗೋಸ್ಕರ ಮೆಚ್ಚಿಯೋ ಅಥವಾ ಮನುಷ್ಯನಿಗೆ ಸ್ವಭಾವಸಿದ್ಧವಾದ ಗುಣದಿಂದಲೋ ನನ್ನನ್ನು ಬಹಳ ಸ್ನೇಹದಿಂದ ನೋಡುತಿದ್ದನು. ಸ್ನೇಹವು ಸಮುದ್ರಗಾಮಿಯಾಗುವ ನದಿಯಂತೆ ಕ್ಷಣೇಕ್ಷಣೇ ವೃದ್ಧಿಯನ್ನೈದುತ್ತದೆ. ನನ್ನ ಸುಖವಾಸರವು ಆ ವಧ್ಯಭೂಮಿಯಲ್ಲಿ ಕಂದಿಹೋದಾಗ ನನ್ನ ತಂದೆಗೆನ್ನಮೇಲೆ ಎಷ್ಟೊಂದನಿರ್ವಚನೀಯವಾದ ಸ್ನೇಹವಿದ್ದಿತೆನ್ನುವುದು ಗೊತ್ತಾಯಿತು.''

---

## ಏಳನೆಯ ಪರಿಚ್ಛೇದ

## ವಿಮಲೆಯ ಪತ್ರ ಸಮಾಪ್ತ

"ಮಂಡಾರಣದುರ್ಗದಲ್ಲೊಬ್ಬ ದರಿದ್ರಳಾದ ರಮಣಿಯು ನನ್ನ ತಂದೆಗೆ ಗರ್ಭವತಿಯಾಗಿದ್ದಳೆಂದು ಹೇಳಿದ್ದೇನಷ್ಟೆ; ನನ್ನ ತಾಯಿಯ ಅದೃಷ್ಟದಲ್ಲಿ ಹೇಗಿದ್ದಿತೋ ಆ ದರಿದ್ರಳ ಅದೃಷ್ಟವೂ ಹಾಗೇವೇ ಆಯಿತು. ಅವಳ ಹೊಟ್ಟೆಯಲ್ಲಿಯೂ ಒಂದು ಕನ್ಯೆಯು ಹುಟ್ಟಿದ ಸ್ವಲ್ಪಕಾಲದಲ್ಲಿಯೇ ಅವಳ ಪತಿಯು ಮೃತನಾಗಿ ಹೋದನು. ಅವಳೆನ್ನ ತಾಯಿಯಂತೆ ಸ್ವಂತ ಪರಿಶ್ರಮದಿಂದ ಅರ್ಥೋಪಾರ್ಜನೆಯನ್ನು ಮಾಡಿಕೊಂಡು ಕನ್ಯೆಯನ್ನು ಪರಿಪಾಲನೆಮಾಡುತಿದ್ದಳು. ವಿಧಾತೃವಿನ ಸೃಷ್ಟಿಕ್ರಮದಲ್ಲಿ ಆಕರವು ಇದ್ದಂತೆ ತದುಪಯುಕ್ತವಾದ ಸಾಮಗ್ರಿಯು ಹುಟ್ಟುವುದು ವಿಧಿಯಲ್ಲವು. ಪರ್ವತದ ಪಾಷಾಣದಲ್ಲಿಯೂ

ಕೋಮಲವಾದ ಕುಸುಮಲತೆಯು ಹುಟ್ಟುವುದುಂಟು. ಅಂಧಕಾರಮಯವಾದ ಖನಿಯಲ್ಲಿಯೂ ಉಜ್ವಲವಾದ ರತ್ನವು ಸಿಗುವುದು. ಆ ದರಿದ್ರಳ ಹೊಟ್ಟೆಯಲ್ಲಿಯೂ ಅದ್ಭುತ ಸುಂದರವಾದ ಕನ್ಯಾರತ್ನವು ಹುಟ್ಟಿತು. ಆ ವಿತಂತುವಿನ ಕನ್ಯೆಯು ಮಂದಾರಣದುರ್ಗದಲ್ಲಿ ಪ್ರಸಿದ್ಧವಾದ ಸುಂದರಿಯೆಂದು ಪರಿಗಣಿತಳಾದಳು. ಕಾಲಕ್ರಮದಲ್ಲಿ ಎಲ್ಲವೂ ಲಯವಾಗಿ ಹೋಗುತ್ತಿದೆ. ಕಾಲಕ್ರಮದಲ್ಲಿ ದರಿದ್ರಳಾದಾ ವಿಧವೆಯ ಕಳಂಕವೂ ಲಯವಾಗಿ ಹೋಯಿತು. ಆ ದರಿದ್ರಳ ಕನ್ಯೆಯು ಜಾರಜಳೆಂಬುವುದನ್ನನೇಕರು ಮರೆತುಬಿಟ್ಟರು. ಕೆಲವರಿಗದು ಗೊತ್ತಿರಲಿಲ್ಲ. ಅರಮನೆಯಲ್ಲದಾರಿಗೂ ತಿಳಿದಿರಲಿಲ್ಲ. ಅಧಿಕ ಹೇಳಲೇಕೆ? ಅದೇ ಸುಂದರಿಯು ತಿಲೋತ್ತಮೆಯನ್ನು ಗರ್ಭಧಾರಣೆ ಮಾಡಿದಳು.

ತಿಲೋತ್ತಮೆಯು ಮಾತೃಗರ್ಭದಲ್ಲಿರುವಾಗಲೆನ್ನ ವಿವಾಹಕ್ಕೆ ಕಾರಣವಾದೊಂದು ಘಟನಾವಿಶೇಷವು ಸಂಭವಿಸಿತು; ಅದೇ ಸಮಯದಲ್ಲೊಂದುದಿನ ನನ್ನ ತಂದೆಯು ತನ್ನ ಅಳಿಯನನ್ನು ನಮ್ಮ ಆಶ್ರಮಕ್ಕೆ ಕರೆತಂದು, ಅವನು ತನ್ನ ಶಿಷ್ಯನೆಂದು ನನ್ನೊಂದಿಗೆ ಹೇಳಿದನು. ಆದರೆ ನಾನು ನನ್ನ ಸ್ವರ್ಗೀಯ ಸ್ವಾಮಿಯಿಂದವನ ನಿಜವಾದ ಪರಿಚಯವನ್ನು ತಿಳಿದುಕೊಂಡೆನು.

ನಾನವನನ್ನು ನೋಡಿದ ಮೊದಲ್ಗೊಂಡೆನ್ನ ಮನಸ್ಸು ನನ್ನದಾಗದೆ ಹೋಯಿತು. ಆತನು ಪ್ರತಿದಿನವೂ ನನ್ನ ತಂದೆಯ ಬಳಿಗೆ ಬಂದು ಬಹಳ ಹೊತ್ತಿದ್ದು, ಅನೇಕ ಸಮಾಚಾರಗಳನ್ನು ಹೇಳುವನು; ಕಥೆಗಳನ್ನು ಹೇಳುತ್ತಿರುವನು. ನಾನದನ್ನೆಲ್ಲಾ ಕೇವಲ ಧರ್ಮೋಪದೇಶವೆಂದು ಕೇಳುತ್ತಿರುವೆನು. ಕಡೆಗೆ ನಾನವನಿಗೆ ಮನಸಾ ವಿಕ್ರೀತೆಯಾಗಿ ಹೋದೆನು. ಅವನೂ ನನ್ನನ್ನು ತಿರಸ್ಕರಿಸಲಿಲ್ಲ. ಪರಸ್ಪರ ಇಚ್ಛೆಗತೆಯಿಂದ ನಮ್ಮಿಬ್ಬರ ಮನಸ್ಸನ್ನೊಂದಾಗಿ ಮಾಡಿಕೊಂಡೆವು. ನಾನವನೊಂದಿಗೆ ಮಾತನಾಡಿದೆನು. ಅವನೂ ಏಕಾಂತವಾಗೆನ್ನೊಂದಿಗೆ ಮಾತನಾಡಿದನು. ಮೃದುಮಧುರವಾದಾ ಮಾತುಗಳೀಗಲೂ ನನ್ನ ಕಿವಿಯಲ್ಲಿ ಕೇಳುವಂತಿವೆ.

ಆದರೆ ನಾನಷ್ಟೊಂದು ಸುಲಭವಾಗಿ ಮನಸಾ ವೀರೇಂದ್ರಸಿಂಹನಿಗೆ ವಿಕ್ರೀತೆಯಾದರೂ ವಿವಾಹವಿಲ್ಲದೆ ನನ್ನನ್ನವನು ಪಡಯಲಾರನೆಂದು ಸಂಕಲ್ಪ ಮಾಡಿಕೊಂಡಿದ್ದೆನು. ಏಕೆಂದರೆ, ಒಮ್ಮೊಮ್ಮೆ ನನ್ನ ತಾಯಿಯ ಅವಸ್ಥೆಯು ನನ್ನ ನೆನಪಿಗೆ ಬರುತ್ತಿದ್ದಿತು. ನನ್ನ ತಂದೆಯೂ ಈ ವೃತ್ತಾಂತವನೆಲ್ಲಾ ತಿಳಿದುಕೊಂಡನು. ಒಂದಾನೊಂದು ದಿನ ವೀರೇಂದ್ರಸಿಂಹನಿಗೂ ನನ್ನ ತಂದೆಗೂ ಕೆಲವು ಪ್ರಶ್ನೋತ್ತರಗಳು ನಡೆದವು. ನಾನವನ್ನು ಮರೆಯಲ್ಲಿದ್ದು ಕೇಳುತಿದ್ದೆನು.

"ನನ್ನ ತಂದೆ—ನಾನು ವಿಮಲೆಯನ್ನು ಬಿಟ್ಟು ಮತ್ತೆಲ್ಲಿಯೂ ಇರಲಾರೆನು. ವಿಮಲೆಯು ನಿನ್ನ ಧರ್ಮಪತ್ನಿಯಾಗುವಪಕ್ಷಕ್ಕೆ ನಾನು ನಿನ್ನ ಬಳಿಯಲ್ಲಿರುವೆನು. ಹಾಗೆ ನಿನ್ನ ಅಭಿಪ್ರಾಯವಿಲ್ಲದಿದ್ದರೆ—

ಮಾತು ಮುಗಿಯುವುದರೊಳಗೆ ಸ್ವರ್ಗಸ್ಥನಾಗಿರುವೆನ್ನ ಸ್ವಾಮಿಯು, 'ಸ್ವಾಮಿ! ಶೂದ್ರ ಕನ್ಯೆಯನ್ನು ಹೇಗೆ ವಿವಾಹಮಾಡಿಕೊಳ್ಳಲಿ?' ಎಂದು ಹೇಳಿದನು.

ನನ್ನ ತಂದೆ—(ಶ್ಲೇಷಭಾವದಿಂದ) ಹಾಗಾದರೆ, ಜಾರಜಕನ್ಯೆಯನ್ನು ಹೇಗೆ ವಿವಾಹಮಾಡಿಕೊಂಡೆ?

ನನ್ನ ಪ್ರಾಣೇಶ್ವರ—(ಸ್ವಲ್ಪ ವಿಷಣ್ಣವದನನಾಗಿ) ನಾನವಳನ್ನು ವಿವಾಹಮಾಡಿಕೊಂಡಾಗ ಜಾರಜೆಯೆಂದು ತಿಳಿದಿರಲಿಲ್ಲ. ಈಗ ತಿಳಿದು ತಿಳಿದು ಶೂದ್ರ ಕನ್ಯೆಯನ್ನು ವಿವಾಹಮಾಡಿಕೊಳ್ಳಲೆ? ತಮ್ಮ ಜ್ಯೇಷ್ಠಕನ್ಯೆಯು ಜಾರಜೆಯಾಗಿದ್ದರೂ ಶೂದ್ರಿಯಾಗಿರಲಿಲ್ಲ.

ನನ್ನ ತಂದೆ—ಹಾಗೆ ನಿನಗೆ ವಿವಾಹಮಾಡಿಕೊಳ್ಳಲಿಷ್ಟವಿಲ್ಲದಿದ್ದರೆ ನೀನಿಲ್ಲಿಗೆ ಬಂದುಹೋಗುವುದರಿಂದ ವಿಮಲೆಗನಿಷ್ಟಘಟನೆಯಾಗುವುದು. ನೀನಿನ್ನು ಮುಂದೆ ಆಶ್ರಮಕ್ಕೆ ಬರುವುದರಿಂದ ಪ್ರಯೋಜನವಿಲ್ಲ. ನಾನೇ ನೀನಿರುವಲ್ಲಿಗೆ ಬಂದು ನೋಡುತ್ತೇನೆ.''

ನನ್ನ ತಂದೆಯು ಹಾಗೆಂದು ಹೇಳಿದ ಮೊದಲ್ಗೊಂಡೆನ್ನ ಸ್ವಾಮಿಯು ನಮ್ಮ ಮನೆಗೆ ಬರುವುದು ಕೆಲವು ದಿನಗಳವರೆಗೆ ನಿಂತುಹೋಯಿತು. ಪ್ರತಿದಿನವೂ ಚಾತಕ ಪಕ್ಷಿಯಂತೆ ನಾನೆನ್ನ ಸ್ವಾಮಿಯನ್ನೇ ಎದುರುನೋಡುತಿದ್ದೆನು. ಆದರೆನ್ನ ಆಶೆಯು ಪ್ರತಿದಿನವೂ ನಿಷ್ಫಲವಾಗುತಿದ್ದಿತು. ಕೆಲವು ದಿನಗಳಾದ ಬಳಿಕ ಅವನು ತಟಸ್ಥನಾಗಿರಲಾರದೆ ಪುನಃ ಬರುವುದಕ್ಕೆ ತೊಡಗಿದನು. ಆಗ ನಾನು ಮೊದಲಿನಂತೆ ಲಜ್ಜಿತೆಯಾಗಿರಲಿಲ್ಲ. ನನ್ನ ತಂದೆಯಿದನ್ನು ಕಂಡು, ಒಂದು ದಿನ ನನ್ನನ್ನು ಕರೆದು, ತಾನು ಅನಾಶ್ರಮವ್ರತವನ್ನವಲಂಬನಮಾಡುವುದರಿಂದ ನಾನು ತನ್ನ ಸಂಗಡಿರಲಾಗದಾದಕಾರಣ 'ನೀನೆಲ್ಲಿರುವೆ?' ಎಂದು ಕೇಳಿದನು.

ನಾನು ತಂದೆಯನ್ನು ಬಿಟ್ಟಿರಲು ಕಾತರೆಯಾಗಿ ರೋದನಮಾಡತೊಡಗಿದವಳು ತಂದೆಯ ಸಂಗಡಲೇ ಹೋಗುವೆನೆಂದೂ, ಹಾಗಾಗದಿದ್ದರೆ, ಕಾಶೀಧಾಮದಲ್ಲಿ ಏಕಾಕಿನಿಯಾಗಿದ್ದಂತೆ ಅಲ್ಲಿಯೇ ಇರುವೆನೆಂದೂ ಹೇಳಿದೆನು.

ತಂದೆಯು, 'ಹಾಗಾಗುವುದಿಲ್ಲ, ವಿಮಲೆ! ನಾನು ಮತ್ತೊಂದುತ್ತಮ ವಾದೇರ್ಪಾಡನ್ನು ಮಾಡಿದ್ದೇನೆ; ನಾನಿರುವಾಗಲೇ ನೀನು ಮಹಾರಾಜಾ ಮಾನಸಿಂಹನ ನವೋಢಾ* ಮಹಿಷಿಯ ಸಹಚಾರಿಣಿಯಾಗಿರಲು ಗೊತ್ತುಮಾಡಿದ್ದೇನೆ' ಎಂದನು.

ನಾನು ಅಳುತ್ತಾ, 'ನನ್ನನ್ನು ಬಿಟ್ಟುಹೋಗಬೇಡಿರಿ' ಎಂದೆನು.

ತಂದೆಯು, 'ಇಲ್ಲ, ನಾನೀಗೆಲ್ಲಿಯೂ ಹೋಗುವುದಿಲ್ಲ. ನೀನು ರಾಜಾ

* ನವೋಢಾ=ಹೊಸದಾಗಿ ಮದುವೆಯಾದ.

ಮಾನಸಿಂಹನ ಗೃಹದಲ್ಲಿರು, ನಾನಿರುವುದರಿಂದ ಪ್ರತ್ಯಹವೂ ಬಂದು ನೋಡು ವೆನು—ನೀನಲ್ಲಿರುವುದಕ್ಕೆ ತಕ್ಕನುಕೂಲಗಳನ್ನು ಮಾಡುವೆನು' ಎಂದನು.

ಯುವರಾಜ! ನಾನಾಗ ನಿನ್ನ ಗೃಹದಲ್ಲಿ ಪುರಾಂಗನೆಯಾದೆನು. ತಂದೆಯು ಉಪಾಯದಿಂದೆನ್ನನ್ನು ತನ್ನ ಅಳಿಯನ ಕಣ್ಣಿಗೆ ಕಾಣದಂತೆ ದೂರಮಾಡಿದನು.

ಯುವರಾಜ! ನಾನು ನಿನ್ನ ತಂದೆಯ ಗೃಹದಲ್ಲಿ ಬಹುಕಾಲ ಪೌರಸ್ತ್ರೀ ಯಾಗಿದ್ದೆನು. ಆದರೆ ನೀನೆನ್ನನ್ನು ತಿಳಿದಿರಲಿಲ್ಲ. ನೀನಾಗ ಹತ್ತುವರುಷದ ಬಾಲಕನಾಗಿ ಅಂಬರದಲ್ಲಿ ರಾಜವಾಟಿಯಲ್ಲಿ ನಿನ್ನ ಮಾತೃಸನ್ನಿಧಾನದಲ್ಲಿದ್ದೆ. ನಾನು ನಿನ್ನ ಸಹಮಾತೃವಿನ ಸಹಚರ್ಯದಲ್ಲಿ ದಿಲ್ಲಿಯಲ್ಲಿದ್ದೆನು. ಮಹಾರಾಜಾ ಮಾನಸಿಂಹನ ಕಂಠದಲ್ಲಿ ಕುಸುಮಮಾಲೆಯಂತೆ ಅಸಂಖ್ಯಾಕ ರಮಣಿಯರು ಗ್ರಥಿತರಾಗಿದ್ದರು. ನೀನು ನಿನ್ನ ಸಹಮಾತೃಗಳನ್ನೆಲ್ಲಾ ಬಲ್ಲೆಯಾ? ಜೋಧ ಪುರದ ಮಹಾರಾಜನ ಮಗಳಾದ ಊರ್ಮಿಳೆಯು ಜ್ಞಾಪಕವಿದಿಯೆ? ಊರ್ಮಿ ಳೆಯ ಸುಗುಣಗಳನ್ನು ನಾನೆಷ್ಟೆಂದು ಹೇಳಲಿ? ಅವಳೆನ್ನನ್ನು ತನ್ನ ಸಹಚಾರಿಣಿ ಅಥವಾ ದಾಸಿಯೆಂದು ತಿಳಿದಿರಲಿಲ್ಲ. ಅವಳೆನ್ನನ್ನು ತನ್ನ ಪ್ರಾಣಾಧಿಕೆಯಾದ ಸೋದರಿಯಂತೆ ಭಾವಿಸುತಿದ್ದಳು. ಅವಳೆನಗೆ ಬಹುಪ್ರಯತ್ನಪಟ್ಟು ಅನೇಕ ವಿದ್ಯೆಗಳನ್ನು ಕಲಿಸಿದಳು. ನಾನವಳ ಮನೋರಂಜನಾರ್ಥವಾಗಿ ನೃತ್ಯ ಗೀತಾದಿ ಕಲಾವಿದ್ಯೆಗಳನ್ನು ಕಲಿತೆನು. ಅವಳೆನಗೆ ಸ್ವಂತವಾಗಿ ಓದುಬರಹವನ್ನು ಕಲಿಸಿ ದಳು. ಆಕೆಯ ದಯೆಯಿಂದೀ ಕಾಗದವನ್ನು ಬರೆಯಲು ಶಕ್ತಳಾಗಿದ್ದೇನೆ.

ಸಖಿಯಾದ ಊರ್ಮಿಳೆಯ ಕೃಪೆಯಿಂದೆನಗೆ ಮತ್ತೂ ಅನೇಕ ದೊಡ್ಡ ದೊಡ್ಡ ಉಪಕಾರಗಳಾದುವು. ಅವಳೆನ್ನನ್ನೆಷ್ಟೊಂದು ಅಂತಃಕರಣದಿಂದ ನೋಡು ತಿದ್ದಳೋ, ಅಷ್ಟೊಂದಾದರದಿಂದ ಮಹಾರಾಜಾ ಮಾನಸಿಂಹನಿಗೆನ್ನ ಪರಿ ಚಯವನ್ನು ಹೇಳಿದಳು. ಆಗೆನಗೆ ತಕ್ಕಮಟ್ಟಿಗೆ ಸಂಗೀತದಲ್ಲಿ ಪರಿಶ್ರಮ ವುಂಟಾಗಿದ್ದಿತು. ಮಹಾರಾಜನೆನ್ನ ಗಾಯನವನ್ನು ಕೇಳಿ ಅತ್ಯಂತ ಪ್ರೀತ ನಾಗುವನು. ಆವಕಾರಣದಿಂದಲೇ ಆಗಲಿ, ಫಲತಃ, ನನ್ನನ್ನವನು ನಿಜಪರಿ ವಾರದವಳೆಂದು ಭಾವಿಸುತಿದ್ದನು. ಅವನೆನ್ನ ತಂದೆಯನ್ನು ಭಕ್ತಿಪುರಸ್ಸರವಾಗಿ ನೋಡುತಿದ್ದನು. ನನ್ನ ತಂದೆಯು ನನ್ನನ್ನು ನೋಡುವುದಕ್ಕೆ ಪದೇಪದೇ ಬರುತಿದ್ದನು.

ಊರ್ಮಿಳಾದೇವಿಯ ಬಳಿಯಲ್ಲಿ ಸರ್ವಾಂಶದಲ್ಲಿಯೂ ಸುಖಿಯಾಗಿದ್ದೆನು. ಆದರೊಂದು ಮಾತ್ರ ಪರಿತಾಪವಿದ್ದಿತು. ಆರಿಗೆ ಸಲುವಾಗಿ ಧರ್ಮವನ್ನು ಹೊರತು ಸರ್ವಸ್ವವನ್ನೂ ತ್ಯಜಿಸಲು ಸಿದ್ಧವಾಗಿದ್ದೆನೊ, ಆತನ ದರ್ಶನವಾಗು ತ್ತಿರಲಿಲ್ಲ. ಆತನು ನನ್ನನ್ನು ಮರೆತನೆಂದು ತಿಳಿಯುವುದಕ್ಕಾಗದು. ಯುವ ರಾಜ! ಆಶ್ಮನಿಯೆಂಬ ಹೆಸರಿನ ಪರಿಚಾರಿಕೆಯು ಜ್ಞಾಪಕವಿದಿಯೆ? ಇದ್ದರೂ ಇರಬಹುದು. ಆಶ್ಮನಿಯಲ್ಲೆನಗೆ ಹೆಚ್ಚು ನಂಬಿಕೆ. ನನ್ನ ವಲ್ಲಭನ ಸಮಾಚಾರ

ವನ್ನು ತರಲು ಅವಳನ್ನು ಕಳುಹುತಿದ್ದೆನು. ಅವಳಾತನನ್ನು ಕಂಡು ನನ್ನ ಸಮಾಚಾರವನ್ನವನಿಗೆ ತಿಳಿಸಿ, ಅವನ ಸಮಾಚಾರವನ್ನೆನಗೆ ತಿಳಿಸುತ್ತಿರುವಳು. ನಾನವನಿಗೆ ಕಾಗದಗಳನ್ನು ಬರೆಯುತಿದ್ದೆನು. ಅವನೆನಗೆ ಪ್ರತ್ಯುತ್ತರಗಳನ್ನು ಬರೆಯುತಿದ್ದನು. ಅವನು ಬರೆದುದನೆಲ್ಲಾ ಹೇಗೆಂದು ವರ್ಣಿಸಲಿ? ಪ್ರತಿದಿನವೂ ಉತ್ತರ ಪ್ರತ್ಯುತ್ತರಗಳು ನಡೆಯುತಿದ್ದುವು. ಈ ಪ್ರಕಾರ ಪರೋಕ್ಷದಲ್ಲಿಯೂ ಪರಸ್ಪರ ಮಾತನಾಡುತಿದ್ದೆವು.

ಹೀಗೆ ಮೂರು ವರುಷಕಾಲ ಕಳೆಯಿತು. ಹೀಗೆ ಮೂರು ವರುಷಗಳಾದರೂ ನಾವು ಪರಸ್ಪರ ಮರೆಯಲಿಲ್ಲವಾದಕಾರಣ ನಮ್ಮ ನಮ್ಮ ಪ್ರಣಯವು ಕೇವಲ ಶೈವಾಲದ ಪುಷ್ಪದಂತೆ* ನೀರಿನಮೇಲೆ ಭಾಸಮಾನವಾದುದಲ್ಲವೆಂದೂ ಆದರದು ಪದ್ಮದೋಪಾದಿಯಲ್ಲಿ ಬದ್ಧಮೂಲವುಳ್ಳುದುದಾಗಿದ್ದಿತೆಂದೂ† ತಿಳಿದೆವು. ಆವಕಾರಣದಿಂದಲೋ (ಕಾರಣವನ್ನು ಗೊತ್ತುಹಚ್ಚಿ ಹೇಳುವುದಸಾಧ್ಯ) ನನ್ನ ಪ್ರಿಯನಿಗೊಮ್ಮೊಂದೊಮ್ಮೆ ತಾಳ್ಮೆಯಿಲ್ಲದೆ ಅವನೊಂದು ದಿನ ವಿಪರೀತ ಮಾಡಿಬಿಟ್ಟನು. ನಿಶಿಯಲ್ಲಿ ನಾನೊಬ್ಬಳೇ ನನ್ನ ಚಿಕ್ಕಮನೆಯಲ್ಲಿ ಮಲಗಿದ್ದೆನು. ಅಕಸ್ಮಾತ್ತಾಗೆನಗೆ ನಿದ್ರಾಭಂಗವಾಗಿ ಕಣ್ಣು ತೆರೆದು ನೋಡಲಾಗ ತಲೆಯಕಡೆಯಲ್ಲೊಬ್ಬ ಮನುಷ್ಯನು ನಿಂತಿದ್ದುದನ್ನು ಕಂಡೆನು.

ಆಗವನು ಹೆಚ್ಚು ಮಧುರ ಸ್ವರದಿಂದ, 'ಪ್ರಾಣೇಶ್ವರಿ! ಭಯಪಡಬೇಡ, ನಾನು ನಿನ್ನ ಪ್ರಿಯನು' ಎಂದು ಹೇಳಿದ ಮಾತು ಕಿವಿಗೆ ಬಿದ್ದಿತು.

ನಾನೇನೆಂದುತ್ತರವನ್ನು ಹೇಳಲಿ? ಮೂರು ವರುಷಗಳು ಕಳೆದುಹೋದ ಬಳಿಕ ದರ್ಶನವಾದುದು! ಮೂರು ವರ್ಷದಮೇಲೂ ಎಷ್ಟೋ ಕಾಲ ಕಳೆದು ಹೋಗಿದ್ದಿತು!! ಅವೆಲ್ಲವನ್ನೀಗ ಹೇಳಲು ಮರೆತುಹೋಗಿದೆ. ನಾನವನ ಕಂಠಾಲಿಂಗನೆಮಾಡಿಕೊಂಡು ರೋದನಮಾಡಿದೆನು. ಮಾತು ಹೊರಡದು!!!

ಸ್ವಲ್ಪ ಹೊತ್ತಾದ ಬಳಿಕ ವಾಕ್ಯಸ್ಫೂರ್ತಿಯುಂಟಾಗಿ, 'ಅಂತಃಪುರಕ್ಕೆ ಹೇಗೆ ಬಂದೆ?' ಎಂದು ಕೇಳಲು; 'ಅಶ್ಮನಿಯು ಕರೆತಂದಳು' ಎಂದು ಹೇಳಿ, 'ಅದು ವರೆಗಲ್ಲಿ ಅವಿತುಕೊಂಡಿದ್ದೆನು' ಎಂದು ಹೇಳಿದನು. ನಾನು, 'ಹೇಗೆ?' ಎಂದು ಕೇಳಿದುದಕ್ಕೆ, 'ನಿನ್ನಿಷ್ಟವಿದ್ದಂತೆ ಮಾಡು' ಎಂದನು.

ನಾನು ಯೋಚಿಸತೊಡಗಿದೆನು. ಮನಸ್ಸಾವ ಕಡೆಯೋ ಮತಿಯೂ ಅತ್ತ ಕಡೆಗೆಳೆಯುತಿದ್ದಿತು. ಯೋಚನೆಮಾಡುತಿದ್ದಹಾಗೆ ನಾವಿದ್ದ ಕೊಟಡಿಯ ಬಾಗಿಲು ಅಕಸ್ಮಾತ್ತು ಹಿಂದಕ್ಕೆ ತೆರೆಯಲ್ಪಟ್ಟಿತು. ನೋಡಲಾಗ ಸಾಕ್ಷಾತ್ತು ಮಹಾರಾಜಾ ಮಾನಸಿಂಹನು ವೀರೇಂದ್ರಸಿಂಹನಿಗೆ ರಾಜದಂಡನೆಯಾಗತಕ್ಕುದೆಂದು ಹೇಳಿದನು. ಅದನ್ನು ಕೇಳಿ, ನನ್ನ ಹೃದಯವು ಹೇಗಾಯಿತೋ

* ಶೈವಾಲದ ಪುಷ್ಪ = ಪಾಚಿಯಮೇಲಿನ ಹೂವು.

† ಬದ್ಧಮೂಲವುಳ್ಳ = ಬೇರೂರಿದ.

ಈಗದನ್ನು ವಿವರಿಸಿ ಹೇಳಲಾರೆನು. ನಾನು ಊರ್ಮಿಳಾದೇವಿಯ ಬಳಿಗೆ ಹೋಗಿ ಅಳುತ ಅವಳ ಕಾಲಿನಮೇಲೆ ಬಿದ್ದೆನ್ನಪರಾಧವನ್ನೆಲ್ಲಾ ವಿವರಿಸಿ ಹೇಳಿದೆನು. ಸರ್ವಾಪರಾಧವೆನ್ನಿಂದಲೇ ಆಯಿತೆಂದು ಹೇಳಿಕೊಂಡೆನು. ನಾನು ತಂದೆಯನ್ನು ನೋಡಿ ಅವನ ಪಾದಗಳಮೇಲೆ ಬಿದ್ದೆನು. ಮಹಾರಾಜನು ನನ್ನ ತಂದೆಯನ್ನು ಗುರುವಿನಂತೆ ಭಾವಿಸುತಿದ್ದನಾದಕಾರಣ ಆತನು ಹೇಳಿದರೆ ಮಹಾರಾಜನು ಕೇಳುವನೆಂದು ತಿಳಿದು, ತಂದೆಯನ್ನು ಕುರಿತು, 'ತಮ್ಮ ಜ್ಯೇಷ್ಠ ಕುಮಾರ್ತಿಯನ್ನು ಜ್ಞಾಪಿಸಿಕೊಳ್ಳಿರಿ' ಎಂದು ಹೇಳಿದೆನು. ಕಡೆಗೆ ತಂದೆಯು ಮಹಾರಾಜರಲ್ಲಿ ಹೇಗೋ ಯುಕ್ತಿಯಾಗಿ ಹೇಳಿದಂತೆ ತೋರುತ್ತದೆ. ಮಧ್ಯೆ ಸ್ವಲ್ಪ ಕಾಲ. ನನ್ನ ತಂದೆಯು ನನ್ನ ರೋದನಕ್ಕೆ ಕಿವಿಗೊಡುತಿರಲಿಲ್ಲ. ನಾನೇನನ್ನಾದರೂ ಹೇಳತೊಡಗಿದರೆ ರುಷ್ಟನಾಗಿ, 'ಪಾಪೀಯಸಿ! ನೀನೊಮ್ಮೆಗೆ ಲಜ್ಜೆಯನ್ನು ತೊರೆದುಬಿಟ್ಟೆ' ಎಂದು ಹೇಳುತ್ತಿರುವನು.

ಊರ್ಮಿಳಾದೇವಿಯು ನನ್ನ ಪ್ರಾಣರಕ್ಷಾರ್ಥವಾಗಿ ಮಹಾರಾಜನಲ್ಲಿ ಬಹುವಿಧವಾಗಿ ಹೇಳಿದಳು. ಮಹಾರಾಜನು, 'ಕಳ್ಳನು ವಿಮಲೆಯನ್ನು ಮದುವೆಮಾಡಿಕೊಂಡರೆ ಅವನನ್ನು ಬಿಡುವೆನು' ಎಂದು ಹೇಳಿದನು.

ನಾನು ಮಹಾರಾಜನ ಅಭಿಸಿದ್ಧಿಯನ್ನು ತಿಳಿದು ಸುಮ್ಮನಾದೆನು. ನನ್ನ ಪ್ರಾಣೇಶ್ವರನಾದರೋ, ಮಹಾರಾಜನ ಮಾತುಗಳನ್ನು ಕೇಳಿ ಅತ್ಯಂತ ಕೋಪಾವಿಷ್ಟನಾಗಿ, 'ನಾನು ಯಾವಜ್ಜೀವವೂ ಕಾರಾಗಾರದಲ್ಲಾದರೂ ಇರುವೆನು, ಪ್ರಾಣದಂಡನೆಗಾದರೂ ಒಳಪಡುವವನೇ ಹೊರತು ಶೂದ್ರ ಕನ್ಯೆಯನ್ನೆಂದಿಗೂ ವಿವಾಹಮಾಡಿಕೊಳ್ಳುವುದಿಲ್ಲ. ನೀನು ಹಿಂದೂ ರಾಜನಾಗಿದ್ದು ಶೂದ್ರಿಯನ್ನು ವಿವಾಹಮಾಡಿಕೊಳ್ಳುವಂತೆ ಅಪ್ಪಣೆಮಾಡುವುದುಚಿತವಲ್ಲ' ಎಂದು ಹೇಳಿದನು. ಅದಕ್ಕೆ ಮಹಾರಾಜನು, 'ನನ್ನ ಸ್ವಂತ ತಂಗಿಯನ್ನೇ ಷಹಜಾದೆ ಸೆಲಿಮುನಿಗೆ ಕೊಟ್ಟು ಲಗ್ನಮಾಡಿಕೊಟ್ಟಿರುವಾಗ, ನೀನು ಬ್ರಾಹ್ಮಣ ಬೀಜೋತ್ಪನ್ನೆಯಾದ ಕನ್ಯೆಯನ್ನು ವಿವಾಹವಾಗಕೂಡದೇಕೆ?' ಎಂದನು. ವೀರೇಂದ್ರನು ಸಮ್ಮತಿಸಲಿಲ್ಲ. ಅವನು, 'ಮಹಾರಾಜನೆ! ಹೇಗಾದರೂ ಆಗಲಿ, ನನ್ನನ್ನು ಸೆರೆಯಿಂದ ಬಿಟ್ಟರೆ, ಪುನಃ ವಿಮಲೆಯ ಹೆಸರನ್ನು ಹೇಳುವುದಿಲ್ಲ' ಎಂದನು.

ಮಹಾರಾಜನು, 'ಹಾಗಾದರೆ, ನೀನು ಅಪರಾಧಿಯಾಗುತ್ತಿ, ಅಪರಾಧಕ್ಕೆ ಪ್ರಾಯಶ್ಚಿತ್ತಬೇಡವೆ? ನೀನು ವಿಮಲೆಯನ್ನು ತ್ಯಾಗಮಾಡಿದರೆ, ಅನ್ಯರವಳನ್ನು ಕಳಂಕಿತಳೆಂದು ಸ್ಪರ್ಶಮಾಡಲಾರರು' ಎಂದನು. ಅಷ್ಟೊಂದು ಹೇಳಿದರೂ ವೀರೇಂದ್ರನು ವಿವಾಹಕ್ಕೆ ಸಮ್ಮತಿಸಲಿಲ್ಲ. ಕಡೆಗೆ ಕಾರಾಗಾರವಾಸವು ಕಷ್ಟಬೋಧೆಯಾಗಿ, ಬಳಿಕ ಅರ್ಧಸಮ್ಮತನಾಗಿ, 'ವಿಮಲೆಯು ನನ್ನ ಮನೆಯಲ್ಲಿ ಪರಿಚಾರಿಕೆಯಂತಿರಲು ಸಮ್ಮತಳಾದರೆ ಅವಳನ್ನು ಪಾಣಿಗ್ರಹಣಮಾಡಿಕೊಳ್ಳುವೆನು, ಯಾವಜ್ಜೀವವೂ ಈ ವಿವಾಹ ಪ್ರಸ್ತಾಪವನ್ನಾಗಲಿ ಅಥವಾ ನನ್ನ ಧರ್ಮ

ಪತ್ನಿಯೆಂದಾಗಲಿ ಅವಳು ಪ್ರಸ್ತಾಪಿಸಕೂಡದು, ಅದಕ್ಕೊಪ್ಪಿದರಾ ಶೂದ್ರ ಕನ್ಯೆಯನ್ನು ವಿವಾಹಮಾಡಿಕೊಳ್ಳುವೆನು' ಎಂದನು.

ನಾನು ವಿಪುಳ ಪುಳಕಿತೆಯಾಗಿ ಅದಕ್ಕೊಪ್ಪಿಕೊಂಡೆನು. ನಾನು ಧನಗೌರವಾದಿಗಳಲಾಶೆಯುಳ್ಳವಳಾಗಿರಲಿಲ್ಲ. ನನ್ನ ತಂದೆಯೂ ಮಹಾರಾಜನೂ ಸಮ್ಮತಿಸಿದರು. ನಾನು ದಾಸಿಯ ವೇಷದಲ್ಲಿ ರಾಜಭವನವನ್ನು ಬಿಟ್ಟು ನಿಜಭರ್ತೃವಿನ ಭವನಕ್ಕೆ ಬಂದೆನು.

ಅನಿಚ್ಛಾಪೂರ್ವಕವಾಗಿ ಪರರ ಬಲಾತ್ಕಾರಕ್ಕೆ ಸಲುವಾಗಿ ವಿವಾಹಮಾಡಿಕೊಂಡವನು ವಿವಾಹಿತೆಯಾಗಿದ್ದರೂ ಅಂತಹ ಹೆಂಗಸನ್ನು ಹೇಗೆ ಪ್ರೀತಿಸಲಾಪನು? ವಿವಾಹಾನಂತರ ನನ್ನ ಪ್ರಭುವು ನನ್ನ ಮೇಲೆ ವಿಷವನ್ನು ಕಾರುತಿದ್ದನು. ಪೂರ್ವದ ಪ್ರಣಯವೆಲ್ಲ ನಿರ್ಮೂಲವಾಗಿ ಹೋಗಿದ್ದಿತು. ಮಹಾರಾಜಾ ಮಾನಸಿಂಹನಿಂದ ಮಾಡಲ್ಪಟ್ಟ ಅಪಮಾನವು ಅವನ ಸ್ಮರಣೆಯಲ್ಲಿ ವಾಲಾಯವಾಗಿದ್ದು ನನ್ನನ್ನು ತಿರಸ್ಕರಿಸುತಿರುವನು. ಹಾಗೆ ಕೆಲವು ಕಾಲ ಕಳೆಯಿತು. ಹೇಳಿ ಪ್ರಯೋಜನವೇನು? ನನ್ನ ಪೂರ್ವಾಪರ ಪರಿಚಯವನ್ನು ಹೇಳಿದಂತಾಯಿತು. ಇತರ ಪ್ರಸ್ತಾಪದಿಂದ ಪ್ರಯೋಜನವಿಲ್ಲ. ಕಾಲಕ್ರಮೇಣ ಪುನಃ ನಾನೆನ್ನ ಸ್ವಾಮಿಯ ಪ್ರಣಯಭಾಗಿನಿಯಾದೆನು. ಆದರೂ ಅವನು ಅಂಬರಪತಿಯಮೇಲೆ ಮೊದಲಿನಂತೆ ವಿಷದೃಷ್ಟಿಯುಳ್ಳವನಾಗಿದ್ದನು. ಹಣೆಯ ಬರಹ! ಇಲ್ಲದಿದ್ದರೆ ಇದೆಲ್ಲಾ ಹೇಗೆ ಘಟಿಸುತಿದ್ದಿತು!!

ನನ್ನ ಪರಿಚಯವನ್ನು ಪೂರ್ತಿಯಾಗಿ ಕೊಟ್ಟಂತಾಯಿತು. ನಾನು ಕೇವಲ ವಾಗ್ದಾನಮಾಡಿದ್ದೆನೆಂಬುದರಮೇಲೆ ಇಷ್ಟು ಬರೆದವಳಲ್ಲ. ಅನೇಕರೆನ್ನನ್ನು ಕುಲಧರ್ಮವನ್ನು ಬಿಟ್ಟು ಮಂದಾರಣದುರ್ಗಾಧಿಪನ ಬಳಿಯಲ್ಲಿದ್ದೆನೆನ್ನುವರು. ನನಗೆ ಲೋಕಾಂತರಪ್ರಾಪ್ತಿಯಾದರಾ ಕಳಂಕದಿಂದೆನ್ನ ಹೆಸರನ್ನುದ್ಧಾರಮಾಡುವೆ ಎಂಬ ಭರವಸೆಯಿಂದ ನಿನಗಿಷ್ಟೊಂದು ವಿಜ್ಞಾಪಿಸಿಕೊಂಡಿದ್ದೇನೆ.

ಈ ಪತ್ರದಲ್ಲಿ ನನ್ನ ಸ್ವಂತ ವಿವರಣೆಯನ್ನೇ ಬರೆದಿದ್ದೇನೆ. ಮತ್ತಾವಳ ಸಮಾಚಾರವನ್ನು ತಿಳಿಯಲು ನೀನು ಚಂಚಲಚಿತ್ತನಾಗಿರುವಿಯೋ ಅವಳ ನಾಮೋಲ್ಲೇಖವನ್ನೂ ಮಾಡಿಲ್ಲ. ಆ ಹೆಸರು ಪೃಥಿವಿಯಲ್ಲಿ ಲೋಪವಾಯಿತೆಂದು ತಿಳಿ. 'ತಿಲೋತ್ತಮೆ' ಎಂಬುವಳಿದ್ದಳೆಂದು ಮಾತ್ರ ತಿಳಿದು, ಆ ಹೆಸರನ್ನು ಮರೆತುಬಿಡು—ಇತಿ.''

ಉಸ್ಮಾನನು ವಿಮಲೆಯ ಪತ್ರವನ್ನು ಪೂರ್ತಿಯಾಗಿ ಓದಿ, ವಿಮಲೆಯನ್ನು ಕುರಿತು, 'ಮಾತೆ! ನೀನೆನ್ನ ಪ್ರಾಣರಕ್ಷಣೆಯನ್ನು ಮಾಡಿದವಳು; ಅದಕ್ಕೆ ಪ್ರತ್ಯುಪಕಾರವನ್ನು ಮಾಡುವೆನು' ಎಂದನು.

ವಿಮಲೆಯು ಅಸುರುಸಿರನ್ನು ಬಿಟ್ಟು, 'ಇನ್ನೀ ಭೂಮಂಡಲದಲ್ಲೆನಗೆ

ಆಗಬೇಕಾದ ಉಪಕಾರವೇನಿದೆ? ನೀನು ನನಗಾವ ಉಪಕಾರವನ್ನು ಮಾಡ ಬಲ್ಲೆ? ಹಾಗಾದರೆ ಒಂದುಪಕಾರವನ್ನು........'

ಅಷ್ಟರೊಳಗೆ ಉಸ್ಮಾನನು, 'ನಾನದೇ ಉಪಕಾರವನ್ನು ಮಾಡುವೆನು' ಎಂದನು.

ವಿಮಲೆಯ ಕಣ್ಣುಗಳು ಉಜ್ವಲವಾಗಿ, 'ಉಸ್ಮಾನ್! ಏನನ್ನು ಹೇಳುತ್ತಿ? ದಗ್ಧವಾದೀ ಹೃದಯಕ್ಕೆ ಮತ್ತಾವ ಪ್ರವಂಚನೆಯನ್ನು ಮಾಡುತ್ತಿ?' ಎಂದಳು.

ಉಸ್ಮಾನನು ತನ್ನ ಕೈಯಲ್ಲಿದ್ದೊಂದುಂಗುರವನ್ನು ತೆಗೆದು ವಿಮಲೆಗೆ ಕೊಟ್ಟು, 'ನಿನ್ನಲ್ಲೀ ಉಂಗುರವನ್ನಿಟ್ಟುಕೊಂಡಿರು, ಇನ್ನೆರಡು ದಿವಸಗಳಲ್ಲದ ರಿಂದ ಕೆಲಸವು ಸಾಧನೆಯಾಗುವುದು—ಕತಲೂಖಾನನ ವರ್ಷ ವರ್ಧಂತಿಯು ಸಮಾಪಿಸಿತು. ಅಂದು ಬಹಳ ಉತ್ಸವವಾಗುವುದು. ಪಹರೇದವರೆಲ್ಲರೂ ಆಮೋದದಿಂದ ಮತ್ತರಾಗಿರುವರು. ಅಂದು ನಿನ್ನನ್ನುದ್ಧಾರಮಾಡುವೆನು. ನೀನಾದಿನ ಅರ್ಧರಾತ್ರಿಯಲ್ಲಿ ಅಂತಃಪುರದ ಬಾಗಿಲ ಬಳಿ ಬಂದು ನಿಂತಿದ್ದರೆ, ಅಲ್ಲಿ ಗೊಬ್ಬ ಸೇವಕನು ಬಂದು ಇದೇ ಮಾದರಿ ಮತ್ತೊಂದುಂಗುರವನ್ನು ತೋರು ವನು. ತೋರಿದೊಡನೆ ಅವನೊಂದಿಗೆ ಹೊರಟುಹೋಗು. ನಿಷ್ಕಂಟಕವಾಗಿ ನೀನು ಹೋಗಬೇಕೆಂಬಲ್ಲಿಗವನು ನಿನ್ನನ್ನು ಕೊಂಡೊಯ್ದು ಬಿಡುವನು. ಬಳಿಕ ಜಗದೀಶ್ವರನಿಷ್ಟವಿದ್ದಂತಾಗುತ್ತದೆ' ಎಂದನು.

ವಿಮಲೆಯು, 'ಜಗದೀಶ್ವರನು ನಿನ್ನನ್ನು ಚಿರಜೀವಿಯಾಗಿಟ್ಟಿರಲಿ' ಎಂದು ಹೇಳಿ, ಮುಂದೆ ಮಾತು ಸಾಗದೆ ಕಂಠರೋಧವಾಗಿ ಸುಮ್ಮನಿದ್ದಳು. ಅನಂತರ ಬೀಳ್ಕೊಂಡು ಹೋಗುವಾಗ ಉಸ್ಮಾನನು, 'ನೀನೊಬ್ಬಳೇ ಬರಬೇಕು, ಮತ್ತಾ ರನ್ನೂ ಸಂಗಡ ಕರೆತರಕೂಡದು. ಮತ್ತಾರನ್ನಾದರೂ ಸಂಗಡ ಕರೆತಂದರೆ ಕಾರ್ಯವು ಸಿದ್ಧಿಯಾಗದಲ್ಲದೆ ಪ್ರಮಾದ ಸಂಭವಿಸುವುದಕ್ಕೂ ಕಾರಣವಾಗು ವುದು' ಎಂದೆಚ್ಚರಿಸಿದನು.

ವಿಮಲೆಯು ಮನಸ್ಸಿನಲ್ಲಿ, ತಿಲೋತ್ತಮೆಯನ್ನು ಸಂಗಡ ಕರೆಕೊಂಡು ಹೋಗುವೆನೆಂದು ಭಯಗೊಂಡು ಹಾಗೆ ಹೇಳಿದನೆಂದು ತಿಳಿದು, ಇಬ್ಬರು ಹೋಗ ಲಾಗದಿದ್ದರೆ ತಿಲೋತ್ತಮೆಯೊಬ್ಬಳೇ ಹೋಗಬಹುದೆಂದುಕೊಂಡಳು.

ವಿಮಲೆಯು ಬೀಳ್ಕೊಂಡು ಹೊರಟುಹೋದಳು.

---

# ಎಂಟನೆಯ ಪರಿಚ್ಛೇದ

## ಆರೋಗ್ಯ

ಕಾಲವು ಕಳೆದುಹೋಗುವುದಲ್ಲದೆ ನಿಮ್ಮಿಷ್ಟದಂತೆ ನಿಲ್ಲದು. ಮಾನವನಾವ ಸ್ಥಿತಿಯಲ್ಲಿದ್ದರೂ ಕಾಲವು ಸ್ವಭಾವಸಿದ್ಧವಾದದರ ಚಕ್ರಾಕಾರದ ಭ್ರಮಣೆಯನ್ನು ಬಿಟ್ಟು ನಿಲ್ಲುವುದಿಲ್ಲ. ಪಥಿಕನೆ! ಬಲವಾದ ಚಂಡಮಾರುತ ದಿಂದ ಕೂಡಿದ ವೃಷ್ಟಿಧಾರೆಯು ತಲೆಯಮೇಲೆ ಬಿರುಸಾಗಿ ಹೊಡಿಯುತ್ತ ದಲ್ಲವೆ? ಉಚ್ಚ್ಚರವದಿಂದ ಘನಗರ್ಜನೆಯಾಗುತ್ತದಲ್ಲವೆ? ಸಿಡಿಲು ಹೊಡಿಯುತ್ತ ದಲ್ಲವೆ? ಮಳೆಯಲ್ಲಿ ತೋಯದಿರುವೆಯಲ್ಲವೆ? ಆನೆಕಲ್ಲು ಹೊಡಿಯುತ್ತದೆ, ಎತ್ತೆಡೆಯೂ ಆಶ್ರಯವು ಸಿಗದಲ್ಲವೆ? ಪಾಪ! ಸ್ವಲ್ಪ ಸಹಿಸಿಕೊಂಡಿರು. ಕಷ್ಟ ತರವಾದೀ ದಿನವು ಕಳೆದುಹೋಗುವುದು, ನಿಲ್ಲುವುದಿಲ್ಲ. ಸುದಿವಸವು ಬರು ವುದು, ನಾಳೆಯವರೆಗೆ ನೋಡು.

ಎಂತಹವರ ದಿನವು ಕಳೆದುಹೋಗದಿರುವುದು! ಆರ ದುಃಖವು ಸ್ಥಾಯಿ ಯಾಗಿರುವುದು? ರೋದನಮಾಡಲೇಕೆ? ಆರ ಸುಖವು ನಿರಂತರವಾಗಿರಬಲ್ಲದು? ದಂಭಮಾಡಲೇಕೆ?

ಆವನ ಕಾಲವು ನಡೆಯುವುದಿಲ್ಲ? ಈಗ ನೋಡು :—ತಿಲೋತ್ತಮೆಯು ಧೂಳಿಯ ರಾಶಿಯಲ್ಲಿ ಬಿದ್ದು ಹೊರಳುತ್ತಿದ್ದಾಳೆ. ಆದರೂ ಕಾಲವು ಕಳೆದು ಹೋಯಿತು.

ವಿಮಲೆಯ ಹೃದಯದಲ್ಲಿ ಪ್ರತಿಕ್ಷಣದಲ್ಲೂ ಪ್ರತಿಹಿಂಸಾರೂಪಕವಾದ ಕಾಲಸರ್ಪವು ಮಂಡಲಾಕಾರವಾಗಿ ಕುಳಿತು, ಸರ್ವ ಶರೀರವನ್ನೂ ವಿಷದಿಂದ ಜರ್ಜರಿತವನ್ನಾಗಿ ಮಾಡಿದೆ; ಆದರ ಕಡತದ ವೇದನೆಯನ್ನೊಂದು ಮುಹೂರ್ತ ವಾದರೂ ಸಹಿಸುವುದಸಹ್ಯವಾಗಿದೆ; ಅಂತಹ ಮುಹೂರ್ತವೊಂದು ದಿನಕ್ಕೆಷ್ಟು? ಹೇಳಿರಿ—ಆದರೂ ಅಂತಹ ದಿನವೂ ಕಳೆದುಹೋಗಿಲ್ಲವೆ?

ಕತಲೂಖಾನನು ಶತ್ರುವನ್ನು ಜಯಿಸಿ ಸಿಂಹಾಸನಾರೂಢನಾಗಿ ಸುಖ ದಿಂದ ಕಾಲಯಾಪನೆಮಾಡುತ್ತಾನೆ. ಆದರಾ ದಿನಗಳು ಕಳೆದುಹೋದವು. ನಿಂತಿವೆಯೆ?

ಜಗತ್ಸಿಂಹನು ರುಗ್ಣಶಯ್ಯೆಯಲ್ಲಿ ಮಲಗಿದ್ದಾನೆ. ರೋಗಿಗಳಿಗೆ ದಿನವು ದೀರ್ಘವಾದುದೆಂದಾರಿಗೆ ಗೊತ್ತಿಲ್ಲ? ಆದರಾ ದಿನವೂ ಕಳೆದುಹೋಯಿತು! ಅದೂ ನಿಲ್ಲಲಿಲ್ಲ.

ದಿನವು ಕಳೆಯಿತು. ದಿನೇದಿನೆ ಜಗತ್ಸಿಂಹನಿಗೆ ಆರೋಗ್ಯವುಂಟಾಗುತ್ತ ಬಂದಿತು. ರಾಜಪುತ್ರನೊಮ್ಮೆ ಯಮಲೋಕಕ್ಕೆ ಹೋಗಿ ನಿಷ್ಕೃತಿಯನ್ನು ಹೊಂದಿಬಂದ ಹಾಗಾಗಿ, ದಿನೇದಿನೆ ನಿರಾಪದವಾಗಿ ಆರೋಗ್ಯಲಾಭವನ್ನು

ಹೊಂದುತ್ತಾ ಬಂದನು. ಮೊದಲು ಶರೀರದ ಅಸುಸ್ಥಿತಿಯು ದೂರವಾಯಿತು. ಅನಂತರ ಹಸಿವುಂಟಾಗಿ ಆಹಾರದಲ್ಲಿ ಅಭಿರುಚಿಯುಂಟಾಯಿತು. ಅನಂತರ ಬಲವು ಬಂದಿತು. ಅನಂತರ ಯೋಚನೆಗೆ ಪ್ರಾರಂಭವಾಯಿತು. ಅವನಿಗುಂಟಾದ ಯೋಚನೆಗಳಾವುವೆಂದರೆ:—

ಮೊದಲನೆಯದು— ತಿಲೋತ್ತಮೆಯೆಲ್ಲಿದ್ದಾಳೆ? ರಾಜಕುಮಾರನು ಆರೋಗ್ಯಲಾಭವು ಹೆಚ್ಚಾದಹಾಗೆಲ್ಲ, ತಿಲೋತ್ತಮೆಯನ್ನು ಕುರಿತು ಅತಿಶಯವಾಗಿ ವಿಚಾರಪಡುತಿದ್ದನು. ಅದಕ್ಕೆ ಸರಿಯಾದುತ್ತರವನ್ನಾರೂ ಕೊಡುತ್ತಿರಲಿಲ್ಲ. ಆಯಷೆಗಾ ಸುದ್ದಿಯು ತಿಳಿಯದು; ಉಸ್ಮಾನನು ಹೇಳಲಾರನು; ದಾಸದಾಸೀಯರಿಗೆ ಗೊತ್ತಿಲ್ಲ; ಅಥವಾ ಆರೊಬ್ಬರೂ ಹೇಳಕೂಡದೆಂದು ರಾಜಾಜ್ಞೆಯಾಗಿರುವುದರಿಂದಾರೂ ಹೇಳುವುದಿಲ್ಲವೊ? ಹೇಗೆಂದು ಹೇಳುವುದಕ್ಕೂ ಆಗುವುದಿಲ್ಲ. ರಾಜಪುತ್ರನಾ ಯೋಚನೆಯಿಂದ ಹಂಸತೂಲಿಕಾತಲ್ಪಗತನಾಗಿದ್ದರೂ ಕಂಟಕಶಯ್ಯಾಶಾಯಿಯಂತೆ ಚಂಚಲಚಿತ್ತನಾಗಿದ್ದನು.

ಎರಡನೆಯದು—ತನ್ನ ಮುಂದಣ ಗತಿಯೇನಾಗುವುದು? ಆ ಪ್ರಶ್ನೆಗಾಗುತ್ತರವನ್ನಾರು ಕೊಡಬಲ್ಲರು? ರಾಜಪುತ್ರನು ತಾನು ಬಂಧನದಲ್ಲಿರುವುದಾಗಿಯೂ, ಕರುಣಾಹೃದಯರಾದ ಉಸ್ಮಾನ್, ಆಯಷೆಯರಿಬ್ಬರ ಕೃಪೆಯಿಂದ ಕಾರಾಗಾರವಾಸಕ್ಕೆ ಬದಲಾಗಿ ಸುಸಜ್ಜಿತವಾಗಿ ಸುವಾಸಿತವಾದ ಕೊಟಡಿಯಲ್ಲಿಡಲ್ಪಟ್ಟು ದಾಸದಾಸೀಯರ ಸೇವೆಗೆ ಪಾತ್ರನಾಗಿರುವಂತೆಯೂ ತಿಳಿದಿದ್ದನು. ಆವಾಗಾವ ಪದಾರ್ಥವನ್ನು ಬೇಕೆಂದರದು ಕೇಳಿದೊಡನೆ ಬಂದೊದಹುತಿದ್ದಿತು. ಆಯಷೆಯು ಸ್ವಂತವಾಗಿ ಸೋದರರಿಗಿಂತ ಅಧಿಕ ಸ್ನೇಹದಿಂದೆಲ್ಲವನ್ನೂ ಸಿದ್ಧಪಡಿಸುತಿದ್ದಳು. ಅಷ್ಟೊಂದು ಸಂಪತ್ತಿದ್ದರೂ ಬಾಗಿಲಲ್ಲಿ ಪಹರೇದವನು ಕಾದಿರುವನು. ಸ್ವರ್ಣಪಿಂಜರವಾಸಿಯಾಗಿ ಸುರಸವಾದ ಪಾನೀಯಗಳಿಂದ ಪರಿತೃಪ್ತವಾದ ವಿಹಂಗದಂತೆ ರುದ್ಧನಾಗಿದ್ದನು. ಮುಕ್ತನಾಗುವುದಾವಾಗ? ಮುಕ್ತಿಯಾಗುವ ಸಂಭವವೇನಾದರೂ ಇದ್ದಿತೆ? ಅವನ ಸೇನೆಯೆಲ್ಲಿ? ಸೇನಾಪತಿಯಿಲ್ಲದೆ ಸೇನೆಯವರ ಅವಸ್ಥೆಯೇನಾಗಬೇಕು?

ಮೂರನೆಯದು—ಆಯಷೆ—ಚಮತ್ಕಾರಕಾರಿಣಿಯಾದಾ ಪರಹಿತಮೂರ್ತಿಮತಿಯಾದವಳು ಮೃಣ್ಮಯವಾದೀ ಪೃಥಿವಿಗಿಳಿದು ಬಂದಳು ಹೇಗೆ! ಅವಳು ಲೇಶ ವಿರಾಮವಿಲ್ಲದೆ ಅಹೋರಾತ್ರಿ ತನ್ನ ಶುಶ್ರೂಷೆಮಾಡುತಿದ್ದುದನ್ನು ನೋಡಿದ್ದನು. ತನಗೆ ಆರೋಗ್ಯವಾಗುವವರೆಗೂ ಪ್ರತ್ಯಹವೂ ಪ್ರಭಾತ ಸೂರ್ಯೋದಯವಾದಂತೆ ಕುಸುಮದಾಮ ಹಸ್ತಳಾಗಿ ಲಾವಣ್ಯಮಯವಾದ ಹಜ್ಜೆಯನ್ನಿಡುತ್ತಾ ನಿಶ್ಶಬ್ದವಾಗಿ ಬರುತ್ತಿದ್ದುದನ್ನು ನೋಡಿದ್ದನು. ನಿಜವಾಗಿ ಮಹಾನುಭಾವಳಾದಾ ಆಯಷೆಯು ತನ್ನ ಆಹಾರಾದಿಗಳಿಗೆ ಹೊತ್ತುವಿಾರಿದರೂ ಕೊಟಡಿಯನ್ನು ಬಿಟ್ಟು ಹೋಗುತಲಿರಲಿಲ್ಲ. ಹೋದರೂ ಜಾಗ್ರತೆಯಾಗಿ ಹಿಂದಿರುಗಿ

ಬಂದುಬಿಡುವಳು. ಅವಶ್ಯಬಿದ್ದರೆ ಎದ್ದು ಹೋಗುವಳು. ತನ್ನ ತಾಯಿಯು ಕರೆಯಿಸಿದಾಗ ಹೋಗಿರುವಳು. ಮಿಕ್ಕ ಕಾಲದಲ್ಲೆಲ್ಲಾ ಅವನ ಶುಶ್ರೂಷೆ ಯಲ್ಲಿ ಅವಿರತಳಾಗಿರುವಳು.

ಎಷ್ಟೊಂದು ಮಂದಿ ರುಗ್ಣಶಯ್ಯೆಯಲ್ಲಿ ಮಲಗದಿರುವರು? ಅನೇಕರು ಮಲ ಗಿದ್ದಾರೆ. ಆದರಾವನಾದರೂ ರುಗ್ಣಶಯ್ಯೆಯಲ್ಲಿ ಮಲಗಿದ್ದವನೊಬ್ಬನ ಪಕ್ಕ ದಲ್ಲೊಬ್ಬ ಮನೋಮೋಹಿನಿಯಾದ ರಮಣಿಯು ಕುಳಿತುಕೊಂಡು ಸುರಮ್ಯ ವಾದ ವ್ಯಜನದಿಂದ ಘಾಳಿಯನ್ನು ಬೀಸುತ್ತಿದ್ದರೆ ಅಂತಹವನಿಗೆ ಮಾತ್ರ ರೋಗವೂ ಸುಖಕರವಾದುದೆಂದು ತಿಳಿಯಬರಬಹುದು.

ಪಾಠಕಮಹಾಶಯರೆ! ನೀವೂ ಜಗತ್ಸಿಂಹನ ಸ್ಥಿತಿಯನ್ನು ಸ್ವಾನುಭವ ಮಾಡಲಿಷ್ಟಪಡುವಿರಲ್ಲವೆ? ಹಾಗಾದರೆ, ನೀವೂ ಮನಸ್ಸಿನಲ್ಲಿ, ಅದೇ ಶಯ್ಯೆಯ ಮೇಲೆ ಶಯನಮಾಡಿರಿ; ಶರೀರದಲ್ಲಿ ವ್ಯಾಧಿಯನ್ನನುಭವಿಸುವವರ ಹಾಗೆ ಭಾವಿಸಿ ಕೊಳ್ಳಿರಿ; ಶತ್ರು ಮಧ್ಯದಲ್ಲಿ ಬಂದಿಯಾಗಿರುವಂತೆ ಸ್ಮರಿಸಿಕೊಳ್ಳಿರಿ; ಬಳಿಕ ಸುವಾ ಸಿತವಾದಾ ಸುಸಜ್ಜಿತ ಸುಸ್ನಿಗ್ಧವಾದ ಕೊಟಡಿಯಲ್ಲಿ ಮಲಗಿರುವಂತೆ ತಿಳಿಯಿರಿ; ಮಲಗಿಕೊಂಡು ಕೊಟಡಿಯ ಬಾಗಿಲಕಡೆ ನೋಡಿರಿ, ಹಾಗೆಯೇ ನಿಮ್ಮ ಮುಖವು ಪ್ರಫುಲ್ಲವಾಗುವುದು, ಶತ್ರುಪೂರಿತವಾದಾ ಪುರಿಯಲ್ಲಿಯೂ ನಿಮಗೆ ಸೋದರಿ ಯೆಂತುಪಚರಿಸುವವಳೊಬ್ಬಳು ಬರುವಳು. ಅವಳು ಸುಂದರಿಯಾದ ಯುವತಿ, ಪೂರ್ಣವಿಕಾಸಿತ ಪದ್ಮದಂತೆ ಲಾವಣ್ಯಪೂರ್ಣಳಾಗಿರುವವಳು, ಹಾಗೆಯೇ ಶಯನ ಮಾಡಿಕೊಂಡೊಂದೇ ದೃಷ್ಟಿಯಿಂದ ಅವಳನ್ನು ನೋಡಿರಿ; ಎಂತಹ ಮೂರ್ತಿ! ಸ್ವಲ್ಪ ಮಾತ್ರ ದೀರ್ಘ ಆಯತನ, ಅದಕ್ಕೆ ತಕ್ಕ ಘಟನೆ, ಮಹಾಮಹಿಮೆಯುಳ್ಳ ದೇವಿಯ ಪ್ರತಿಮಾ ಸ್ವರೂಪಳು! ಪ್ರಕೃತಿ ನಿಯಮಿತ ರಾಜ್ಞೀ ಸ್ವರೂಪಳು! ಎಂತಹ ಲಲಿತ ಪಾದವಿಕ್ಷೇಪ! ಗಜಗಮನವನ್ನು ಕೇಳಿರುವಿರಷ್ಟೆ, ಅದಿದಕ್ಕೆ ಸಮಾನವಾದುದಲ್ಲ, ಮರಾಳಗಮನವೆಂದು ಹೇಳುವಿರೊ? ಆ ಪಾದವಿಕ್ಷೇಪವನ್ನು ನೋಡಿರಿ; ದೇವತೆಗಳ ತಾಳ ಲಯಕ್ಕೆ ಸರಿಬೀಳುವುದು. ಹಸ್ತದಲ್ಲಾ ಕುಸುಮ ದಾಮವನ್ನು ನೋಡಿರಿ; ಹಸ್ತದ ಪ್ರಭೆಯಿಂದ ಕುಸುಮವು ಮಲಿನವಾದಂತೆ ಕಾಣುವುದಲ್ಲವೆ? ಕಂಠಪ್ರಭೆಯಿಂದ ಸ್ವರ್ಣಹಾರವೂ ಕಾಂತಿಹೀನವಾಗಿದೆಯಲ್ಲವೆ? ಆಃ! ನೀವು ನಿಮ್ಮ ರೆಪ್ಪೆಗಳನ್ನು ಹೊಡೆಯುವುದಿಲ್ಲವೇಕೆ! ಸುಂದರವಾದಾ ಗ್ರೀವಾಭಂಗವನ್ನು ನೋಡಿದರೇನು? ಪ್ರಸ್ತರ ಧವಳದಾ ಗ್ರೀವದಮೇಲೆ ನಿಬಿಡ ವಾದ ಕುಂಚಿತ ಕೇಶಗುಚ್ಛವು ಬಿದ್ದಿರುವುದನ್ನು ನೋಡಿದರೇನು? ಅದರ ಪಾರ್ಶ್ವ ದಲ್ಲಾ ಕರ್ಣಭೂಷಣವು ಹೇಗಿದೆ; ಕಂಡಿತೆ? ಮಸ್ತಕವು ಈಷನ್ಮಾತ್ರ ಬೊಗ್ಗಿದೆ ಯಲ್ಲವೆ? ಅದು ಸ್ವಲ್ಪ ದೈರ್ಘ್ಯಹೇತುಕವಾದುದೇ ವಿನಾ ಮತ್ತೇನೂ ಅಲ್ಲವು. ಸುಳುಗಣ್ಣುಗಳೊಂದೇ ದೃಷ್ಟಿಯಿಂದ ಕಣ್ಣಿರಿಸಿ ನೋಡುವಿರೇಕೆ? ಅಯಷೆಯು

ಕಂಡರೆ ಏನೆಂದಾಳು? ಹಾಗೆ ನೋಡಬೇಡಿ, ಹಾಸಿಕೆಯನ್ನು ಬಿಟ್ಟೇಳಿ, ಸಾಕು !!

ಜಗತ್ಸಿಂಹನಿಗೆ ಶುಶ್ರೂಷೆಯು ಆವಶ್ಯಕವಾಗಿದ್ದಷ್ಟು ದಿನಗಳವರೆಗೆ ಅಯಷೆಯು ಪ್ರತ್ಯಹವೂ ಅನವರತ ನಿಯುಕ್ತೆಯಾಗಿದ್ದಳು. ವ್ಯಾಧಿಯು ಶಮನವಾದ ಹಾಗೆಲ್ಲಾ ಅಯಷೆಯು ಬಂದುಹೋಗುವುದು ಕಡಿಮೆಯಾಗುತ್ತಾ ಬಂದಿತು. ರಾಜಪುತ್ರನಿಗೆ ರೋಗವು ನಿಶ್ಶೇಷವಾಗಿ ಆರೋಗ್ಯವಾಗುತಲೇ ಅಯಷೆಯು ಬಂದುಹೋಗುವುದು ಸಂಪೂರ್ಣವಾಗಿ ನಿಂತುಹೋಯಿತು. ಆವಾಗಲಾದ ರೊವ್ಮ್ಮೋರ್ವೆ ಬಂದುಹೋಗುವಳು. ಬಂದರೂ ಪ್ರಾಯಶಃ, ಉಸ್ಮಾನನನ್ನು ಸಂಗಡ ಕರೆದುಕೊಂಡು ಬರುವಳು. ಹಿಮಂತರ್ತುವಿನಲ್ಲಿ ಶೀತಾರ್ತನಾದ ವ್ಯಕ್ತಿಯು ಮೈಯಿಂದ ಛಳಿಯು ನಿವಾರಣೆಯಾದ ಹಾಗೆಲ್ಲ ಸೂರ್ಯಕಿರಣವು ಸರಿದುಹೋಗುವಹಾಗೆ ಜಗತ್ಸಿಂಹನಿಗೆ ಆರೋಗ್ಯವಾದ ಹಾಗೆಲ್ಲಾ ಅಯಷೆಯು ದೂರವಾಗಿ ಸರಿದುಹೋದಳು.

ಒಂದಾನೊಂದು ದಿನ ಸಾಯಂಕಾಲ ಜಗತ್ಸಿಂಹನು ಗವಾಕ್ಷದ ಬಳಿ ನಿಂತು ನೋಡುತಿದ್ದನು. ಬೀದಿಯಲ್ಲಿ ಜನರು ಕಾರ್ಯಾರ್ಥಿಗಳಾಗಿ ಅಥವಾ ವಿಹಾರಾರ್ಥಿಗಳಾಗಿ ಇಷ್ಟಬಂದಂತೆ ಸ್ವಚ್ಛಂದವಾಗಿ ಯಾತಾಯಾತಮಾಡುತಿದ್ದರು. ರಾಜಪುತ್ರನವರನ್ನು ನೋಡಿ ದುಃಖಿತನಾಗಿ, ಅವರ ಸ್ಥಿತಿಯನ್ನು ತನ್ನ ಸ್ಥಿತಿಯೊಂದಿಗೆ ಹೋಲಿಸಿ ಯೋಚಿಸುವನು. ಬೀದಿಯಲ್ಲೊತ್ತಟ್ಟು ಕೆಲವು ಮಂದಿ ಮಂಡಲಾಕಾರವಾಗೊಬ್ಬ ವ್ಯಕ್ತಿಯನ್ನೋ ಅಥವಾ ವಸ್ತುವನ್ನೋ ಸುತ್ತಮುತ್ತಿಕೊಂಡು ನೋಡುತಿದ್ದರು. ಅವರೆಲ್ಲರೂ ಸಂತೋಷಚಿತ್ತರಾಗಿದ್ದಂತೆ ಕಂಡರು. ಆದರವರ ಮಧ್ಯದಲ್ಲಿ ಅಚೇತನ ವಸ್ತುವೋ ಅಥವಾ ಚೇತನಯುಕ್ತನಾದ ಮನುಷ್ಯನೋ, ಏನಿದ್ದಿತೋ, ರಾಜಕುಮಾರನಿಗದು ಗೊತ್ತಾಗದೆ ಅದನ್ನು ತಿಳಿಯಲವನಿಗೆ ಕುತೂಹಲವುಂಟಾಯಿತು. ನೋಡುತಿದ್ದವರಲ್ಲಿ ಕೆಲವರು ಹೊರಟುಹೋದ ಬಳಿಕ ರಾಜಕುಮಾರನ ಅಭೀಷ್ಟವು ಸಿದ್ಧಿಯಾಯಿತು. ಮಧ್ಯೆ ಮನುಷ್ಯನೊಬ್ಬನೊಂದು ಪುಸ್ತಕವನ್ನು ಹಿಡಿದುಕೊಂಡೋದುತಿದ್ದಹಾಗೆ ಕಂಡುಬಂದಿತು. ಓದುತಿದ್ದವನ ಆಕಾರವನ್ನು ಕಂಡು ರಾಜಕುಮಾರನಿಗೆ ಕುತೂಹಲವು ಮತ್ತೂ ಹೆಚ್ಚಾಯಿತು. ಅವನನ್ನು ನೋಡಿದರೆ, ಮನುಷ್ಯನೆಂದಾಗಲಿ ಅಥವಾ ಸಿಡಿಲು ಬಡಿದು ಉದರಿಹೋದೆಲೆಗಳುಳ್ಳ ದೊಡ್ಡದಲ್ಲದೊಂದು ತಾಳೇಮರವೆಂದಾಗಲಿ ಹೇಳಬಹುದಾಗಿದ್ದಿತು. ಏಕೆಂದರೆ, ಅವನು ಅಷ್ಟು ಉದ್ದವಾಗಿಯೂ ಅಷ್ಟೇ ದಪ್ಪನಾಗಿಯೂ ಇದ್ದನು. ಆದರೆ ತಾಳೇಮರಕ್ಕೆ ಅಷ್ಟೊಂದು ಗುರುತರವಾದ ಮೂಗಿನ ಭಾರವು ಇರದು; ಅದುಹೊರತು ಎಕ್ಕ ಆಕಾರೇಜ್ಞಿತೆಗಳೆರಡೂ ಸಮಾನವಾಗಿದ್ದುವು. ಪುಸ್ತಕವನ್ನೋದುತ್ತಾ ಕೈಯನ್ನೂ, ತಲೆಯನ್ನೂ, ಮೂಗನ್ನೂ ಅಲ್ಲಾಡಿಸುತ ಬಹುವಿಧ ಅಂಗಚೇಷ್ಟೆಗಳನ್ನು ಮಾಡುತಿದ್ದನು.

ರಾಜಕುಮಾರನು ಆಶ್ಚರ್ಯದಿಂದ ಮಾತಿಲ್ಲದೆ ನೋಡುತಿದ್ದನು. ಆ ಸಮಯದಲ್ಲಿ ಉಸ್ಮಾನನು ಕೊಟಡಿಯೊಳಗೆ ಬಂದನು.

ಪರಸ್ಪರ ಅಭಿವಾದನವಾದ ಬಳಿಕ ಉಸ್ಮಾನನು ರಾಜಕುಮಾರನನ್ನು ಕುರಿತು, 'ಗವಾಕ್ಷದಲ್ಲಿ ಅನನ್ಯ ಮನಸ್ಕರಾಗಿ ಏನನ್ನು ನೋಡುತಿರುವಿರಿ?" ಎಂದು ಕೇಳಿದನು.

ಜಗತ್ಸಿಂಹನು, 'ಒಂದು ಸರಳ ಕಾಷ್ಠವಿಶೇಷವನ್ನು ನೋಡುತಿದ್ದೆನು. ಬೇಕಾದರೆ, ನೀನೂ ನೋಡಬಹುದು' ಎಂದನು.

ಉಸ್ಮಾನನು ನೋಡಿ, 'ನೀವಾವಾಗಲವನನ್ನು ನೋಡಿಲ್ಲವೆ?' ಎಂದನು.

ರಾಜಕುಮಾರ—ಇಲ್ಲ.

ಉಸ್ಮಾನ್—ಅವನು ಬ್ರಾಹ್ಮಣನು. ಮಾತು ಕಥೆಗಳಲ್ಲಿ ಬಹಳ ಸರಸನು. ನಾನವನನ್ನು ಮಂದಾರಣದುರ್ಗದಲ್ಲಿ ನೋಡಿದ್ದೆನು.

ರಾಜಕುಮಾರನು ಚಿಂತಾಕ್ರಾಂತನಾಗಿ ಮನಸ್ಸಿನಲ್ಲಿ, ಮಂದಾರಣದಲ್ಲಿದ್ದವನಾದರೆ ತಿಲೋತ್ತಮೆಯ ವಿಚಾರವನ್ನು ಕುರಿತು ಹೇಳಲಾಪನೆ! ಎಂದೆಂದುಕೊಂಡು ವ್ಯಾಕುಲಚಿತ್ತನಾಗಿ, ಅವನ ಹೆಸರೇನೆಂದು ಕೇಳಿದನು.

ಉಸ್ಮಾನನು ಸ್ವಲ್ಪ ಯೋಚಿಸಿ, ಅವನ ಹೆಸರು ಸ್ವಲ್ಪ ಕಠಿನವಾದುದು, ಝಡತಿಯಾಗಿ ಸ್ಮರಣೆಗೆ ಬರುವುದಿಲ್ಲ—ಗಣಪತ—ಗಣಪತಿ—ಅಲ್ಲ—ಗಜಪತ—ಗಜಪತೋ—ಏನೋ—

ರಾಜಕುಮಾರ—ಗಜಪತ? ಗಜಪತವೆಂಬುವುದು ಈ ದೇಶದ ಹೆಸರಲ್ಲ; ನೋಡಿದರವನು ಬಂಗಾಳಿಯವನಾಗಿರಬಹುದು.

ಉಸ್ಮಾನ್—ಬಂಗಾಳಿಯೇ ನಿಜ, ಅವನೊಬ್ಬ ಭಟ್ಟಾಚಾರ್ಯನು; ಅವನಿಗೊಂದು ಉಪಾಧಿಯೂ ಉಂಟು-ಏಲೆಂ-ಏಲೆಂ-ಎಂದು ಏನೋ ಹೇಳುತ್ತಾರೆ.

ರಾಜಕುಮಾರ—ಬಂಗಾಳಿಯವರ ಉಪಾಧಿಯಲ್ಲಿ, 'ಏಲೆಂ' ಎಂಬ ಶಬ್ದವನ್ನು ಪ್ರಯೋಗಿಸುವುದಿಲ್ಲ; 'ಏಲೆಂ' ಎಂದರೆ ಬಂಗಾಳಿಯಲ್ಲಿ ವಿದ್ಯೆಯೆಂದು ಹೇಳುತ್ತಾರೆ; 'ವಿದ್ಯಾಭೂಷಣ'—'ವಿದ್ಯಾವಾಗೀಶ' ಎಂದಿರಬೇಕು.

ಉಸ್ಮಾನ್—ಅಹುದು! ವಿದ್ಯಾ—ಮತ್ತೇನೋ ಒಂದು—ಬಂಗಾಳಿಯಲ್ಲಿ ಆನೆಗೇನನ್ನುತ್ತಾರೆ?

ರಾಜಕುಮಾರ—ಹಸ್ತಿ.

ಉಸ್ಮಾನ್—ಮತ್ತೇನು?

ರಾಜಕುಮಾರ—ಕರಿ—ದನ್ತಿ—ವಾರಣ—ನಾಗ—ಗಜ—

ಉಸ್ಮಾನ್—ಹಾ! ಸ್ಮರಣೆಗೆ ಬಂದಿತು—ಅವನ ಹೆಸರು ಗಜಪತ ವಿದ್ಯಾದಿಗ್ಗಜ.

ರಾಜಕುಮಾರ—ವಿದ್ಯಾದಿಗ್ಗಜ! ಬಹಳ ಆಶ್ಚರ್ಯವಾದ ಬಿರುದು!

ಹೆಸರಿಗೆ ತಕ್ಕ ಉಪಾಧಿಯಾಗಿದೆ! ಅವನ ಸಂಗಡ ಮಾತನಾಡಲು ಕುತೂಹಲ ವಾಗುತ್ತದೆ.

ಉಸ್ಮಾನನು ಗಜಪತಿಯ ಒಂದೆರಡು ಮಾತುಗಳನ್ನು ಕೇಳಿದ್ದವನು ಅವನ ಸಂಗಡ ರಾಜಕುಮಾರನು ಮಾತನಾಡುವುದರಿಂದೇನೂ ಹಾನಿಯಿಲ್ಲವೆಂದೆಂದು ಕೊಂಡು, 'ಆಗಬಹುದು' ಎಂದನು.

ಇಬ್ಬರೂ ಪಕ್ಕದ ಕೊಟಡಿಗೆ ಹೋಗಿ, ಒಬ್ಬ ಸೇವಕನನ್ನು ಕಳುಹಿಸಿ ವಿದ್ಯಾ ದಿಗ್ಗಜನನ್ನಲ್ಲಿಗೆ ಕರೆಯಿಸಿದರು.

---

## ಒಂಭತ್ತನೆಯ ಪರಿಚ್ಛೇದ

## ದಿಗ್ಗಜನ ಸಂವಾದ

ಭೃತ್ಯನ ಸಂಗಡ ಗಜಪತಿ ವಿದ್ಯಾದಿಗ್ಗಜನು ಕೊಟಡಿಕೆ ಬರುತ್ತಲೇ, ರಾಜ ಕುಮಾರನವನನ್ನು ಕುರಿತು; 'ನೀವು ಬ್ರಾಹ್ಮಣರೊ?' ಎಂದು ಕೇಳಿದನು.

ದಿಗ್ಗಜನು ಹಸ್ತನ್ಯಾಸದಿಂದ,

'ಯಾವತ್ಕೀರೌಸ್ಥಿತಾದೇವಾ ಯಾವತ್ಗಂಗಾಮಹೀತಲೇ।
ಅಸಾರೆಖಲುಸಂಸಾರೆ ಸಾರಂ ಶ್ವಶುರಮಂದಿರಂ ॥'*

ಎಂದು ಹೇಳಿದನು.

ರಾಜಕುಮಾರನಾ ಅಪಸ್ಮಾರಿಯಾದವನಾ ಅಕಾಂಡತಾಂಡಶ್ಲೋಕೋಚ್ಚಾರಣೆಯನ್ನು ಕೇಳಿ, ಉಕ್ಕಿಬರುತಿದ್ದ ನಗುವನ್ನು ಬಲಾತ್ಕಾರದಿಂದಡಗಿಸಿ ಕೊಂಡು, ನಮಸ್ಕಾರವನ್ನು ಮಾಡಿದನು. ಗಜಪತಿಯು, 'ಖುದಾಖಾನನು ಬಾಬೂಖಾನರನ್ನು† ಚೆನ್ನಾಗಿಟ್ಟಿರಲಿ' ಎಂದು ಆಶೀರ್ವಾದ ಮಾಡಿದನು.

ರಾಜಕುಮಾರನು, 'ಮಹಾಶಯ! ನಾನು ಮುಸಲ್ಮಾನನಲ್ಲ, ನಾನು ಹಿಂದು' ಎಂದನು.

ದಿಗ್ಗಜನು ಮನಸ್ಸಿನಲ್ಲಿ, 'ಇವನು ಯವನನು, ನನ್ನನ್ನು ಮೋಸಗೊಳಿಸುತ್ತಾನೆ, ಆಶಯವೇನೋ ಇರಬೇಕು; ಇಲ್ಲದಿದ್ದರೆ ನನ್ನನ್ನೇಕೆ ಕರೆಯಿಸಬೇಕು?' ಎಂದೆಂದುಕೊಂಡು, 'ಖಾನ್‌ಬಾಬೂಜಿ! ನಾನು ತಮ್ಮನ್ನು ಬಲ್ಲೆನು,

---

* ಅನನ್ವಯ ಶ್ಲೋಕವೆಂದು ಸುಲಭವಾಗಿ ತಿಳಿಯಬಹುದು.

† 'ಖಾನ್' ಎಂಬ ಶಬ್ದವನ್ನು 'ಖುದಾ' (ಎಂದರೆ, ದೇವರು) ಅಥವಾ 'ಬಾಬು' (ಎಂದರೆ, ಬಂಗಾಳಿಯಲ್ಲಿ ಮರ್ಯಾದೆಯ ಶಬ್ದವು) ಎಂಬ ಶಬ್ದಗಳೊಂದಿಗೆ ಸೇರಿಸಿ ಹೇಳುವುದು ಶುದ್ಧ ಹಾಸ್ಯಾಸ್ಪದವಾದುದು. ದಿಗ್ಗಜನು ನೂತನವಾಗಿ ಮುಸಲ್ಮಾನನಾದುದರಿಂದ ಮೌಢ್ಯದಿಂದ ಹಾಗೆ ಪ್ರಯೋಗಿಸಿದ್ದಾನೆ.

ತಮ್ಮ ಅನ್ನಪ್ರಭಾವದಿಂದ ಪ್ರಾಣಧಾರಣೆ ಮಾಡುತ್ತೇನೆ, ನನಗೇನೂ ಹೇಳಬೇಕಾದುದಿಲ್ಲ, ತಮ್ಮ ಶ್ರೀಚರಣದಾಸನಾಗಿದ್ದೇನೆ' ಎಂದನು.

ರಾಜಕುಮಾರನು, 'ಇದೇನು, ವಿಪ್ರ!' ಎಂದೆಂದುಕೊಂಡು, 'ಅಯ್ಯಾ, ಮಹಾಶಯರೆ! ನೀವು ಬ್ರಾಹ್ಮಣರು, ನಾನು ರಜಪೂತನು, ನನಗಾ ರೀತಿ ಹೇಳಕೂಡದು, ತಮಗೆ ಗಜಪತಿ ವಿದ್ಯಾದಿಗ್ಗಜ ಎಂದಲ್ಲವೆ ಹೆಸರು?' ಎಂದನು.

ದಿಗ್ಗಜನು ಮನಸ್ಸಿನಲ್ಲಿ, 'ಅದೊ! ಹೆಸರೂ ಗೊತ್ತಿದೆ! ಏನು ವಿಪತ್ತು ಬಂದಿತು!' ಎಂದು ಮುಂತಾಗಿ ಕಳವಳಗೊಂಡು, ಕೈಮುಗಿದುಕೊಂಡು, 'ಷೇಕ್‌ಜಿಗಳೆ! ನಾನು ಗರೀಬ, ತಮ್ಮ ಕಾಲಿಗೆ ಬೀಳುತ್ತೇನೆ, ನನ್ನನ್ನು ರಕ್ಷಿಸಬೇಕು' ಎಂದನು.

ಜಗತ್ಸಿಂಹನು, ಬ್ರಾಹ್ಮಣನು ಭೀತನಾಗಿರುವಕಾರಣ, ಕಾರ್ಯಸಿದ್ಧಿಯಾಗದೆಂದು ಭಾವಿಸಿ, ಬೇರೆ ಪ್ರಸ್ತಾಪವನ್ನು ಕುರಿತು ಮಾತನಾಡಬೇಕೆಂದು ಯೋಚಿಸಿ, 'ತಮ್ಮ ಕೈಯಲ್ಲಿರುವ ಪುಸ್ತಕವಾವದು?' ಎಂದು ಕೇಳಿದನು.

ದಿಗ್ಗಜ—ಅಜ್ಞೆ–ಇದು ಮಣಿಕಪೀರರ ಪುಸ್ತಕವು.

ರಾಜಕುಮಾರ—ಬ್ರಾಹ್ಮಣರ ಕೈಯಲ್ಲಿ ಪೀರರ ಪುಸ್ತಕವು ಹೇಗೆ ಬಂದಿತು?

ದಿಗ್ಗಜ—ನಾನೊಂದಾನೊಂದು ಕಾಲದಲ್ಲಿ ಬ್ರಾಹ್ಮಣನಾಗಿದ್ದೆನು; ಈಗ ಅಲ್ಲ.

ರಾಜಕುಮಾರನು ವಿಸ್ಮಯದಿಂದ ವಿರಕ್ತನಾಗಿ, 'ಅದು ಹೇಗೆ? ಮಂದಾರಣದುರ್ಗದಲ್ಲಿರಲಿಲ್ಲವೆ?' ಎಂದು ಕೇಳಿದನು.

ದಿಗ್ಗಜನು ಮನಸ್ಸಿನಲ್ಲಿ, 'ಇನ್ನೆನಗೆ ತಲೆ ಉಳಿಯುವುದಿಲ್ಲ, ನಾನು ವೀರೇಂದ್ರಸಿಂಹನ ದುರ್ಗದಲ್ಲಿದ್ದುದು ನಿಜ, ಅದನ್ನು ಗೊತ್ತುಮಾಡಿಕೊಂಡಿದ್ದಾನೆ. ವೀರೇಂದ್ರಸಿಂಹನಿಗಾದಂತೆನಗೂ ಆಗುವುದು' ಎಂದು ಯೋಚಿಸಿ, ಬ್ರಾಹ್ಮಣನು ಭಯಗೊಂಡು ರೋದನಮಾಡತೊಡಗಿದನು.

ರಾಜಕುಮಾರ—ಅಳುವುದೇಕೆ?

ಬ್ರಾಹ್ಮಣನು ಕೈ ಉಜ್ಜಿಕೊಳ್ಳುತ್ತಾ, 'ಖಾನ್‌ಬಾಬಾಜಿ! ನನ್ನನ್ನು ಹೊಡಿಯಬೇಡಿ, ನಾನು ತಮ್ಮ ಸೇವಕನು, ದಯವಿಟ್ಟು ಕಾಪಾಡಿ' ಎಂದನು.

ರಾಜಕುಮಾರ—ನೀವೇನು ಹುಚ್ಚರೊ?

ದಿಗ್ಗಜ—ಇಲ್ಲ, ಬಾಬೂಷೇಕಗಳೆ! ನಾನು ತಮ್ಮ ಭೃತ್ಯನು.

ರಾಜಕುಮಾರನು ಬ್ರಾಹ್ಮಣನನ್ನು ಸಮಾಧಾನಗೊಳಿಸುವ ನಿಮಿತ್ತ, "ನಿಮಗೇನೂ ಭಯವಿಲ್ಲ, ಮಣಿಕಪೀರರ ಪುಸ್ತಕದಲ್ಲಾವದಾದರೊಂದನ್ನೋದಿ ಹೇಳಿ, ನೋಡೋಣ' ಎಂದನು.

ಬ್ರಾಹ್ಮಣನು ಪುಸ್ತಕವನ್ನು ಬಿಚ್ಚಿ ರಾಗದೊಡನೆ ಓದಲು ಪ್ರಾರಂಭಿಸಿ

ದನು. ಅವನೋದಿದ್ದುದಕ್ಕೂ ಅಳುವುದಕ್ಕೂ ಭೇದಕಾಣಲಿಲ್ಲ. ಹುಡುಗರಿಗೆ ಕಿವಿ ಹಿಂಡಿದರೆ, ಹೇಗೆ ಓದುವರೋ ದಿಗ್ಗಜಪಂಡಿತನೂ ಹಾಗೆ ಓದಿದನು.

ಕ್ಷಣದಮೇಲೆ ರಾಜಕುಮಾರನು, 'ನೀವು ಬ್ರಾಹ್ಮಣರಾಗಿದ್ದು ಮಣಿಕಪೀರರ ಪುಸ್ತಕವನ್ನೇಕೆ ಓದುತ್ತೀರಿ' ಎಂದನು.

ಬ್ರಾಹ್ಮಣನು ರಾಗವನ್ನು ನಿಲ್ಲಿಸಿ, 'ನಾನು ಮುಸಲ್ಮಾನನಾದೆನು' ಎಂದನು.

ರಾಜಕುಮಾರ—ಅದೇಕೆ ?

ಗಜಪತಿ—ಯವನ ಮುಸಲ್ಮಾನ್ ಬಾಬುಗಳು ದುರ್ಗಕ್ಕೆ ಬಂದು ನನ್ನನ್ನು ಕುರಿತು, 'ಬೊಮ್ಮನ್ ! ನಿನ್ನ ಜಾತಿಕೆಡಿಸುತ್ತೇವೆ' ಎಂದು ಹೇಳಿ ನನ್ನನ್ನು ಹಿಡಿದುಕೊಂಡು, 'ಪಲೋ'* ತಿನ್ನಿಸಿಬಿಟ್ಟರು.

ರಾಜಕುಮಾರನು—'ಪಲೋ' ಎಂದರೇನು ?

ಗಜಪತಿ—ಘೃತದಲ್ಲಿ ಪಕ್ವವಾದ ಅನ್ನ.

ರಾಜಕುಮಾರನು, ಪದಾರ್ಥದ ಜ್ಞಾನವಾಗಿ 'ಆಯಿತು ಮುಂದೆ ಹೇಳು' ಎಂದನು.

ದಿಗ್ಗಜ—ಅನಂತರ, ಕಲಮಿ†ಯುನ್ನೋದಿಸಿದರು.

ರಾಜಕುಮಾರ—ಕಲಮಾ ಓದಿಸಿದ ಬಳಿಕ ಏನಾಯಿತು ?

ದಿಗ್ಗಜ—ಅನಂತರ, 'ನೀನು ಮೊಸಲಮಾನನಾದೆ' ಎಂದರು.

ರಾಜಕುಮಾರ—ಮಿಕ್ಕವರೆಲ್ಲಾ ಏನಾದರು ?

ದಿಗ್ಗಜ—ಮಿಕ್ಕವರನೇಕರೂ ನನ್ನಂತೆ ಮುಸಲರಾದರು.

ರಾಜಕುಮಾರನು ಉಸ್ಮಾನನ ಕಡೆಗೆ ತಿರುಗಿ, ಅವನನ್ನು ದೃಷ್ಟಿಸಿ ನೋಡಿದನು.

ಉಸ್ಮಾನನು, ರಾಜಕುಮಾರನ ಮೌನದಿಂದ ದ್ಯೋತಕವಾದ ತಿರಸ್ಕಾರವನ್ನು ತಿಳಿದು, 'ಯುವರಾಜ ! ಅದರಿಂದ ದೋಷವೇನು ? ಮುಸಲ್ಮಾನರ ಅಭಿಪ್ರಾಯದಲ್ಲಿ ಮುಹಮ್ಮದೀಯರ ಮತವೇ ಸತ್ಯವಾದುದೆಂದು ತಿಳಿದಿದ್ದಾರೆ, ಬಲತ್ಕಾರದಿಂದಾಗಲಿ ಅನ್ಯಥಾ ಆಗಲಿ, ಸತ್ಯವಾದ ಧರ್ಮವನ್ನು ಪ್ರಚಾರ ಮಾಡುವುದು ನಮ್ಮ ಮತದಲ್ಲಿ ಅಧರ್ಮವಲ್ಲ, ಅದೂ ಧರ್ಮವೇ' ಎಂದನು.

* ಬಂಗಾಳಿಯಲ್ಲಿ 'ಪಲೋ' ಎಂದರೆ, ಅಲಸ್ಯದವರಿಗೆ ಕೊಡುವ ಗಂಜಿಗೆ ಹೆಸರು. ದಿಗ್ಗಜನು, 'ಪಲಾವು' ಎಂದರೆ, ಮುಸಲ್ಮಾನರಲ್ಲಿ ಮಾಡುವ ಉತ್ಕೃಷ್ಟವಾದ ಭಕ್ಷ್ಯ. ಅದಕ್ಕೆ ಬದಲಾಗಿ 'ಪಲೋ' ಎಂದು ಆಭಾಸವಾಗಿ ಹೇಳಿದ್ದಾನೆ.

† 'ಕಲಮಿ' ಎಂದರೆ, ಬಂಗಾಳಿಯಲ್ಲೊಂದು ವಿಧವಾದ ಚಟ್ನಿಗೆ ಹೆಸರು. ದಿಗ್ಗಜನು, 'ಕಲಮಾ' ಎಂದರೆ, ಮುಸಲ್ಮಾನರ ಮತಸಂಬಂಧದ ಗ್ರಂಥ, ಅದಕ್ಕೆ ಬದಲಾಗಿ 'ಕಲಮಿ' ಎಂದು ಆಭಾಸವಾಗಿ ಹೇಳಿದ್ದಾನೆ.

ರಾಜಕುಮಾರನು ಉತ್ತರವನ್ನು ಕೊಡದೆ ದಿಗ್ಗಜನನ್ನು ಕುರಿತು, 'ವಿದ್ಯಾದಿಗ್ಗಜ ಮಹಾಶಯರೆ!' ಎನ್ನುತ್ತಲೆ.

ದಿಗ್ಗಜ—ಅಲ್ಲ, ನಾನು ಷೇಕ್ ದಿಗ್ಗಜ.

ರಾಜಕುಮಾರ—ಹಾಗೇವೇ ಆಗಲಿ, ಷೇಕ್‌ಜಿ! ದುರ್ಗದಲ್ಲಿದ್ದ ಮಿಕ್ಕವರ ಸಮಾಚಾರವು ಗೊತ್ತುಂಟೆ?

ಉಸ್ಮಾನನು ರಾಜಕುಮಾರನ ಅಭಿಪ್ರಾಯವನ್ನು ತಿಳಿದು ವ್ಯಾಕುಲವಿಶಿಷ್ಟನಾದನು.

ದಿಗ್ಗಜ—ಅಭಿರಾಮಸ್ವಾಮಿಯು ಪಲಾಯನವಾಗಿ ಹೋದನು.

ರಾಜಕುಮಾರನು, ನಿರ್ಬೋಧನಿಗೆ ಸ್ಪಷ್ಟವಾಗಿ ಕೇಳಿದ ಹೊರತು ಹೇಳಲಾರನೆಂದು ತಿಳಿದು, 'ವೀರೇಂದ್ರಸಿಂಹನು ಏನಾದನು?' ಎಂದು ಕೇಳಿದನು.

ದಿಗ್ಗಜ—ನವಾಬ ಕತಲೂಖಾನ್ ಬಾಬುಗಳು ಅವನನ್ನು ತಲೆಹೊಡಿಸಿಬಿಟ್ಟರು.

ರಾಜಪುತ್ರನ ಮುಖವು ರಕ್ತವರ್ಣವಾಯಿತು. ಅವನು ಉಸ್ಮಾನನನ್ನು ಕುರಿತು, 'ಅದೇನು? ಈ ಬ್ರಾಹ್ಮಣನು ಅನೃತವನ್ನು ಹೇಳುವನೆ?'

ಉಸ್ಮಾನನು ಗಂಭೀರಭಾವದಿಂದ; 'ನವಾಬರು ವಿಚಾರಣೆಮಾಡಿ, ರಾಜದ್ರೋಹಿ ಎಂಬ ಜ್ಞಾನದಿಂದ ಪ್ರಾಣದಂಡನೆಯನ್ನು ವಿಧಿಸಿದರು' ಎಂದನು.

ರಾಜಕುಮಾರನು ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತಾ, ಉಸ್ಮಾನನನ್ನು ಕುರಿತು, 'ಆ ಕೆಲಸವು ನಿನ್ನಾಲೋಚನೆಯಿಂದಾಯಿತೆ?' ಎಂದು ಕೇಳಿದನು.

ಉಸ್ಮಾನನು, 'ನನ್ನಾಲೋಚನೆಗೆ ವಿರುದ್ಧವಾಗಿ ನಡೆಯಿತು' ಎಂದು ಹೇಳಿದನು.

ರಾಜಕುಮಾರನು ಬಹಳ ಹೊತ್ತು ನಿಸ್ತಬ್ಧನಾಗಿದ್ದನು. ಉಸ್ಮಾನನು ಆ ಸಮಯವನ್ನು ನೋಡಿ, ದಿಗ್ಗಜನನ್ನು ಕುರಿತು; 'ನೀನು ಹೊರಟುಹೋಗು' ಎಂದನು.

ದಿಗ್ಗಜನು ಬಿಟ್ಟರೆ ಸಾಕೆಂದೇಳುತ್ತಲೆ, ಕುಮಾರನು ಅವನ ಕೈ ಹಿಡಿದು, 'ಮತ್ತೊಂದು ಮಾತು—ವಿಮಲೆಯು ಎಲ್ಲಿದ್ದಾಳೆ?' ಎಂದು ಕೇಳಿದನು.

ಬ್ರಾಹ್ಮಣನು ನಿಟ್ಟುಸಿರನ್ನು ಬಿಡುತ್ತಾ ಕಣ್ಣೀರು ತುಂಬಿದವನಾಗಿ, 'ವಿಮಲೆಯು ನವಾಬರ ಉಪಪತ್ನಿಯಾಗಿದ್ದಾಳೆ' ಎಂದನು.

ರಾಜಕುಮಾರನು ವಿದ್ಯುದ್ದೃಷ್ಟಿಯಿಂದ ಉಸ್ಮಾನನನ್ನು ನೋಡಿ; 'ಅದು ನಿಜವೆ?' ಎಂದನು.

ಉಸ್ಮಾನನು ಉತ್ತರವನ್ನು ಕೊಡದೆ, ದಿಗ್ಗಜನನ್ನು ಕುರಿತು, 'ಮತ್ತೇನನ್ನು ಬೊಗುಳುತ್ತಿ ಎದ್ದು ಹೋಗು' ಎಂದನು.

ರಾಜಕುಮಾರನು ದಿಗ್ಗಜನ ಕೈಯನ್ನು ದೃಢವಾಗಿ ಹಿಡಿದಿದ್ದುದರಿಂದವನಿಗೆ

ಹೋಗಲು ಶಕ್ತಿಯುಂಟಾಗಲಿಲ್ಲ. ಕುಮಾರನ ಕಣ್ಣುಗಳು ಕೆಂಡಗಳ ಹಾಗಾಗಿ 'ತಿಲೋತ್ತಮೆಯೊ?' ಎಂದನು.

ಬ್ರಾಹ್ಮಣನು, 'ತಿಲೋತ್ತಮೆಯೂ ನವಾಬರ ಉಪಪತ್ನಿಯಾಗಿ ದಾಸ ದಾಸಿಯರಿಂದುಪಚರಿಸಲ್ಪಡುತ್ತಾ ಸುಖದಿಂದಿದ್ದಾಳೆ' ಎಂದನು.

ರಾಜಕುಮಾರನು ಬ್ರಾಹ್ಮಣನನ್ನು ಕೋಪದಿಂದ ದೂಡಿಬಿಟ್ಟನು. ಬ್ರಾಹ್ಮಣನು ಬಿದ್ದೇಳುತ್ತಾ ಹೊರಟುಹೋದನು.

ಉಸ್ಮಾನನು ಲಜ್ಜಿತನಾಗಿ ಮೃದುಭಾವದಿಂದ; 'ನಾನು ಕೇವಲ ಸೇನಾಪತಿ' ಎಂದನು.

ರಾಜಕುಮಾರನು 'ನೀನು ಪಿಶಾಚಿಯ ಸೇನಾಪತಿ!' ಎಂದನು.

---

## ಹತ್ತನೆಯ ಪರಿಚ್ಛೇದ

### ಪ್ರತಿಮಾ ವಿಸರ್ಜನ

ಗ್ರಂಥಬಾಹುಳ್ಯದಿಂದ ಪ್ರಯೋಜನವಿಲ್ಲ. ಜಗತ್ಸಿಂಹನಿಗೆ ಅಂದು ರಾತ್ರಿ ಸ್ವಲ್ಪವೂ ನಿದ್ರೆ ಬರಲಿಲ್ಲವೆಂದು ಹೇಳುವುದು ಉತ್ಪ್ರೇಕ್ಷೆಯಾಗದು. ಅವನಿಗೆ ಚಿಂತಾಗ್ನಿಯು ವಿಕೀರ್ಣವಾಗಿ ಹೃದಯ ಮಧ್ಯದಲ್ಲಿ ಪ್ರಜ್ವಲಿಸುತಿದ್ದಿತು. ಆವ ತಿಲೋತ್ತಮೆಯು ದೇಹತ್ಯಾಗವನ್ನು ಮಾಡಿದ್ದರೆ ಜಗತ್ಸಿಂಹನಿಗೆ ಪೃಥಿವಿಯೇ ಶೂನ್ಯವಾಗಿ ಕಾಣುತ್ತಿದ್ದಿತೋ, ಈಗಾ ತಿಲೋತ್ತಮೆಯು ಪ್ರಾಣತ್ಯಾಗವನ್ನು ಮಾಡಿಕೊಳ್ಳಲಿಲ್ಲವೇಕೆಂದು ಪರಿತಾಪಕ್ಕೆ ಕಾರಣವಾಯಿತು.

ಏತಕ್ಕೆ ಹಾಗಾಯಿತು? ತಿಲೋತ್ತಮೆಯು ಬದುಕಿರಬೇಕೆ! ಕುಸುಮ ಸುಕುಮಾರವಾದಾ ಮಾಧುರ್ಯಮಯ ಕೋಮಲಾಲೋಕವೇಷ್ಟಿತವಾದ ದೇಹವು—ಜಗತ್ಸಿಂಹನು ಎತ್ತಕಡೆ ಮುಖವನ್ನು ತಿರುಗಿಸಿದರೂ ಅತ್ತ ಕಣ್ಣುಗಳೆದುರಿಗೆ ಬಂದು ನಿಂತಿರುವಂತಿರುವಾ ದೇಹವು ಶ್ಮಶಾನವೃತ್ತಿಕೆಯೊಡನೆ ಕಲಕಲಿಕೆಯಾಗಿ ಕಲತುಹೋಗಿ ಬಿಡಲೆ! ಪೃಥಿವಿ—ಅಸೀಮವಾದೀ ಪೃಥಿವಿಯಲ್ಲೆಲ್ಲಿಯೂ ಆ ದೇಹದ ಚಿಹ್ನೆಗಳಿರಬೇಡವೆ? ಹೀಗೆಂದು ಚಿಂತೆಯು ಹುಟ್ಟಿದಾಗ ಜಗತ್ಸಿಂಹನ ಕಣ್ಣುಗಳಲ್ಲಿ ವಾರಿಧಾರೆಯು ಅನರ್ಗಳವಾಗಿ ಸುರಿಯುವುದು. ಕೂಡಲೇ ದುರಾತ್ಮನಾದಾ ಕತಲೂಖಾನನ ವಿಹಾರಮಂದಿರದ ಜ್ಞಾಪಕವು ಹೃದಯದಲ್ಲಿ ಮಿಂಚಿನಂತೆ ಹೊಳೆದು, ಕುಸುಮಸುಕುಮಾರನಾದಾ ದೇಹವು ಪಾಪಿಷ್ಠನಾದಾ ಪಠಾನನ ಅಂಕಸ್ಥವಾಗಿದೆ ಎಂದು ಬೋಧೆಯಾಗುತಲೇ ಮತ್ತೂ ಹೆಚ್ಚಾದ ದಾರುಣಾಗ್ನಿಯಿಂದ ಹೃದಯವು ಪ್ರಜ್ವಲಿತವಾಗುವುದು.

ತಿಲೋತ್ತಮೆಯು ರಾಜಕುಮಾರನ ಹೃದಯ ಮಂದಿರಾಧಿಷ್ಠಾತ್ರೀ ದೇವಿಯ ಮೂರ್ತಿಯಾಗಿದ್ದಳು. ಅಂತಹ ತಿಲೋತ್ತಮೆಯು ಪಠಾನನ ಭವನದಲ್ಲಿ!

ಅದೇ ತಿಲೋತ್ತಮೆಯು ಪಠಾನನ ಭವನದಲ್ಲಿ! ಅದೇ ತಿಲೋತ್ತಮೆಯು ಕತಲೂಖಾನನ ಉಪಪತ್ನಿ!! ಆ ಮೂರ್ತಿಯನ್ನು ಪುನಃ ರಾಜಪೂತನು ಆರಾಧಿಪನೆ? ಅಂತಹ ಮೂರ್ತಿಯನ್ನು ಸ್ವಹಸ್ತದಿಂದ ಸ್ಥಾನಚ್ಯುತಮಾಡಲು ಸಂಕೋಚ ಪಡುವುದು ರಾಜಪೂತನಾದವನಿಗೆ ಕುಲೋಚಿತವೆ?

ಜಗತ್ಸಿಂಹನ ಹೃದಯದಲ್ಲಾ ಪ್ರತಿಮೆಯು ಬದ್ಧಮೂಲವುಳ್ಳದುದಾಗಿದ್ದಿತು. ಅದರ ಮೂಲೋತ್ಪಾಟನವಾಗಬೇಕಾದರದಕ್ಕೆ ಮೂಲಾಧಾರವಾದ ಹೃದಯವೇ ವಿದೀರ್ಣವಾಗಬೇಕು. ಏನನ್ನು ಮಾಡಿದರೆ, ಆ ಮೋಹಿನಿಯ ಮೂರ್ತಿಯು ಸಂಪೂರ್ಣವಾಗಿ ಮರೆತುಹೋಗಲಾಪದು? ಅದು ಸಾಧ್ಯವೆ? ಎಷ್ಟು ದಿವಸ ಮೇಧೆಯೂ ಬುದ್ಧಿಯೂ ಸ್ಮೃತಿಯೂ ಇರುವುವೋ, ಎಷ್ಟು ದಿವಸ ಅಸ್ಥಿಮಜ್ಜಾ ಶೋಣಿತಗಳಿಂದ ನಿರ್ಮಿತವಾದ ದೇಹವಿರುವುದೋ, ಅಷ್ಟೊಂದು ಕಾಲಪರ್ಯಂತ ಆ ಮೂರ್ತಿಯು ಅವನ ಹೃದಯೇಶ್ವರಿಯಾಗಿ ವಿರಾಜಿಸುತಿರುವುದು.

ಇವೇ ಮೊದಲಾದ ಉತ್ಕಟಚಿಂತೆಯಿಂದ ರಾಜಪುತ್ರನ ಮನಸ್ಸಿನ ಸ್ಥೈರ್ಯವು ದೂರವಾದುದಲ್ಲದೆ ಬುದ್ಧಿಯೂ ಅಪಭ್ರಂಶವಾಗುತ ಬಂದಿತು. ಸ್ಮೃತಿಯು ವಿಶೃಂಖಲವಾಯಿತು. ರಾತ್ರಿಯೆಲ್ಲಾ ತಲೆಯಮೇಲೆ ಕೈಗಳನ್ನಿಟ್ಟು ಕೊಂಡು ಕುಳಿತಿರುವನು. ತಲೆಯು ತಿರುಗಿದಹಾಗಾಗಿ ಯೋಚಿಸುವ ಶಕ್ತಿಯೂ ಲೋಪವಾಯಿತು.

ಒಂದೇ ಸ್ಥಳದಲ್ಲಿ ಬಹಳ ಹೊತ್ತು ಕುಳಿತು ಅಂಗಾಂಗಗಳೆಲ್ಲಾ ನೋವುದಕ್ಕೆ ಪ್ರಾರಂಭವಾಯಿತು. ಮನಸ್ಸಿನಲ್ಲಿ ಪ್ರಗಾಢ ಆಲೋಚನೆಯಿಂದ ಶರೀರವೆಲ್ಲಾ ಎಳ್ಳುಹಾಕಿದರೆ ಸೀಯುವಷ್ಟು ಜ್ವರಬಂದಂತೆ ಸಂತಾಪವುಳ್ಳದುದಾಯಿತು. ಜಗತ್ಸಿಂಹನು ಕಿಟಿಕಿಯ ಬಳಿ ಬಂದನು.

ಶೀತಲವಾದ ತಣ್ಣೆಲರು ಬೀಸಿ ಜಗತ್ಸಿಂಹನ ಲಲಾಟವು ತಣ್ಣೊಂಡಿತು. ನಿಶಿಯು ಅಂಧಕಾರಮಯವಾಗಿದ್ದಿತು. ಆಕಾಶವು ಮೇಘಾವೃತವಾಗಿದ್ದಿತು. ನಕ್ಷತ್ರಗಳು ಕಾಣುತ್ತಿರಲಿಲ್ಲ. ಒಮ್ಮೊಮ್ಮೆ ಚಲಿಸುತಿದ್ದ ಮೇಘ ಖಂಡಗಳ ಮಧ್ಯದಿಂದ ಸಣ್ಣದಾದೊಂದೊಂದು ಚುಕ್ಕಿಯು ಮಿನುಗುತಿರುವುದು. ದೂರವಾಗಿದ್ದ ವೃಕ್ಷಶ್ರೇಣಿಗಳು ಅಂಧಕಾರದಲ್ಲಿ ಪರಸ್ಪರ ಸೇರಿದಂತಾಗಿ ತಮೋಮಯವಾದ ಪ್ರಾಚೀರವೋ ಎಂಬಂತೆ ಆಕಾಶದಲ್ಲಿ ಕಣ್ಗೊಳಿಸುತಿದ್ದುವು. ಸಮೀಪದಲ್ಲಿದ್ದ ಪ್ರತಿ ಮರದಲ್ಲಿಯೂ ಮಾಲಾಕಾರವಾಗಿ ಮಿಂಚುಹುಳುಗಳು ವಜ್ರದ ಕಿಡಿಗಳ ಹಾಗೆ ಹೊಳೆಯುತಿದ್ದುವು. ಮುಂದಿದ್ದೊಂದು ತಟಾಕದಲ್ಲಿ ಆಕಾಶ ವೃಕ್ಷಾದಿಗಳ ಪ್ರತಿಬಿಂಬವು ಅಸ್ಫುಟವಾಗಿ ಕಾಣುತಿದ್ದಿತು.

ಮೇಘಸ್ಪೃಷ್ಟವಾದ ರಾತ್ರಿಯ ತಂಗಾಳಿಯು ಮೈಸೋಕಿ ಜಗತ್ಸಿಂಹನ ದೈಹಿಕ ಸಂತಾಪವು ಸ್ವಲ್ಪ ತಗ್ಗಿತು. ಗವಾಕ್ಷದಮೇಲೆ ಕೈಯಿಟ್ಟು ಆದರಮೇಲೆ ತಲೆಯನ್ನಿಟ್ಟು ಬಹು ಕ್ಷಣಗಳು ಉತ್ಕಟವಾದ ಮನಃಕ್ಲೇಶದಿಂದ ನಿಶ್ಚಲವಾಗಿ

ಸಿಂತಿದ್ದನು. ಶೀತಲವಾದಾ ವಾಯು ಸಂಲಗ್ನದಿಂದ ಸ್ವಲ್ಪ ಚಿಂತಾವಿರತನಾದನು. ಕೂಡಲೇ ಬೇರೆ ಯೋಚನೆಯು ಹುಟ್ಟಿತು. ಅದುವರೆಗೂ ಮನಸ್ಸನ್ನು ಬಿದ್ಧ ಮಾಡುತಿದ್ದ ಶಲ್ಯವು ದೂರವಾಗಿ, ತೀಕ್ಷ್ಣದಲ್ಲದಕ್ಕಿಂತ ತುಸು ಕಡಿಮೆಯಾದ 'ನಿರಾಶೆ' ಎಂಬ ಬಾಣವು ಹೃದಯದಲ್ಲಿ ಪ್ರವೇಶಮಾಡಲಾರಂಭವಾಯಿತು. ಆಶೆಯನ್ನು ತ್ಯಾಗಮಾಡುವುದು ಅಧಿಕ ಕ್ಲೇಶಕರವಾದುದು. ಮನದಲ್ಲಿ ನಿರಾಶೆಯು ನೆಟ್ಟ ಬಳಿಕ ಅಷ್ಟೊಂದು ಕ್ಲೇಶಕರವಾಗದು. ಅಸ್ತ್ರಾಘಾತವು ಅಧಿಕ ಕ್ಲೇಶಕರವಾದುದು. ಅದರಿಂದುಂಟಾಗುವ ಘಾಯದ ಪಿಂಸೆಯು ಸ್ಥಾಯಿಯಾಗಿದ್ದರೂ ಆಘಾತದಷ್ಟು ಉತ್ಕಟ ಕ್ಲೇಶದಾಯಕವಲ್ಲ; ಜಗತ್ಸಿಂಹನು ನಿರಾಶೆಯಿಂದ ಸ್ವಲ್ಪ ಕಡಿಮೆಯಾದ ಯಾತನೆಯನ್ನನುಭವಿಸಲಾರಂಭಿಸಿದನು. ಅಂಧಕಾರಮಯವಾಗಿ ನಕ್ಷತ್ರವಿಹೀನವಾಗಿದ್ದ ಆಕಾಶವನ್ನು ನೋಡಿ, ತನ್ನ ಹೃದಯವೂ ಅದರಂತೆ ಅಂಧಕಾರಮಯವಾಗಿ ನಕ್ಷತ್ರವಿಹೀನವಾಗಿದ್ದಿತೆಂದು ಕಣ್ಣೀರನ್ನು ಸುರಿಸುತ್ತಾ ಭಾವಿಸುತಿದ್ದನು. ಹಿಂದೆ ಕಳೆದುಹೋದ ಮೃದು ಭಾವಗಳು ಸ್ಮೃತಿಗೆ ಬರಲಾರಂಭಿಸಿದವು. ಬಾಲ್ಯಕಿಶೋರಕಾಲಗಳ ಆಮೋದ ಪ್ರಮೋದಗಳೆಲ್ಲವೂ ಜ್ಞಾಪಕಕ್ಕೆ ಬಂದು, ಅವುಗಳಲ್ಲವನ ಚಿತ್ತವು ಮಗ್ನವಾಯಿತು. ಅದರಿಂದ ಅಸ್ವಮನಸ್ಕನಾಗುತ್ತ ಶರೀರವು ಕ್ರಮವಾಗಿ ಶೀತಲವಾಗುತ ಬಂದಿತು. ಕ್ಲಾಂತಿಯಿಂದ ಚೇತನವು ಅಪಹರಣವಾಯಿತು. ವಾತಾಯನದವಲಂಬನೆಯಿಂದ ತೂಕಡಿಕೆಯುಂಟಾಯಿತು. ಆ ನಿದ್ರಾವಸ್ಥೆಯಲ್ಲೊಂದು ಸ್ವಪ್ನವನ್ನು ಕಂಡನು. ಸ್ವಪ್ನವು ಗುರುತರ ಕಷ್ಟಜನಕವಾಗಿದ್ದಿತು. ನಿದ್ರಿತನಾಗಿ ಭ್ರೂಭಂಗಿಯನ್ನು ಮಾಡಿದನು. ಮುಖದಲ್ಲಿ ಉತ್ಕಟ ಕ್ಲೇಶಭೋಗವು ವ್ಯಂಜಕವಾಯಿತು. ಅಧರವು ಅದರಿತು. ಲಲಾಟವು ಘರ್ಮಾಕ್ತವಾಯಿತು. ಕೈ ದೃಢಮುಷ್ಟಿಬದ್ಧವಾಯಿತು.

ಇದ್ದಕ್ಕಿದ್ದಹಾಗೆ ಘಾಬರಿಯಿಂದ ಎಚ್ಚರವಾಯಿತು. ಜಗತ್ಸಿಂಹನು ಅತಿವ್ಯಸ್ತನಾಗಿ ಕೊಟಡಿಯಲ್ಲಿ ಗೋಡೆಯಿಂದ ಗೋಡೆಗೆ ಶತಪಥ ನಡೆಯುತಿದ್ದನು. ಎಷ್ಟುಹೊತ್ತು ಹಾಗೆ ಪಾದಚಾರಣ ಮಾಡುತಿದ್ದನೋ, ಅದನ್ನು ನಿಶ್ಚಿತವಾಗಿ ಹೇಳಲಾಗುವುದಿಲ್ಲ. ಬಾಲಸೂರ್ಯನ ಕಿರಣಗಳಿಂದ ಹರ್ಮ್ಯಪ್ರಾಕಾರವು ಪ್ರದೀಪ್ತವಾದಾಗ ಜಗತ್ಸಿಂಹನು ಹರ್ಮ್ಯತಲದಲ್ಲಿ ಹಾಸಿಗೆಯಿಲ್ಲದೆ ತಲೆದಿಂಬೂ ಇಲ್ಲದೆ, ಲಂಬಾಯಮಾನನಾಗಿ ನಿದ್ರೆಯನ್ನು ಮಾಡುತಿದ್ದನು.

ಉಸ್ಮಾನನು ಬಂದು ಎಚ್ಚರಗೊಳಿಸಿದನು. ರಾಜಕುಮಾರನು ಎದ್ದನು. ಬಳಿಕ ಉಸ್ಮಾನನು ಅಭಿವಾದನವನ್ನು ಮಾಡಿ ಅವನ ಕೈಯಲ್ಲೊಂದು ಕಾಗದವನ್ನು ಕೊಟ್ಟನು. ರಾಜಪುತ್ರನು ಕಾಗದವನ್ನು ತೆಗೆದುಕೊಂಡು ಏನನ್ನೂ ಹೇಳದೆ ಉಸ್ಮಾನನ ಮುಖವನ್ನು ದೃಷ್ಟಿಸಿ ನೋಡಿದನು. ಉಸ್ಮಾನನು ರಾಜಪುತ್ರನಿಗೆ ಮನಸ್ಸು ವಿಹ್ವಲಗೊಂಡಿದ್ದಕಾರಣ ಆಗಾವ ವಿಚಾರವಾಗಿಯೂ

ಮಾತನಾಡುವುದು ನಿಷ್ಪ್ರಯೋಜನವೆಂದು ತಿಳಿದು, 'ರಾಜಪುತ್ರ! ತಾವು ನೆಲದಮೇಲೆ ಮಲಗಿದ್ದುದಕ್ಕೆ ಕಾರಣವನ್ನು ವಿಚಾರಿಸುವುದನಾವಶ್ಯಕ; ಈ ಕಾಗದವನ್ನು ಬರೆದವರಿಗೆ ನಿಮಗದನ್ನು ತಲ್ಪಿಸುವುದಾಗಿ ವಾಗ್ದಾನವನ್ನು ಮಾಡಿದ್ದೆನು; ನಿಮಗದನ್ನು ಇದುವರೆಗೆ ತಲ್ಪಿಸದಿದ್ದುದಕ್ಕೆ ಕಾರಣವು ತಮಗೇವೇ ಗೊತ್ತಿದೆ; ತಲ್ಪಿಸದೆ ಅದನಿಟ್ಟುಕೊಳ್ಳುವುದಕ್ಕೆ ಕಾರಣವಿಲ್ಲ; ತಮಗೆಲ್ಲವೂ ವೇದ್ಯವಾಗಿದೆ. ಪತ್ರವನ್ನು ತಲ್ಪಿಸಿದ್ದೇನೆ; ಅವಕಾಶವಾದಾಗದನ್ನೋದಬಹುದು; ಮಧ್ಯಾಹ್ನದಮೇಲೆ ಬರುವೆನು; ಪ್ರತ್ಯುತ್ತರವನ್ನು ಕೊಟ್ಟರೆ ಕಳುಹಿಸುವೆನು' ಎಂದು ಹೇಳಿ ಹೊರಟುಹೋದನು.

ರಾಜಪುತ್ರನು ಏಕಾಂಗಿಯಾಗಿ ಕುಳಿತುಕೊಂಡಿದ್ದು ಸಂಪೂರ್ಣವಾಗಿ ಸಂಜ್ಞಾಲಾಭವಾದ ಬಳಿಕ ವಿಮಲೆಯ ಪತ್ರವನ್ನೋದಲಾರಂಭಿಸಿದನು. ಆದ್ಯೋಪಾಂತವಾಗಿ ಓದಿ, ಬಳಿಕ ಸ್ವಲ್ಪ ಬೆಂಕಿಯನ್ನು ಮಾಡಿ ಕಾಗದವನ್ನದರಲ್ಲಿ ಹಾಕಿದನು. ಕಾಗದವುರಿಯಲಾರಂಭಿಸಿ ಪೂರಾ ಸುಟ್ಟುಹೋಗುವವರೆಗೆ ಆದನ್ನೇ ದೃಷ್ಟಿಸಿ ನೋಡುತಿದ್ದನು. ಅದು ನಿಶ್ಶೇಷವಾಗಿ ಸುಟ್ಟುಹೋದ ಬಳಿಕ ತನ್ನೊಳುತಾನೇ, 'ಜ್ಞಾಪಕದ ಕುರುಹನ್ನು ಬೆಂಕಿಯಲ್ಲಿಟ್ಟು ನಿಶ್ಶೇಷ ಮಾಡಿದೆನು; ಜ್ಞಾಪಕವೂ ಸಂತಾಪದಿಂದ ಸುಡುತಿದೆ; ಆದರದು ನಿಶ್ಶೇಷವಾಗುವುದಿಲ್ಲವೇಕೊ?' ಎಂದೆಂದುಕೊಂಡನು.

ಜಗತ್ಸಿಂಹನು ಯಥಾರೀತಿಯಾಗಿ ಪ್ರಾತಸ್ಸಂಧ್ಯಾಪೂಜಾಹ್ನಿಕಗಳನ್ನು ಮಾಡಿ ಇಷ್ಟದೇವತೆಗೆ ಪ್ರಣಾಮವನ್ನು ಮಾಡಿದನು. ಅನಂತರ ಕೈಮುಗಿದುಕೊಂಡು ಊರ್ಧ್ವದೃಷ್ಟಿಯುಳ್ಳವನಾಗಿ ಹೇಳತೊಡಗಿದನು:—'ಹೇ ಗುರುದೇವ! ಈ ದಾಸನನ್ನು ಕೈಬಿಡಬೇಡ. ನಾನು ರಾಜಧರ್ಮವನ್ನು ಪ್ರತಿಪಾಲನೆ ಮಾಡುವೆನು, ನಿನ್ನ ಪಾದಾಂಗುಳಿಯ ಪ್ರಸಾದವನ್ನು ಬೇಡುತ್ತೇನೆ, ದಯಪಾಲಿಸು, ಆ ವಿಧರ್ಮಿಯ ಉಪಪತ್ನಿಯನ್ನೀ ಹೃದಯದಿಂದ ದೂರಮಾಡಿಬಿಡುತ್ತೇನೆ. ಆದರಿಂದೆನ್ನ ಶರೀರವು ಪತನವಾದರೆ ಅಂತ್ಯಕಾಲದಲ್ಲಿ ನಿನ್ನನ್ನು ಹೊಂದುವೆನು. ಮನುಷ್ಯನಿಗೆ ಸಾಧ್ಯವಾದಷ್ಟು ಮಾಡುತ್ತೇನೆ, ಮನುಷ್ಯನಿಗೆ ಕರ್ತವ್ಯವಾದುದನ್ನು ಮಾಡುತ್ತೇನೆ; ಹೇ ಗುರುದೇವ! ನೀನು ಸರ್ವಾಂತರ್ಯಾಮಿ, ನನ್ನ ಹೃದಯದ ಅಂತಸ್ತಲಪರ್ಯಂತವೂ ಕಣ್ಣಿರಿಸಿನೋಡು, ನಾನಿನ್ನು ತಿಲೋತ್ತಮೆಯ ಪ್ರಣಯಾರ್ಥಿಯಾಗಿಲ್ಲ, ನಾನಿನ್ನು ಅವಳ ದರ್ಶನಾಭಿಲಾಷಿಯಾಗಿಲ್ಲ, ಕೇವಲ ಕಾಲಸರ್ಪದಂತಿರುವ ಹಿಂದಣ ಸ್ಮೃತಿಯು ಮಾತ್ರ ಅನುಕ್ಷಣದಲ್ಲಿಯೂ ಹೃದಯವನ್ನು ದಗ್ಧಮಾಡುತ್ತಿದೆ; ಆಕಾಂಕ್ಷಣೀಯಳಾದವಳನ್ನು ವಿಸರ್ಜನೆ ಮಾಡಿದ್ದೇನೆ, ಸ್ಮೃತಿಯು ಮಾತ್ರ ಲೋಪವಾಗುವುದಿಲ್ಲವೇಕೆ? ಹೇ ಗುರುದೇವ! ನಿನ್ನ ಪಾದಪ್ರಸಾದವನ್ನು ದಯಪಾಲಿಸು, ಇಲ್ಲದಿದ್ದರೆ, ಸ್ಮರಣೆಯ ಯಾತನೆಯನ್ನು ಸಹಿಸಲಾರೆನು' ಎಂದು ಪ್ರಾರ್ಥಿಸಿದನು.

ಪ್ರತಿಮೆಯು ವಿಸರ್ಜಿತವಾಗಿ ಹೋಯಿತು !!!

ತಿಲೋತ್ತಮೆ ! ಧೂಳಿಯ ರಾಸಿಯಲ್ಲಿ ಬಿದ್ದಿದ್ದು, ನಿನಗಾವ ಸ್ವಪ್ನವಾಗುತಿದ್ದಿತು ? ಘೋರತರವಾದೀ ಅಂಧಕಾರದಲ್ಲಿ ನೀನು ನೋಡುತಿದ್ದಾ ಏಕ ಮಾತ್ರ ನಕ್ಷತ್ರವೂ ತನ್ನ ಕಿರಣವನ್ನು ನಿನ್ನಮೇಲೆ ಬೀರುವುದಿಲ್ಲ ; ಆ ಬೆಳಕು ನಿಂತುಹೋಯಿತು ! ನೀನು ನಿನ್ನ ಪ್ರಾಣರಕ್ಷಣಾರ್ಥವಾಗಿ ಹಿಡಿದಿದ್ದ ತಂತುವೂ ಹರಿದುಹೋಯಿತು !!! ನೀನಾ ಪ್ರಚಂಡ ಚಂಡಮಾರುತೋದ್ಭವದಲ್ಲಿಯೂ ಸಮುದ್ರವನ್ನು ದಾಟಬೇಕೆಂದು ಹಿಡಿದಿದ್ದ ಹಲಗೆಯು ಮುಣುಗಿ ಹೋಯಿತು !!!

---

## ಹನ್ನೊಂದನೆಯ ಪರಿಚ್ಛೇದ

## ಗೃಹಾಂತರ

ಉಸ್ಮಾನನು ಹೇಳಿದ್ದಪ್ರಕಾರ ಅಪರಾಹ್ನದಲ್ಲಿ ರಾಜಪುತ್ರನ ಬಳಿಗೆ ಬಂದು, 'ಪ್ರತ್ಯುತ್ತರವನ್ನು ಕಳುಹಿಸುವ ತಾತ್ಪರ್ಯವುಂಟೆ ?' ಎಂದು ಕೇಳಿದನು.

ಯುವರಾಜನು ಪ್ರತ್ಯುತ್ತರವನ್ನು ಬರೆದಿಟ್ಟಿದ್ದನು. ಅದನ್ನು ತೆಗೆದು ಉಸ್ಮಾನನ ಕೈಯಲ್ಲಿ ಕೊಟ್ಟನು. ಉಸ್ಮಾನನು ಕಾಗದವನ್ನು ತೆಗೆದುಕೊಂಡು, 'ತಾವು ಪ್ರಕಾರಾಂತರ ತಿಳಿಯಕೂಡದು ; ದುರ್ಗವಾಸಿಗಳು ಪರಸ್ಪರ ಕಾಗದ ಪತ್ರಗಳನ್ನು ನಡೆಯಿಸಿದರೆ, ದುರ್ಗರಕ್ಷಕರಾಗಿರುವವರು ಅದನ್ನೋದದೆ ತಲ್ಪಿಸ ಕೂಡದು ' ಎಂದನು. ಯುವರಾಜನು ಸ್ವಲ್ಪ ವಿಷಣ್ಣನಾಗಿ, ' ಅಷ್ಟೊಂದು ಹೆಚ್ಚು ಹೇಳಬೇಕಾದುದಿಲ್ಲ. ಕಾಗದವನ್ನು ಬಿಚ್ಚಿ ನೋಡಬಹುದು ; ಯುಕ್ತವಾಗಿ ಕಂಡು, ನಿನ್ನ ಅಭಿಪ್ರಾಯವಿದ್ದರೆ, ಕಳುಹಿಸಿಕೊಡಬಹುದು ' ಎಂದನು.

ಉಸ್ಮಾನನು ಕಾಗದವನ್ನು ಬಿಚ್ಚಿ ಓದಿದನು :—

'ಮಂದಭಾಗಿನಿ ! ನಾನು ನಿನ್ನ ಪ್ರಾರ್ಥನೆಯನ್ನು ಮರೆಯುವುದಿಲ್ಲ ; ಆದರೆ ನೀನು ಪತಿವ್ರತೆಯಾಗಿದ್ದರೆ ಶೀಘ್ರದಲ್ಲಿ ಪತಿಪಥಾವಲಂಬನೆಯನ್ನು ಮಾಡಿ ಆತ್ಮ ಕಳಂಕವನ್ನು ಹೋಗಲಾಡಿಸಿಕೊಳ್ಳುವೆ.

ಜಗತ್ಸಿಂಹ '

ಉಸ್ಮಾನನದನ್ನೋದಿ, 'ರಾಜಪುತ್ರ ! ನಿಮ್ಮ ಹೃದಯವು ಅತಿಕಠಿಣ ವಾದುದು ' ಎಂದನು.

ರಾಜಪುತ್ರನು ಬೇಸರದಿಂದ, ' ಪಠಾಣರಿಗಿಂತ ಹೆಚ್ಚು ಕಠಿಣವಲ್ಲ ' ಎಂದನು.

ಉಸ್ಮಾನನ ಮುಖವು ಸ್ವಲ್ಪ ಆರಕ್ತವಾಗಿ, ಕರ್ಕಶ ಸ್ವರದಿಂದವನು, ' ಮಹಾಶಯರೆ ! ಪಠಾಣರು ನಿಮಗಾವ ಅಂಶದಲ್ಲಿಯೂ ಅಮರ್ಯಾದೆ ಮಾಡಿದವ ರಲ್ಲವೆಂದು ತೋರುತ್ತದೆ ' ಎಂದನು.

ರಾಜಪುತ್ರನು ಕುಪಿತನಾಗಿ, ಹಾಗೂ ಸ್ವಲ್ಪ ಲಜ್ಜಿತನಾಗಿ, ' ಇಲ್ಲವಯ್ಯಾ,

ನನ್ನ ಸ್ವಂತ ವಿಚಾರದಲ್ಲಿ ಹೇಳುವುದಿಲ್ಲ, ನನ್ನ ವಿಚಾರದಲ್ಲಿ ನೀವು ಸರ್ವಾಂಶದಲ್ಲಿಯೂ ದಯೆಯನ್ನು ತೋರಿದ್ದೀರಿ; ಕಾರಾಗಾರದಲ್ಲಿ ಶೃಂಖಲಗಳಿಂದ ಬದ್ಧನಾಗಿರಬೇಕಾದವನನ್ನು ಪ್ರಮೋದಾಗಾರದಲ್ಲಿಟ್ಟಿರುವಿರಿ; ಹೆಚ್ಚು ಮತ್ತೇನನ್ನು ಮಾಡಲಾದೀತು? ಆದರೆ ನಾನು ಹೇಳತಕ್ಕುದೇನೆಂದರೆ—ನಿಮ್ಮ ಉಪಕಾರ ಜಾಲದಿಂದ ಬದ್ಧನಾಗಿಹೋಗಿದ್ದೇನೆ; ಈ ಸುಖದ ಪರಿಣಾಮವೇನಾಗುವುದೋ ತಿಳಿಯಲಾರದವನಾಗಿದ್ದೇನೆ; ಬಂದಿಯಾಗಿದ್ದರೆ ಕಾರಾಗಾರಕ್ಕೆ ಕಳುಹಬೇಕು; ನನ್ನನ್ನೀ ದಯಾಶೃಂಖಲಗಳಿಂದ ಮುಕ್ತನನ್ನಾಗಿ ಮಾಡಿರಿ; ಹಾಗೆ ಬಂದಿಯಲ್ಲದಿದ್ದರೆ ನನ್ನನ್ನು ಸ್ವರ್ಣಪಿಂಜರದಲ್ಲಿಟ್ಟುದುದರಿಂದ ಪ್ರಯೋಜನವೇನು?' ಎಂದನು.

ಉಸ್ಮಾನನು ಸ್ಥಿರಭಾವದಿಂದ, 'ರಾಜಪುತ್ರ! ಅಶುಭಕ್ಕೆ ಸಲುವಾಗಿ ವ್ಯಸ್ತರಾಗಲೇಕೆ? ಅಮಂಗಳವು ಕೋರದೆ ತಾನಾಗಿಯೇ ಬರುವುದು' ಎಂದನು.

ರಾಜಪುತ್ರನು ಗರ್ವಿತ ವಚನಗಳಿಂದ, 'ನಿಮ್ಮ ಕುಸುಮಶಯ್ಯೆಯನ್ನು ಬಿಟ್ಟು ಕಾರಾಗಾರದ ಶಿಲಾಶಯ್ಯೆಯಲ್ಲಿ ಶಯನಮಾಡುವುದನ್ನು ರಾಜಪೂತರು ಅಮಂಗಳವೆಂದು ತಿಳಿಯುವುದಿಲ್ಲ' ಎಂದು ಹೇಳಿದನು.

ಉಸ್ಮಾನನು, ಅಮಂಗಳಕ್ಕೆ ಶಿಲಾಶಯ್ಯೆಗಿಂತಲೂ ಚರಮಸೀಮೆಯಿಲ್ಲವಾಗಿದ್ದರೆ, ಅದರಿಂದಾವ ಬಾಧಕವಾದರೂ ಆಗಲೆಂದು ಹೇಳಬಹುದು' ಎಂದನು.

ರಾಜಕುಮಾರನು ಉಸ್ಮಾನನನ್ನು ತೀವ್ರದೃಷ್ಟಿಯಿಂದ ನೋಡಿ, 'ಕತಲೂಖಾನನಿಗೆ ಸಮುಚಿತವಾಗಿ ದಂಡವಿಧಾನ ಮಾಡಲಾರದೆನಗೆ ಮರಣವೂ ಭಯಗೊಳಿಸದು' ಎಂದನು.

ಉಸ್ಮಾನನು, 'ಯುವರಾಜ! ಸ್ವಲ್ಪ ಸಾವಧಾನವಾಗಿರಿ; ಪಠಾನರು ಬರಿ ಬಾಯಿಮಾತಿನವರಲ್ಲ' ಎಂದನು.

ರಾಜಕುಮಾರನು ನಕ್ಕು, 'ಸೇನಾಪತಿ! ನೀನು ನನಗೆ ಭಯಪ್ರದರ್ಶನ ಮಾಡಲು ಬಂದಿದ್ದರೆ ನಿನ್ನ ಯತ್ನವು ವಿಫಲವಾದುದೆಂದು ತಿಳಿ' ಎಂದನು.

ಉಸ್ಮಾನನು, 'ರಾಜಪುತ್ರ! ನಾವು ಪರಸ್ಪರ ಚೆನ್ನಾಗಿ ಬಲ್ಲವರಾಗಿದ್ದೇವೆ; ನಾವಿಬ್ಬರೂ ಪರಸ್ಪರ ಮಿಥ್ಯಾ ವಾಗಾಡಂಬರವೇ ಉದ್ದೇಶವುಳ್ಳವರಾಗಿ ಊಟಲಿಕೊಚ್ಚುವವರಲ್ಲವೆಂದು ತಿಳಿದಿದ್ದೇವೆ; ನಾನು ನಿಮ್ಮಲ್ಲೊಂದು ವಿಶೇಷ ಕಾರ್ಯಾರ್ಥವಾಗಿ ಬಂದಿದ್ದೇನೆ' ಎಂದನು.

ಜಗತ್ಸಿಂಹನು ಸ್ವಲ್ಪ ವಿಸ್ಮಿತನಾಗಿ, 'ಅದೇನು? ಹೇಳು' ಎಂದನು.

ಉಸ್ಮಾನ್—ನಾನೀಗ ಪ್ರಸ್ತಾಪಿಸುವ ವಿಷಯವು ಕತಲೂಖಾನನ ಅಪ್ಪಣೆಯ ಪ್ರಕಾರ ಪ್ರಸ್ತಾಪಿಸುವೆನೆಂದು ತಿಳಿಯಬೇಕು.

ಜಗತ್ಸಿಂಹ—ಒಳ್ಳೆಯದು.

ಉಸ್ಮಾನ್—ಕೇಳಬೇಕು—ರಾಜಪೂತರಿಗೂ ಪಠಾನರಿಗೂ ನಡೆಯುವ ಯುದ್ಧದಿಂದ ಉಭಯ ಕುಲವೂ ಕ್ಷಯವಾಗುವುದು.

ಜಗತ್ಸಿಂಹ—ಪಠಾನರ ಕುಲವು ಕ್ಷಯವಾಗಬೇಕೆಂಬುದೇ ಯುದ್ಧದ ಉದ್ದೇಶವು.

ಉಸ್ಮಾನ್—ನಿಜವೇ ಅಹುದು, ಆದರೆ ಉಭಯ ಕುಲಗಳೂ ನಿಪಾತವಾಗದೆ ಒಂದು ಕುಲವು ಮಾತ್ರ ಕ್ಷಯವಾಗುವುದು ಎಷ್ಟರ ಸಂಭವವೋ ಅದನ್ನಾಲೋಚಿಸಬೇಕು; ಮಂದಾರಣದುರ್ಗವನ್ನು ಜಯಿಸಿದವರು ಕೇವಲ ಬಲಹೀನರಲ್ಲವೆಂಬುದನ್ನು ನೀವು ತಿಳಿದಿರುವಿರಿ.

ಜಗತ್ಸಿಂಹನು ಸ್ವಲ್ಪ ನಕ್ಕು, 'ಅವರು ಕೌಶಲವುಳ್ಳವರೆಂದೊಪ್ಪುವೆನು' ಎಂದನು.

ಉಸ್ಮಾನ್—ಅದು ಹೇಗೇ ಆಗಲಿ, ಆತ್ಮಪ್ರತಿಷ್ಠೆಯು ಪ್ರಕೃತ ಉದ್ದೇಶವಲ್ಲ. ಪಠಾನರು ಬಾದಷಹನ ಸಂಗಡ ಹೋರಾಡುತ್ತಾ ಉತ್ಕಲದೇಶದಲ್ಲಿ ಸುಖದಿಂದಿರುವುದಕ್ಕಾಗುವುದಿಲ್ಲ; ಆದರೆ ಮೊಗಲ ಸಮ್ರಾಟನೂ ಪಠಾನರನ್ನು ವಾಳಾಯವಾಗಿ* ತನ್ನ ಕೈಕೆಳಗಿರುಹಾಗೆ ಮಾಡಿಕೊಳ್ಳಲಾರನು; ನಾನು ಹೇಳುವುದನ್ನು ಆತ್ಮಶ್ಲಾಘನೆಯೆಂದು ತಿಳಿಯಕೂಡದು; ನೀವೂ ರಾಜನೀತಿಜ್ಞರೇ ಅಹುದು, ಆಲೋಚಿಸಿ ನೋಡೋಣಾಗಲಿ, ದಿಲ್ಲಿಯಿಂದ ಉತ್ಕಲದೇಶವು ಎಷ್ಟೊಂದು ದೂರವಿದೆ? ದಿಲ್ಲೀಶ್ವರನು ಮಾನಸಿಂಹನ ಬಾಹುಬಲದಿಂದೇ ತಡವೆ ಪಠಾನರನ್ನು ಜಯಿಸಿದ್ದಾನೆ; ಆದರಾ ಜಯಪತಾಕೆ ಈ ದೇಶದಲ್ಲೆಷ್ಟುಕಾಲ ನಿಂತಿರಬಲ್ಲದು? ಮಹಾರಾಜಾ ಮಾನಸಿಂಹನು ಸೈನ್ಯಸಮೇತನಾಗಿ ಹಿಂದಿರುಗುತಲೇ ಉತ್ಕಲದೇಶದಲ್ಲಿ ದಿಲ್ಲೀಶ್ವರನ ಅಧೀಶತ್ವವು ಲೋಪವಾಗಿಹೋಗುವುದು, ಹಿಂದೊಮ್ಮೆ ಅಕ್ಬರ ಬಾದಷಹನು ಉತ್ಕಲದೇಶವನ್ನು ಜಯಿಸಿದ್ದನು; ಆದರೆ ಎಷ್ಟುಕಾಲ ಅಲ್ಲಿಯ ಕಪ್ಪವನ್ನು ತೆಗೆದುಕೊಂಡನು? ಈಸಲ ಜಯಿಸಿರುವುದೂ ಹಾಗೇವೇ ಆಗುವುದು; ಮತ್ತೊಂದು ಸಲ ಸೈನ್ಯವನ್ನು ಕಳುಹಿಸಿ ಮತ್ತೊಮ್ಮೆ ಜಯಿಸುವನು; ಪುನಃ ಪಠಾನರು ಸ್ವತಂತ್ರರಾಗುವರು; ಪಠಾನರು ಇತರರಂತೆ ದುರ್ಬಲರಲ್ಲವು; ಅಸ್ವಾತಂತ್ರ್ಯವನ್ನಾವಾಗಲೂ ಸಹಿಸಲಾರರು; ಪಠಾನನೊಬ್ಬನು ಜೀವಂತನಾಗಿದ್ದರೂ ಸಾಕು; ಇದು ನಿಜವಾದ ಮಾತು; ಪುನಃ ಪುನಃ ರಾಜಪೂತ ಪಠಾನರ ರಕ್ತದಿಂದ ಪೃಥಿವಿಯು ಪ್ಲಾವಿತವಾಗುತಿರುವುದು; ಪ್ರಯೋಜನವೇನು?

ಜಗತ್ಸಿಂಹ—ನಿಮ್ಮ ಇಷ್ಟವೇನು?

ಉಸ್ಮಾನ್—ನಾನು ಮತ್ತೇನನ್ನೂ ಹೇಳಲಾರೆನು, ನಮ್ಮ ಪ್ರಭುವು ಸಂಧಿಯನ್ನು ನಡೆಯಿಸಬೇಕೆಂದು ಹೇಳಿದ್ದಾನೆ.

ಜಗತ್ಸಿಂಹ—ಎಂತಹ ಸಂಧಿ?

ಉಸ್ಮಾನ್—ಉಭಯಪಕ್ಷದವರೂ ಸ್ವಲ್ಪ ಸ್ವಲ್ಪ ಲಾಘವವನ್ನು ಸ್ವೀಕಾರ

* ವಾಳಾಯವಾಗಿ= ನಿರಂತರವಾಗಿ, ಆವಾಗಲೂ.

ಮಾಡಬೇಕು. ನಬಾಬ ಕತಲೂಖಾನನು ಸ್ವಂತ ಬಾಹುಬಲದಿಂದ ಜಯಿಸಿರುವ ವಂಗದೇಶದ ಕೆಲವು ಭಾಗಗಳನ್ನು ಬಿಟ್ಟುಕೊಡುವುದಕ್ಕೆ ಸಿದ್ಧವಾಗಿದ್ದಾನೆ; ಅಕ್ಬರಬಾದಷಹನೂ ಉತ್ಕಲದೇಶದ ಹಕ್ಕನ್ನು ಬಿಟ್ಟು ಸೈನ್ಯವನ್ನು ಹಿಂದಕ್ಕೆ ಕರೆಯಿಸಿಕೊಳ್ಳಬೇಕು; ಅದಲ್ಲದೆ, ಅದನ್ನು ಪುನಃ ಆಕ್ರಮಣಮಾಡಲೆತ್ನಿಸದಿರಬೇಕು; ಅದರಿಂದ ಬಾದಷಹನಿಗೆ ಹಾನಿಯೇನೂ ಇಲ್ಲ; ಯೋಚಿಸಿ ನೋಡಿದರೆ, ಪಠಾನರಿಗೇವೇ ನಷ್ಟವಾಗುವುದು; ನಾವು ಶ್ರಮಪಟ್ಟು ಕೈವಶಮಾಡಿಕೊಂಡುದುದನ್ನು ಬಿಡುವವರಾಗುತ್ತೇವೆ; ಅಕ್ಬರನಾದರೋ, ಅವನ ಕೈವಶವಾಗದುದನ್ನು ಬಿಡತಕ್ಕುದಾಗುವುದು.

ರಾಜಕುಮಾರನು ಅವನ್ನೆಲ್ಲಾ ಕೇಳಿ, 'ನೀವು ಹೇಳುವುದು ಒಳ್ಳೆಯ ಮಾತೇ ಅಹುದು; ಆದರಾ ಪ್ರಸ್ತಾಪವನ್ನೆಲ್ಲಾ ನನ್ನೊಡನೆ ಮಾಡಲೇಕೆ; ಸಂಧಿವಿಗ್ರಹಗಳಿಗೆ ಮಹಾರಾಜಾ ಮಾನಸಿಂಹನು ಕರ್ತನಾಗಿದ್ದಾನೆ; ಅವನ ಬಳಿಗೆ ದೂತರನ್ನು ಕಳುಹುಬಹುದು' ಎಂದನು.

ಉಸ್ಮಾನ್—ಮಹಾರಾಜರವರ ಬಳಿಗೆ ದೂತನನ್ನು ಕಳುಹಿಸಿದ್ದೆವು; ದೌರ್ಭಾಗ್ಯದ ದೆಸೆಯಿಂದ ಅವರಲ್ಲಾರೋ, ನಾವು ನಿಮ್ಮ ಪ್ರಾಣಹಾನಿ ಮಾಡಿದವರೆಂದು ಸುಳ್ಳು ವರ್ತಮಾನವನ್ನು ಹೇಳಿದ್ದಾರೆ; ಮಹಾರಾಜರು ಶೋಕದಿಂದಲೂ ಕ್ರೋಧದಿಂದಲೂ ಸಂಧಿಯೆಂಬ ಮಾತನ್ನು ಕೇಳುವವರಾಗಿಲ್ಲ; ದೂತನು ಹೇಳಿದುದನ್ನು ನಂಬುವಹಾಗೂ ಇಲ್ಲವಾಗಿದೆ; ನೀವು ಸ್ವಂತವಾಗಿ ಸಂಧಿಯ ಪ್ರಸ್ತಾಪವನ್ನು ಮಾಡುವಿರಾದರೆ ಮಹಾರಾಜರು ಸಮ್ಮತರಾಗುವರು.

ರಾಜಕುಮಾರನು ಪುನಃ ಉಸ್ಮಾನನನ್ನು ದೃಷ್ಟಿಸಿ ನೋಡಿ, 'ಸಂಗತಿಗಳನ್ನೆಲ್ಲಾ ವಿವರಿಸಿ ಹೇಳು, ನನ್ನ ಹಸ್ತಾಕ್ಷರವನ್ನು ಬರೆದು ಕಳುಹಿದರೆ ಮಹಾರಾಜರಿಗೆ ನಂಬಿಕೆಯು ಹುಟ್ಟಬಹುದು, ನನ್ನನ್ನೇಕೆ ಕಳುಹುಬೇಕು?' ಎಂದು ಹೇಳಿದನು.

ಉಸ್ಮಾನ್—ಅದಕ್ಕೆ ಕಾರಣವೇನೆಂದರೆ, ಮಹಾರಾಜರು ನಮ್ಮ ಸ್ಥಿತಿಯನ್ನು ಸ್ವಯಂ ಸಂಪೂರ್ಣವಾಗಿ ಅರಿತವರಾಗಿಲ್ಲ; ನೀವು ಹೋಗಿ ಹೇಳಿದರೆ ನಮ್ಮ ಬಲಾಬಲವೆಲ್ಲಾ ಅವರಿಗೆ ಚೆನ್ನಾಗಿ ಗೊತ್ತಾಗುವುದು, ಹಾಗೂ ನೀವು ಹೇಳುವುದರಿಂದ ವಿಶೇಷ ಕಾರ್ಯಸಿದ್ಧಿಯಾಗುವ ಸಂಭವವುಂಟು; ಪತ್ರದ ಮೂಲಕ ಅಷ್ಟು ಗುರುತ್ವವಾಗಲಾರದು; ಸಂಧಿಯ ಉದ್ದೇಶವು ನೀವು ಸೆರೆಯಿಂದ ಮುಕ್ತರಾಗುವುದೇ ಮುಖ್ಯವಾದುದರಿಂದ, ನಮ್ಮ ನವಾಬ ಕತಲೂಖಾನರು ನಿಮ್ಮಿಂದೀ ಸಂಧಿವಿಷಯಕ ಕಾರ್ಯವು ನಿರ್ವಾಹವಾಗಬೇಕೆಂದು ಸಿದ್ಧಾಂತಮಾಡಿದ್ದಾರೆ.

ರಾಜಕುಮಾರ—ನಾನು ಪಿತೃಸನ್ನಿಧಾನಕ್ಕೆ ಹೋಗಲು ಅಸಮ್ಮತನಾಗಿಲ್ಲ.

ಉಸ್ಮಾನ್—ಆ ಮಾತನ್ನು ಕೇಳಿ ಸುಖಿಯಾದೆನು; ಆದರೆ ಮತ್ತೊಂದು

ವಿಜ್ಞಾಪನೆ: ನಾನು ಹೇಳಿರುವ ರೀತಿಯಾದ ಸಂಧಿಯನ್ನು ಕೈಗೂಡಮಾಡಲ ಶಕ್ತರಾಗುವಿರಾದರೆ ಪುನಃ ನೀವೇ ದುರ್ಗಕ್ಕೆ ಹಿಂದಿರುಗಿ ಬರುವುದಾಗಿ ವಾಗ್ದಾನಮಾಡಬೇಕು.

ರಾಜಕುಮಾರ—ನಾನು ವಾಗ್ದಾನಮಾಡಿದರೂ ಹಿಂದಿರುಗಿ ಬರುವ ನಂಬಿಕೆಯೇನು?

ಉಸ್ಮಾನ್—(ಸ್ವಲ್ಪ ನಕ್ಕು) ಆದರ ನಂಬಿಕೆ ಪೂರ್ಣವಾಗಿ ಉಂಟು; ರಾಜಪೂತರು ತಾವು ಹೇಳಿದ ಮಾತಿಗೆ ತಪ್ಪಿ ನಡೆಯುತಕ್ಕವರಲ್ಲವೆಂದು ಲೋಕಪ್ರಸಿದ್ಧವಾಗಿದೆ.

ರಾಜಕುಮಾರನು ಸಂತುಷ್ಟನಾಗಿ, 'ಅಗತ್ಯವಾಗಿ ಆಗಲಿ, ನಾನು ನಮ್ಮ ತಂದೆಗಳ ದರ್ಶನವಾದ ಕೂಡಲೇ ದುರ್ಗಕ್ಕೆ ಒಬ್ಬನೇ ಹಿಂದಿರುಗಿ ಬರುವೆನೆಂದು ಮಾತು ಕೊಡುವೆನು' ಎಂದು ಹೇಳಿದನು.

ಉಸ್ಮಾನ್—ಮತ್ತೊಂದು ವಿಚಾರದಲ್ಲಿಯೂ ನೀವು ಸ್ವೀಕಾರಮಾಡಬೇಕು; ನೀವು ಮಹಾರಾಜರನ್ನು ನೋಡುತ್ತಲೇ ನಮ್ಮ ಇಷ್ಟಾನುಸಾರವಾಗಿ ಸಂಧಿಯಾಗುವ ಹಾಗೆ ಅನುಕೂಲಪಡಿಸುವುದಾಗಿಯೂ ಒಪ್ಪಿಕೊಳ್ಳಬೇಕು.

ರಾಜಕುಮಾರ—ಸೇನಾಪತಿ ಮಹಾಶಯ! ಅದಕ್ಕೊಪ್ಪಿಕೊಳ್ಳಲಾರೆನು; ದಿಲ್ಲೀಶ್ವರನು ಪಠಾನರನ್ನು ಜಯಿಸಬೇಕೆಂದು ನಮ್ಮನ್ನು ನಿಯಮಿಸಿದ್ದಾನೆ; ಪಠಾನರನ್ನು ಜಯಿಸತಕ್ಕುದು ನಮ್ಮ ಕೆಲಸವಾಗಿದೆ; ಸಂಧಿಯನ್ನು ಮಾಡಲು ನಾವು ನಿಯಮಿಸಲ್ಪಟ್ಟಿಲ್ಲ; ಸಂಧಿಯನ್ನು ನಾವೆಂದಿಗೂ ಮಾಡಲಾರೆವು; ನಾನಾ ವಿಚಾರದಲ್ಲಿ ಪ್ರವರ್ತಿಸತಕ್ಕವನೂ ಅಲ್ಲ.

ಉಸ್ಮಾನ್—(ಮುಖಭಂಗಿಯಿಂದ ಸಂತೋಷವನ್ನೂ, ಹಾಗೂ ವ್ಯಸನವನ್ನೂ ತೋರಿ) ಯುವರಾಜ! ನೀವು ರಾಜಪೂತರ ಹಾಗೆ ಮಾತನಾಡುತ್ತೀರಿ. ಆದಳೆ ವಿವೇಚನೆಯನ್ನು ಮಾಡಿ ನೋಡಿರಿ, ನೀವು ಸೆರೆಯಿಂದ ಬಿಡುಗಡೆಯಾಗುವುದಕ್ಕೆ ಬೇರೆ ಉಪಾಯವಿಲ್ಲ.

ರಾಜಕುಮಾರ—ನನ್ನ ಮುಕ್ತಿಯಿಂದ ದಿಲ್ಲೀಶ್ವರನಿಗೇನಾಗಬೇಕಾಗಿದೆ? ರಜಪೂತರಲ್ಲಿ ನನ್ನ ಹಾಗೆ ಅನೇಕ ರಾಜಪುತ್ರರಿದ್ದಾರೆ.

ಉಸ್ಮಾನನು ಕಾತರನಾಗಿ, 'ಯುವರಾಜ! ನನ್ನ ಪರಾಮರ್ಶವನ್ನು ಕೇಳಿ, ನಿಮ್ಮ ಅಭಿಪ್ರಾಯವನ್ನು ಬಿಡಿ' ಎಂದನು.

ಜಗತ್ಸಿಂಹ—ಏತಕ್ಕೆ?

ಉಸ್ಮಾನ್—ನಾನು ಸ್ಪಷ್ಟವಾಗಿ ಹೇಳುತ್ತೇನೆ, ನಮ್ಮ ನವಾಬರು ನಿಮ್ಮಿಂದೀ ಕಾರ್ಯಸಿದ್ಧಿಯಾಗುವುದೆಂದೀ ಪರ್ಯಂತವೂ ನಿಮ್ಮನ್ನಾದರದಿಂದಿಟ್ಟಿದ್ದರು; ನೀವದಕ್ಕೆ ವಕ್ರಗತರಾದರೆ ನಿಮಗೆ ಅದರಿಂದನಿಷ್ಟಘಟನೆಯುಂಟಾಗುವುದು.

ಜಗತ್ಸಿಂಹ—ಪುನಃ ಭಯಪ್ರದರ್ಶನವೇಕೆ? ಕಾರಾಗಾರದಲ್ಲಿರಲಿಷ್ಟವುಳ್ಳವನಾಗಿರುವೆನೆಂದು ಈಗ ಹೇಳಿದೆನಲ್ಲವೆ?

ಉಸ್ಮಾನ್—ಯುವರಾಜ! ಕೇವಲ ಕಾರಾಗಾರವಾಸದಿಂದ ನವಾಬರು ತೃಪ್ತರಾದರೆ ಮಂಗಳಕರವೆಂದು ತಿಳಿಯಬೇಕು.

ಯುವರಾಜನು ಭ್ರೂಭಂಗಿಮಾಡಿ, 'ಹಾಗಿಲ್ಲದಿದ್ದರೆ, ವೀರೇಂದ್ರಸಿಂಹನ ರಕ್ತಪ್ರವಾಹವು ಮತ್ತೂ ವೃದ್ಧಿಗೊಳ್ಳಲಿ, ಸಿದ್ಧವಾಗಿರುವೆನು'—ಎಂದು ಹೇಳುತ್ತಾ, ಕಣ್ಣುಗಳಿಂದ ಕಿಡಿಗಳನ್ನು ಸುರಿದನು.

ಉಸ್ಮಾನ್—ಅಪ್ಪಣೆ ಕೊಡಿ, ನಾನು ಹೋಗುವೆನು, ನನ್ನ ಕೆಲಸವಾಯಿತು; ಕತಲೂಖಾನನ ಅಪ್ಪಣೆಯೇನಾಗುವುದೋ, ಅದನ್ನು ಬೇರೆ ದೂತರಿಂದ ತಿಳಿಯುವಿರಿ.

ಈ ರೀತಿಯಾಗಿ ಹೇಳಿ ಉಸ್ಮಾನನು ಹೊರಟುಹೋದ ಸ್ವಲ್ಪಹೊತ್ತಿನೊಳಗೆ ಬೇರೊಬ್ಬ ದೂತನು ಜಗತ್ಸಿಂಹನೆದುರಿಗೆ ಬಂದು ನಿಂತನು. ಅವನು ಸೈನಿಕ ಉಡುಪುಳ್ಳವನಾಗಿ ಸಾಮಾನ್ಯವಾದ ಸಿಪಾಯಿಗಿಂತ ಸ್ವಲ್ಪ ಹೆಚ್ಚಿನ ಹುದ್ದೇದಾರನಾಗಿದ್ದನು. ಅವನ ಸಂಗಡ ನಾಲ್ಕುಮಂದಿ ಅಸ್ತ್ರಧಾರಿಗಳಾಗಿದ್ದ ಪದಾತಿಗಳು ಬಂದಿದ್ದರು. ರಾಜಪುತ್ರನು ಅವನನ್ನು ನೋಡಿ, 'ನಿಮ್ಮ ಕಾರ್ಯವೇನು?' ಎಂದು ಕೇಳಿದನು.

ಸೈನಿಕನು, 'ನಿಮ್ಮ ವಾಸಗೃಹವನ್ನು ಬದಲಾಯಿಸಬೇಕು' ಎಂದನು.

ರಾಜಕುಮಾರನು, 'ಸಿದ್ಧವಾಗಿದ್ದೇನೆ, ನಡೆ' ಎಂದು ಹೇಳಿ, ದೂತನ ಅನುಗಾಮಿಯಾಗಿ ಹೋದನು.

---

## ಹನ್ನೆರಡನೆಯ ಪರಿಚ್ಛೇದ

### ಅಲೌಕಿಕಾಭರಣ

ಮಹೋತ್ಸವವು ಉಪಸ್ಥಿತವಾಯಿತು. ಇಂದು ಕತಲೂಖಾನನ ಜನ್ಮದಿನ. ಹಗಲೆಲ್ಲಾ ನೃತ್ಯ, ಗೀತ, ದಾನ, ಆಹಾರ, ಪಾನ, ಇತ್ಯಾದಿಗಳಿಂದ ಕಳೆಯಿತು. ರಾತ್ರಿ ತತೋಽಪ್ಯಧಿಕವಾಗಿ ನಡೆಯಬೇಕು, ಸಾಯಾಹ್ನವು ಉತ್ತೀರ್ಣವಾಯಿತು. ದುರ್ಗವೆಲ್ಲೆಲ್ಲಿಯೂ ಆಲೋಕಮಯವಾಯಿತು. ಸೈನಿಕರು, ಸಿಪಾಯಿಗಳು, ಉಮ್ರಾಗಳು, ಭೃತ್ಯರು, ಪೌರವರ್ಗದವರು, ಭಿಕ್ಷುಕರು, ಮದ್ಯಪಾಯಿಗಳು, ನಟರು, ನರ್ತಕಿಯರು, ನಾಯಕ ನಾಯಕಿಯರು, ವಾದಕರು, ಐಂದ್ರಜಾಲಕರು, ಮಾಲೆಗಾರ್ತಿಯರು, ಆಹಾರ ಶಿಲ್ಪಿಸಾಮಗ್ರಿಗಳನ್ನು ಮಾರುವವರು ಮುಂತಾದವರಿಂದ ನಾಲ್ಕೂ ದಿಕ್ಕುಗಳು ನಿಬಿಡೀಕೃತವಾದುವು. ಎಲ್ಲಾ ವಕಡೆ ಹೋದರೂ ದೀಪಮಾಲೆಗಳು, ಗೀತವಾದ್ಯಗಳು, ಗಂಧವಾರಿಗಳು, ತಾಂಬೂಲ,

ಪುಷ್ಪ, ವಾದ್ಯ, ವೇಶ್ಯೆಯರು ಕಣ್ಗೊಳಿಸುತ್ತಿದ್ದರು. ಅಂತಃಪುರದಲ್ಲಿಯೂ ಬಹಳ ಮಟ್ಟಿಗೆ ಅದೇ ರೀತಿಯಾಗಿದ್ದಿತು. ನವಾಬನ ವಿಹಾರಗೃಹದಲ್ಲಿ ಅಷ್ಟೊಂದು ಗದ್ದಲವಿಲ್ಲದಿದ್ದರೂ ಹೆಚ್ಚಾದ ಆಮೋದದಿಂದ ಘಮಘಮಿತವಾಗಿದ್ದಿತು. ಪ್ರತಿ ಪ್ರತಿ ಕೊಟಡಿಯಲ್ಲಿಯೂ ಸ್ಫಟಿಕರತ್ನಾದಿಗಳಿಂದ ನಿರ್ಮಿತವಾದ ದೀಪಗಳು ಸುವಾಸಿತ ತೈಲಪೂರ್ಣವಾಗಿ ಸ್ನಿಗ್ಧೋಜ್ಜ್ವಲಪ್ರಕಾಶವನ್ನು ಬೀರುತಿದ್ದುವು. ಸುಗಂಧಕುಸುಮದಾಮಗಳು ಪುಷ್ಪಾಧಾರಗಳಲ್ಲಿಯೂ, ಸ್ತಂಭಗಳಮೇಲೂ ಶಯ್ಯೆಗಳಮೇಲೂ, ಆಸನಗಳಮೇಲೂ, ಪುರವಾಸಿನಿಯರ ಅಂಗಗಳಮೇಲೂ ವಿರಾಜಿಸುತಿದ್ದುವು. ತಣ್ಣೆಲರು ಅತ್ತರುಗಳ ಗಂಧಭಾರವನ್ನು ವಹಿಸಲಾರದು ದಾಗಿ ಮಂದ ಮಂದವಾಗಿ ಬೀಸುತಿದ್ದಿತು. ಅಗಣಿತ ದಾಸಿಯರ ಸಮೂಹದಲ್ಲಿ ಕೆಲವರು ಹೈಮಕಾರ್ಯ ಖಚಿತವಾದ ವಸನಗಳನ್ನು ಧರಿಸಿದ್ದರು. ಮತ್ತೆ ಕೆಲವರು ತಮಗಿಷ್ಟವಾದ ನೀಲ, ಲೋಹಿತ, ಶ್ಯಾಮಲ, ಪಾಟಲಾದಿ ವರ್ಣಗಳ ಚೀನವಾಸಸ್ಸುಗಳನ್ನುಟ್ಟಿದ್ದರು. ಅವರ ಅಂಗಾಂಗಗಳನ್ನು ಅಲಂಕರಿಸಿದ್ದ ಸ್ವರ್ಣಾಭರಣಗಳು ದೀಪಗಳ ಬೆಳಕು ಬಿದ್ದು ಉಜ್ವಲತರವಾಗಿದ್ದವು—ಅವರಾರಾರ ದಾಸಿಯರಾಗಿದ್ದರೋ, ಆ ಸುಂದರಿಯರು ತಮ್ಮ ತಮ್ಮ ಕೊಟಡಿಗಳಲ್ಲಿ ಕುಳಿತುಕೊಂಡು ಪರಮ ಪ್ರಯತ್ನದಿಂದ ದೇಹವನ್ನಲಂಕರಿಸಿಕೊಳ್ಳುತ್ತಿದ್ದರು. ನವಾಬನು ಪ್ರಮೋದ ಮಂದಿರಕ್ಕೊಂದು ಬಂದು ಎಲ್ಲರ ಸಂಗಡಲೂ ವಿಹರಿಸುವನು. ನೃತ್ಯಗೀತಗಳಾಗುವುವು. ಆರಾರಿಗೆ ಆವಾವದು ಇಷ್ಟವೋ ಅವು ಸಿದ್ಧಿಯಾಗುವುವು. ಒಬ್ಬ ಸುಂದರಿಯು ತನ್ನ ಸಹೋದರನಿಗಿಂದೊಂದು ಕೆಲಸವನ್ನು ಮಾಡಿಸಿಕೊಳ್ಳ ಬೇಕೆಂಬಾಶೆಯಿಂದ ತಲೆಗೆ ಬಾಚಣಿಕೆಯನ್ನೂರಿ ಹಚ್ಚುತಿದ್ದಳು. ಮತ್ತೊಬ್ಬಳು ದಾಸಿಯರ ಸಂಖ್ಯೆಯನ್ನು ವೃದ್ಧಿಗೊಳಿಸಿಕೊಳ್ಳಲು ಅಳಕಗುಚ್ಛಗಳನ್ನು ವಕ್ಷಸ್ಥಳ ಪರ್ಯಂತ ಬಿಟ್ಟುಕೊಂಡಿದ್ದಳು. ಬೇರೊಬ್ಬಳು ನವಪ್ರಸೂತ ಪುತ್ರನಿಗೆ ದಾನರೂಪವಾಗಿ ಧನವನ್ನು ಹಸ್ತಗತಮಾಡಿಕೊಳ್ಳುವ ಅಭಿಲಾಷೆಯಿಂದ ಗಂಡಸ್ಥಳವನ್ನು ರಕ್ತಿಮಾವಿಕಾರಮಾಡಿಕೊಳ್ಳಲು ಘರ್ಷಣೆಮಾಡಿಕೊಳ್ಳುತಿದ್ದಳು. ನವಾಬನ ಪ್ರೇಯಸಿ ಲಲನೆಯೊಬ್ಬಳು ತಾನು ಹೊಸದಾಗಿ ಹೊಂದಿದ ರತ್ನಾಲಂಕಾರಗಳಿಗನುರೂಪವಾದ ಹೆಚ್ಚು ಆಭರಣಗಳನ್ನು ಹೊಂದುವ ಆಶೆಯಿಂದ ಕಣ್ಣುಗಳಿಗೆ ಆಕರ್ಣಪರ್ಯಂತವಾಗಿ ಕಜ್ಜಳ ಲೇಪನವನ್ನು ಮಾಡಿಕೊಳ್ಳುತಿದ್ದಳು. ಚಂಡೀಸ್ವರೂಪಿಯೊಬ್ಬ ರಮಣಿಯು ಉಡುಪುಗಳನ್ನುಡಿಸುವಾಗ ದಾಸಿಯು ಪಾವಾಡೆಯ ತುದಿಯನ್ನು ತುಳಿದುದರಿಂದ ದಾಸಿಯ ಕಪಾಲಕ್ಕೆ ಬಲವಾಗಿ ಪೆಟ್ಟುಗಳನ್ನು ಕೊಡುತ್ತಿದ್ದಳು. ಮತ್ತೊಬ್ಬ ರಮಣಿಯು ಪ್ರಗಲ್ಭತಾವಯೋಮಾಹಾತ್ಮ್ಯದಿಂದ* ಕೇಶರಾಶಿಯ ಭಾರವು ಶಿಥಿಲಮೂಲವುಳ್ಳದುದಾಗಿದ್ದುದು†

* ಪ್ರಗಲ್ಭತಾವಯೋಮಾಹಾತ್ಮ್ಯದಿಂದ=ಹೆಚ್ಚಿನ ವಯಸ್ಸಿನ ಪ್ರಭಾವದಿಂದ.

† ಶಿಥಿಲಮೂಲವುಳ್ಳ=ಸಡಿಲಾದ ಬೇರುಳ್ಳ.

ಕೇಶವಿನ್ಯಾಸಕಾಲದಲ್ಲಿ ದಾಸಿಯು ತಲೆಗೆ ಬಾಚಣಿಕೆಯನ್ನು ಹಚ್ಚುತ್ತಲೆ ಅದರೊಂದಿಗೆ ತಲೆಯ ಕೂದಲು ಹಿಡಿಹಿಡಿಯಾಗಿ ಬಂದುದನ್ನು ಕಂಡು ಕಣ್ಣೀರನ್ನು ಸುರಿಸುತ್ತಾ ಉಚ್ಚಸ್ವರದಿಂದ ಅಳುತಿದ್ದಳು.

ಒಬ್ಬ ಸುಂದರಿಯು ಕುಸುಮ ವನಮಧ್ಯದಲ್ಲಿ ಸ್ಥಳಪದ್ಮದಂತೆ, ವಿಹಂಗ ಕುಲದಲ್ಲಿ ನವಿಲಿನಂತೆ, ವೇಷ ವಿನ್ಯಾಸಗಳನ್ನೆಲ್ಲಾ ಸಂಪೂರ್ಣಮಾಡಿಕೊಂಡು ಕೊಟಡಿಯಿಂದ ಕೊಟಡಿಗೆ ಹೋಗಿಬರುತಿದ್ದಳು. ಅಂದು ಆರೆಲ್ಲಿಗೆ ಹೋಗುವುದಕ್ಕೂ ಪ್ರತಿಬಂಧಕವಿರಲಿಲ್ಲ. ಈ ಸುಂದರಿಗೆ ಆವಾವ ಸೌಂದರ್ಯವು ಬೇಕಾಗಿದ್ದಿತೋ ವಿಧಾತನು ಅವನ್ನೆಲ್ಲಾ ಕಲ್ಪಿಸಿದ್ದನು ; ಅದಲ್ಲದೆ ಕತಲೂಖಾನನು ಅವಳಿಗೆ ಶಿರದಿಂದ ಅಂಗುಷ್ಠಪರ್ಯಂತ ಬೇಕಾದ ಆಭರಣಗಳನ್ನು ಕೊಟ್ಟಿದ್ದನು. ಆದರಾ ರಮಣಿಗೆ ಮುಖದಲ್ಲಿ ಸ್ವಲ್ಪವಾದರೂ ಸೌಂದರ್ಯದ ಗರ್ವದ ಚಿಹ್ನೆಯಾಗಲಿ, ಅಲಂಕಾರಗಳ ಗರ್ವದ ಚಿಹ್ನೆಯಾಗಲಿ ಲೇಶವೂ ಇರಲಿಲ್ಲ ; ಪ್ರಮೋದ ಹಾಸ್ಯ ಮುಂತಾದುವುಗಳಾವ ಚಿಹ್ನೆಯೂ ಇರಲಿಲ್ಲ. ಮುಖದ ಕಾಂತಿಯು ಗಂಭೀರವಾಗಿ ಸ್ಥಿರಭಾವವುಳ್ಳದುದಾಗಿಯೂ, ಕಣ್ಣುಗಳು ಕಟೂಗ್ರ ಜ್ವಾಲೆಯುಳ್ಳವುಗಳಾಗಿಯೂ ಇದ್ದವು.

ವಿಮಲೆಯು ಅಂತಃಪುರದಲ್ಲಿ, ಮೇಲೆ ಹೇಳಿದಂತೆ ಅಲ್ಲಲ್ಲಿ ತಿರುಗಾಡುತ್ತಿದ್ದು ಬಳಿಕ ಸೊಗಸಾಗಿ ಅಲಂಕರಿಸಲ್ಪಟ್ಟಿದ್ದೊಂದು ಕೊಟಡಿಯೊಳಗೆ ಪ್ರವೇಶಿಸಿದಳು. ಪ್ರವೇಶಾನಂತರ ಬಾಗಿಲನ್ನು ಮುಚ್ಚಿ ಒಳಗಣ ಅಗಣಿಯನ್ನು ಹಾಕಿಕೊಂಡಳು. ಅಂತಹ ಉತ್ಸವದಲ್ಲಿಯೂ ಆದೊಂದು ಕೊಟಡಿಯಲ್ಲಿ ಮಾತ್ರ ಸಣ್ಣದಾದೊಂದು ದೀಪವು ಉರಿಯುತಿದ್ದಿತು. ಕೊಟಡಿಯಲ್ಲೊತ್ತಟ್ಟು ಒಂದು ಮಂಚವಿದ್ದಿತು. ಮಂಚದಮೇಲೆ ಆಪಾದಮಸ್ತಕವಾಗಿ ಹಚ್ಚಡವನ್ನು ಹೊದ್ದುಕೊಂಡು ಮಲಗಿದ್ದೊಬ್ಬ ವ್ಯಕ್ತಿಯನ್ನು ಕಂಡು, ವಿಮಲೆಯು ಮಂಚದ ಬಳಿ ಹೋಗಿ ನಿಂತು ಮೃದುಸ್ವರದಿಂದ, 'ನಾನು ಬಂದಿದ್ದೇನೆ' ಎಂದಳು. ಮಲಗಿದ್ದ ವ್ಯಕ್ತಿಯು ಭಯಗೊಂಡಂತೆ ತಲೆಯ ಮುಸುಕನ್ನು ತೆಗೆದು ವಿಮಲೆಯನ್ನು ಗುರುತಿಸಿ ಹಚ್ಚಡವನ್ನು ಕಾಲುಗಳಿಂದ ತಳ್ಳಿ ಎದ್ದು ಕುಳಿತವಳು ಏನೊಂದುತ್ತರವನ್ನೂ ಕೊಡದೆ ಸುಮ್ಮನಿರುವುದನ್ನು ಕಂಡು, ವಿಮಲೆಯು, ಪುನಃ 'ತಿಲೋತ್ತಮೆ ! ನಾನು ಬಂದಿದ್ದೇನೆ ?' ಎಂದಳು. ಆದರೆ ತಿಲೋತ್ತಮೆಯು ಉತ್ತರವನ್ನು ಕೊಡದೆ ಸ್ಥಿರದೃಷ್ಟಿಯಿಂದ ವಿಮಲೆಯ ಮುಖವನ್ನು ನೋಡುತಿದ್ದಳು.

ತಿಲೋತ್ತಮೆಯು ವ್ರೀಡೆಯಿಂದ ಸಂಕುಚಿತಳಾದಾ ಬಾಲೆಯಾಗಿರಲಿಲ್ಲ; ಆಗಾ ಮಸಕಾದ ಬೆಳಕಿನಲ್ಲಿ ನೋಡಿದ್ದರವಳ ವಯಸ್ಸಿಗಿಂತ ಹತ್ತು ವರುಷ ವಯೋವೃದ್ಧೆಯಾಗಿದ್ದಳೆಂದು ಗೊತ್ತಾಗುತಿದ್ದಿತು. ದೇಹವು ಶೀರ್ಣವಾಗಿ ಮುಖವು ಮಲಿನವಾಗಿದ್ದಿತು. ಮಲಿನವಾದೊಂದು ಸಾಮಾನ್ಯವಾದ ಸೀರೆ

ಯನ್ನುಟ್ಟಿದ್ದಳು. ಕೆದರಿದ ತಲೆಯು ಧೂಳೀಧೂಸರಿತವಾಗಿದ್ದಿತು ; ಅಲಂಕಾರ ವೊಂದಾದರೂ ಮೈಮೇಲಿರಲಿಲ್ಲ ; ಮೊದಲು ಧರಿಸುತಿದ್ದ ಅಲಂಕಾರದ ಕುರುಹು ಗಳಿದ್ದುವು.

ವಿಮಲೆಯು ಪುನಃ, 'ನಾನು ಬರುವೆನೆಂದು ಹೇಳಿದ್ದೆನಷ್ಟೆ ; ಬಂದಿದ್ದೇನೆ; ಮಾತನಾಡುವುದಿಲ್ಲವೇಕೆ ?' ಎಂದು ಕೇಳಿದಳು.

ತಿಲೋತ್ತಮೆಯು, 'ಹೇಳಬೇಕಾದುದನ್ನಾಗಲೇ ಹೇಳಿದ್ದೇನೆ, ಮತ್ತೇ ನನ್ನು ಹೇಳಲಿ ?' ಎಂದಳು.

ವಿಮಲೆಯು ತಿಲೋತ್ತಮೆಯ ಸ್ವರದಿಂದವಳು ಅಳುತಿದ್ದಳೆಂದು ತಿಳಿದಳು. ತಲೆಯಮೇಲೂ ಮುಖದಮೇಲೂ ಕೈಯಿಟ್ಟು ನೋಡಿದಳು. ಕಣ್ಣೀರಿನಿಂದವು ತೊಯಿದಂತಾಗಿದ್ದುವು ; ಉಟ್ಟಿದ್ದ ಬಟ್ಟೆಯ ಸೆರಗನ್ನು ಮುಟ್ಟಿ ನೋಡಿದಳು. ಅದು ಪೂರ್ತಿಯಾಗಿ ಒದ್ದೆಯಾಗಿದ್ದಿತು. ತಲೆಯನ್ನಿಟ್ಟು ಮಲಗಿದ್ದ ತಲೆದಿಂಬನ್ನು ಕೈಯಿಟ್ಟು ನೋಡಿದಳು. ಅದು ಹೆಚ್ಚು ನೆನೆದುಹೋಗಿದ್ದಿತು. ಬಳಿಕ ವಿಮ ಲೆಯು, 'ಹೀಗೆ ಹಗಲೂ ರಾತ್ರಿ ರೋದನಮಾಡುತಿದ್ದರೆ ಶರೀರವು ಉಳಿಯುವ ಬಗೆ ಹೇಗೆ ?' ಎಂದಳು.

ತಿಲೋತ್ತಮೆಯು ಆಗ್ರಹದಿಂದ, 'ಉಳಿದುದರಿಂದೇನಾಗಬೇಕು ? ಇಂದಿನ ವರೆಗೆ ಉಳಿದುದಕ್ಕಲ್ಲವೆ ಈ ಪರಿ ದುಃಖಾನುಭವಕ್ಕೆ ಕಾರಣವಾಯಿತು' ಎಂದು ಹೇಳಿದಳು.

ವಿಮಲೆಯು ನಿರುತ್ತರೆಯಾಗಿ ರೋದನಮಾಡಿದಳು.

ಸ್ವಲ್ಪ ಹೊತ್ತಾದ ಬಳಿಕ ವಿಮಲೆಯು ನಿಟ್ಟುಸಿರನ್ನು ಬಿಟ್ಟು, 'ಈಗೇ ನುಪಾಯ ?' ಎಂದಳು.

ತಿಲೋತ್ತಮೆಯು, ಅಸಂತೋಷದಿಂದ ವಿಮಲೆಯ ಅಲಂಕಾರಗಳನ್ನು ನೋಡಿ, 'ಉಪಾಯದಿಂದ ಪ್ರಯೋಜನವೇನು ?' ಎಂದಳು.

ವಿಮಲೆಯು, 'ಮಗು ! ನನ್ನನ್ನು ಅಷ್ಟೊಂದು ತಾತ್ಸರ ಮಾಡಬೇಡ ; ನೀನಿನ್ನೂ ಕತಲೂಖಾನನನ್ನರಿಯೆ ; ಅವನು ಕಾರ್ಯಾಂತರದಲ್ಲಿ ವ್ಯಾಪೃತನಾಗಿ ಅವಕಾಶವಿಲ್ಲದುದರಿಂದ ನಮ್ಮ ಶೋಕನಿವಾರಣಾರ್ಥವಾಗಿ ನಮಗಿಂದಿನವರೆಗೆ ಅವಕಾಶವನ್ನು ಕೊಟ್ಟಿದ್ದಾನೆ. ನಮಗೆ ಕೊಟ್ಟಿದ್ದ ಅವಕಾಶವು ಇಂದಿಗೆ ಮುಗಿಯುವುದೆಂದು ಮೊದಲು ಹೇಳಿದ್ದೆನಷ್ಟೆ ? ಆದುದರಿಂದವನು ನಮ್ಮನ್ನಿಂದು ನೃತ್ಯಶಾಲೆಯಲ್ಲಿ ನೋಡದಿದ್ದರೆ, ನಮಗಾವ ಪ್ರಮಾದವುಂಟಾಗುವುದೋ ಅದನ್ನು ಹೇಳಲಾರೆನು' ಎಂದಳು.

ತಿಲೋತ್ತಮೆಯು, 'ಮತ್ತಾವ ಪ್ರಮಾದವು ಸಂಭವಿಸಬಲ್ಲದು ? ಎಂದಳು.

ವಿಮಲೆಯು, ಸ್ವಲ್ಪ ಸ್ಥಿರಚಿತ್ತಳಾಗಿ, 'ತಿಲೋತ್ತಮೆ ! ಒಮ್ಮೆಗೆ ನಿರಾಶ

ಳಾಗಬೇಡ, ನಮಗಿನ್ನೂ ಪ್ರಾಣವಿದೆ, ಧರ್ಮವಿದೆ ; ಪ್ರಾಣವಿರುವಷ್ಟುದಿನ ನಮ್ಮ ಧರ್ಮವನ್ನು ಕಾಪಾಡಿಕೊಳ್ಳೋಣ' ಎಂದಳು.

ತಿಲೋತ್ತಮೆಯು, 'ಅಮ್ಮಾ ! ಹಾಗಾದರೆ, ನಿನ್ನಾಭರಣಗಳನ್ನು ತೆಗೆದು ಬಿಡು. ಅವೆನ್ನ ಕಣ್ಣಿಗೆ ಶೂಲವಾಗಿವೆ' ಎಂದಳು.

ವಿಮಲೆಯು, ಸ್ವಲ್ಪ ನಕ್ಕು, 'ಮಗು ! ನನ್ನ ಆಭರಣಗಳನ್ನೆಲ್ಲಾ ಚೆನ್ನಾಗಿ ನೋಡದೆ ನನ್ನನ್ನು ತಿರಸ್ಕರಿಸಬೇಡ' ವೆಂದಳು.

ಹೀಗೆಂದು ಹೇಳಿ ವಿಮಲೆಯು ತನ್ನ ಉಡುಪಿನಲ್ಲಿ ಬಚ್ಚಿಟ್ಟುಕೊಂಡಿದ್ದೊಂದು ತೀಕ್ಷ್ಣಧಾರೆಯುಳ್ಳ ಭರ್ಜಿಯನ್ನು ಹೊರಗೆ ತೆಗೆದಳು. ದೀಪದ ಪ್ರಭೆಯಲ್ಲಿ ಅದರ ಅಲಗು ಮಿಂಚಿನ ಹಾಗೆ ಥಳಥಳಿಸಿತು. ತಿಲೋತ್ತಮೆಯು ನೋಡಿ ಭಯದಿಂದ ಆಚ್ಚರಿಗೊಂಡು, ಅದನ್ನು ಎಲ್ಲಿ ಹೇಗೆ ಸಂಪಾದಿಸಿದೆ ?' ಎಂದು ಕೇಳಿದಳು.

ವಿಮಲೆಯು, 'ನೆನ್ನೆ ಹೊಸದಾಗಿ ಈ ಅಂತಃಪುರಕ್ಕೆ ಬಂದ ಸೇವಕಳಾರೆಂಬುದು ಗೊತ್ತುಂಟೆ ?' ಎಂದು ಕೇಳಿದಳು.

ತಿಲೋತ್ತಮೆ—ನೋಡಿದೆನು : ಆಶ್ಮನಿಯು ಬಂದಿದ್ದಾಳೆ.

ವಿಮಲೆ—ಆಶ್ಮನಿಯ ಮೂಲಕವಾಗಿ ಅಭಿರಾಮಸ್ವಾಮಿಯಲ್ಲಿದ್ದುದನ್ನು ತರಿಸಿದೆನು.

ತಿಲೋತ್ತಮೆಯು ನಿಶ್ಶಬ್ದವಾಗಿದ್ದಳು. ಅವಳ ಹೃದಯವು ನಡುಗಿತು. ವಿಮಲೆಯು ತಿಲೋತ್ತಮೆಯನ್ನು ಕುರಿತು, 'ನಿನ್ನ ಉಡುಪನ್ನಿಂದು ಬದಲಾಯಿಸಲಾರೆಯಾ ?' ಎಂದು ಕೇಳಿದಳು.

ತಿಲೋತ್ತಮೆ—ಇಲ್ಲ ; ಬದಲಾಯಿಸಲಾರೆನು.

ವಿಮಲೆ—ನೃತ್ಯಗೀತಾದಿಗಳಿಗೆ ಬರುವುದಿಲ್ಲವೆ ?

ತಿಲೋತ್ತಮೆ—ಇಲ್ಲ.

ವಿಮಲೆ—ಹಾಗಾದರೆ ಅವರು ನಿನ್ನನ್ನು ಸುಮ್ಮನಿರಗೊಡಿಸರು.

ತಿಲೋತ್ತಮೆಯು ಅಳುವುದಕ್ಕೆ ತೊಡಗಿದಳು.

ವಿಮಲೆಯು, 'ಸುಮ್ಮನಿರು. ಕೇಳು, ನಾನು ನಿನ್ನ ಬಿಡುಗಡೆಗೊಂದು ಪಾಯವನ್ನು ಮಾಡುವೆನು' ಎಂದಳು.

ತಿಲೋತ್ತಮೆಯು ವಿಮಲೆಯ ಮುಖವನ್ನಾತುರದಿಂದ ನೋಡಿದಳು. ವಿಮಲೆಯು ಉಸ್ಮಾನನು ಕೊಟ್ಟಿದ್ದ ಉಂಗುರವನ್ನು ತೆಗೆದು ತಿಲೋತ್ತಮೆಯ ಕೈಯಲ್ಲಿ ಕೊಟ್ಟು, ಈ ಉಂಗುರವನ್ನಿಟ್ಟುಕೊಂಡಿರು, ನೃತ್ಯಗೀತಗಳಿಗೆ ಬರಬೇಡ ; ಅರ್ಧರಾತ್ರಿಗೆ ಮುಂಚಿತವಾಗಿ ಇಂದಿನ ಉತ್ಸವಾದಿಗಳು ಮುಗಿಯುವುದಿಲ್ಲ ; ಆದುವರೆಗೆ ಪಠಾಣನನ್ನು ಕಾರ್ಯಾಂತರದಲ್ಲಿಟ್ಟುಕೊಂಡಿರುವೆನು ; ಪಠಾಣನು ನನ್ನನ್ನು ನಿನ್ನ ಮಲತಾಯಿಯೆಂದು ಬಲ್ಲನು ; ನಾನಲ್ಲಿರುವವರೆಗೆ ನೀನು ನನ್ನಿದು

ರಿಗೆ ಬರಲು ಸಂಕೋಚಪಡುವೆ ಎಂದು ಅವನಿಗೆ ಹೇಳಿ ನಿನ್ನನ್ನು ಕರೆಯಿಸದ ಹಾಗೆ ಮಾಡುವೆನು ; ನೀನು ಅರ್ಧರಾತ್ರಿಗೆ ಸರಿಯಾಗಿ ಅಂತಃಪುರದ ಬಾಗಿಲ ಬಳಿ ಹೋಗು, ಅಲ್ಲೊಬ್ಬ ಮನುಷ್ಯನು ನಿನಗಿದೇ ಮಾದರಿ ಮತ್ತೊಂದುಂಗುರ ವನ್ನು ತೋರುವನು : ನೀನವನ ಸಂಗಡ ನಿರ್ಭಯವಾಗಿ ಹೊರಟುಹೋಗು ; ನೀನೆಲ್ಲಿಗೆ ಹೋಗಬೇಕೆಂದರೂ ಅಲ್ಲಿಗವನು ಕೊಂಡೊಯ್ದು ಬಿಡುವನು. ನೀನು ಅಭಿರಾಮಸ್ವಾಮಿಯ ಬಳಿಗೆ ಹೋಗಬೇಕೆಂದು ಹೇಳು, ಅಲ್ಲಿಗೆ ಕೊಂಡೊಯ್ದು ಬಿಡುವನು' ಎಂದಳು.

ತಿಲೋತ್ತಮೆಯು ಕೇಳಿ ಚಮತ್ಕೃತೆಯಾದಳು. ವಿಸ್ಮಯದಿಂದಲೋ, ಆಹ್ಲಾದದಿಂದಲೋ ಸ್ವಲ್ಪಹೊತ್ತು ಮಾತಿಲ್ಲದೆ ಸುಮ್ಮನಿದ್ದು, ಬಳಿಕ, 'ಇದೇನು ವೃತ್ತಾಂತ! ಉಂಗುರವನ್ನು ಕೊಟ್ಟವರಾರು ?' ಎಂದು ಕೇಳಿದಳು.

ವಿಮಲೆಯು, 'ಅದೊಂದು ದೊಡ್ಡ ಕಥೆ ; ಕಡೆಗೆ ಅವಕಾಶವಾದಾಗ ಹೇಳು ತ್ತೇನೆ ; ಈಗ ಸಂಕೋಚವಿಲ್ಲದೆ ಹೇಳಿರುವಂತೆ ಮಾಡು' ಎಂದಳು.

ತಿಲೋತ್ತಮೆ—ನಿನ್ನ ಗತಿಯೆ ? ನೀನು ಹೇಗೆ ಹೊರಗೆ ಬರುವೆ ?

ವಿಮಲೆ—ನನ್ನ ವಿಷಯವಾಗಿ ಯೋಚಿಸಬೇಡ ; ನಾನು ಬೇರೆ ಉಪಾಯ ದಿಂದ ನಾಳೆ ಬೆಳಿಗ್ಗೆ ಬಂದು ನಿನ್ನೊಡನೆ ಸೇರುವೆನು.

ವಿಮಲೆಯು ಹೀಗೆಂದು ಹೇಳಿ ತಿಲೋತ್ತಮೆಯನ್ನು ಸಮಾಧಾನಗೊಳಿಸಿ ದಳು. ತಿಲೋತ್ತಮೆಯು ತನಗೆ ಸಲುವಾಗಿ ವಿಮಲೆಯು ಮುಕ್ತಳಾಗುವ ಮಾರ್ಗವನ್ನು ಕಳೆದುಕೊಂಡಳೆಂದು ಅರಿಯಳು.

ಅನೇಕ ದಿನಗಳಿಂದ ತಿಲೋತ್ತಮೆಯ ಮುಖವು ಹರ್ಷದಿಂದ ವಿಕಾಸ ವಾಗಿರಲಿಲ್ಲ. ವಿಮಲೆಯ ಮಾತನ್ನು ಕೇಳಿ, ಇಂದವಳ ಮುಖವು ಹರ್ಷೋ ತ್ಫುಲ್ಲವಾಯಿತು.

ವಿಮಲೆಯು ನೋಡಿ, ಅಂತಃಪುಳಕಪೂರ್ಣೆಯಾಗಿ ಬಾಷ್ಪಗದ್ಗದ ಸ್ವರದಿಂದ, 'ಈಗ ನಾನು ಹೋಗುವೆನು' ಎಂದಳು.

ತಿಲೋತ್ತಮೆಯು ಸ್ವಲ್ಪ ಸಂಕೋಚ ಸಹಿತಳಾಗಿ, 'ನೀನು ದುರ್ಗದ ಸಮಾ ಚಾರವನ್ನೆಲ್ಲಾ ಬಲ್ಲವಳಾದಕಾರಣ ನಮ್ಮ ಆತ್ಮೀಯರಾರಾರು ಎಲ್ಲಿದ್ದಾರೆ ? ಹೇಳಿ ಹೋಗು' ಎಂದಳು.

ವಿಮಲೆಯು ತಿಲೋತ್ತಮೆಯ ಹೃದಯದಲ್ಲೀ ವಿಪತ್ಕಾಲದಲ್ಲೂ ಜಗ ತ್ಸಿಂಹನ ಸ್ಮರಣೆಯು ಜಾಗರಿತವಾಗಿದ್ದಿತೆಂದು ತಿಳಿದು, ರಾಜಪುತ್ರನ ನಿಷ್ಠುರ ವಾದ ಕಾಗದವು ಕೈಗೆ ಬಂದಿದ್ದರೂ, ಅದರಲ್ಲಿ ತಿಲೋತ್ತಮೆಯ ಹೆಸರೂ ಇಲ್ಲ ದಿದ್ದುದನ್ನು ಅವಳಿಗೆ ತಿಳಿಸಿದರೆ, ಹೃದಯದ ಉರಿಯನ್ನು ಮತ್ತಷ್ಟು ಹೆಚ್ಚು ಮಾಡಿದ ಹಾಗಾಗುವುದೆಂದು ಯೋಚಿಸಿ, ಅದರ ಪ್ರಸ್ತಾಪವನ್ನೆತ್ತದೆ, "ಜಗತ್ಸಿಂ ಹನೂ ಇದೇ ದುರ್ಗದಲ್ಲಿ ದೇಹಾರೋಗ್ಯದಿಂದಿರುವನು' ಎಂದು ಹೇಳಿದಳು,

ಕೇಳಿ ತಿಲೋತ್ತಮೆಯು ಮೌನವಾಗಿದ್ದಳು.

ವಿಮಲೆಯು ತಿಲೋತ್ತಮೆಯನ್ನು ಮುದ್ದಿಟ್ಟುಕೊಂಡು ಕಣ್ಣೀರು ತುಂಬಿದವಳಾಗಿ ಹೊರಟುಹೋದಳು.

---

## ಹದಿಮೂರನೆಯ ಪರಿಚ್ಛೇದ

## ಅಂಗುಳೀಯ ಪ್ರದರ್ಶನ

ವಿಮಲೆಯು ಹೊರಟುಹೋದ ಬಳಿಕ ತಿಲೋತ್ತಮೆಯು ಚಿಕ್ಕಮನೆಯಲ್ಲೊಬ್ಬಳೇ ಕುಳಿತುಕೊಂಡು ಯೋಚನೆಮಾಡಿದುದಕ್ಕೆಲ್ಲಾ ಸುಖದುಃಖಗಳೆರಡೂ ಕಾರಣವಾಗಿದ್ದುವು. ತಾನೀ ಪಾಪಾತ್ಮನ ಪಂಜರದಿಂದ ಸ್ವಲ್ಪ ಹೊತ್ತಿನಲ್ಲಿಯೇ ಮುಕ್ತಳಾಗುವೆನೆಂಬ ಸಂತೋಷವು ಪುನಃಪುನಃ ಮನಸ್ಸಿನಲ್ಲಿ ಉಕ್ಕುತ್ತಿರುವುದು. ಅಷ್ಟೇ ಅಲ್ಲ; ಪ್ರಾಣಾಧಿಕ ಸ್ನೇಹಮಯಿಯಾದ ವಿಮಲೆಯಿಂದ ತನಗೀ ಮುಕ್ತಿಸಾಧನೆಯುಂಟಾಗಿ ಉದ್ಧಾರವಾಗುವೆನೆಂಬ ಸಂತೋಷವನ್ನು ಕುರಿತು ಪುನಃಪುನಃ ಮನಸ್ಸಿನಲ್ಲಿ ಆಲೋಚಿಸುತ್ತಾ ಇಮ್ಮಡಿ ಸುಖಿಯಾಗುವಳು. 'ಮುಕ್ತಳಾದ ಬಳಿಕ ಎಲ್ಲಿಗೆ ಹೋಗಲಿ? ತಂದೆಯ ಮನೆಯುಂಟೆ?' ಎಂದು ಯೋಚಿಸುತ್ತಾ ಕಣ್ಣೀರು ತುಂಬುವಳು. ಆ ಚಿಂತೆಯು ಸ್ವಲ್ಪ ಶಮನವಾಗುತ್ತಲೇ ಮತ್ತೊಂದು ಚಿಂತೆಯು ಮನದಲ್ಲಿ ಪ್ರದೀಪ್ತವಾಗಿ, 'ರಾಜಕುಮಾರನು ಕುಶಲವಾಗಿದ್ದಾನಷ್ಟೆ? ಎಲ್ಲಿರುವನು? ಹೇಗಿರುವನು? ಅವನೂ ಸೆರೆಯಲ್ಲಿರಬೇಕು' ಎಂದು ಮುಂತಾಗಿ ಯೋಚಿಸುತ್ತಾ ಬಾಷ್ಪಾಕುಲಲೋಚನಗಳುಳ್ಳವಳಾಗುವಳು. ಮತ್ತು 'ಹಾ! ಅದೃಷ್ಟವೆ! ರಾಜಪುತ್ರನು ನನಗೆ ಸಲುವಾಗಿ ಬಂದಿಯಾದನು. ನಾನು ಅವನ ಚರಣದಲ್ಲಿ ಬಿದ್ದು ಪ್ರಾಣವನ್ನು ಕೊಟ್ಟರೂ ತೀರುವುದೆ? ಅವನಿಗೋಸ್ಕರ ಏನನ್ನು ಮಾಡಲಿ?' ಎಂದು ಮುಂತಾಗಿ ಯೋಚಿಸುತ್ತಾ, ಕೂಡಲೇ, "ಅವನು ಕಾರಾಗಾರದಲ್ಲಿರುವನಲ್ಲವೆ? ಆ ಕಾರಾಗಾರವು ಹೇಗಿರುವುದೋ? ಅಲ್ಲಿಗಾರೂ ಹೋಗಲಾಗದೇ? ಅವನು ಕಾರಾಗಾರದಲ್ಲಿ ಕುಳಿತು ಏನನ್ನು ಯೋಚಿಸುತ್ತಿರುವನೊ? ಈಗೇನು ಯೋಚಿಸುವನೊ? 'ತಿಲೋತ್ತಮೆ' ಎಂಬ ಹೆಸರು ಅವನ ನೆನಪಿನಲ್ಲಿರುವುದೆ? ಇದ್ದರೂ ಇರಬಹುದು; ನಾನೇ ಅವನ ಕಷ್ಟಗಳಿಗೆಲ್ಲಾ ಮೂಲಕಾರಣಳು. ಮನಸ್ಸಿನಲ್ಲಿ ನನ್ನನ್ನು ಕುರಿತು ಏನೆಂದುಕೊಳ್ಳುತ್ತಿರುವನೋ? ಎಷ್ಟು ಕಟೂಕ್ತಿಗಳನ್ನು ಹೇಳುತ್ತಿರುವನೋ?" ಎಂದು ಹೇಳಿಕೊಳ್ಳುತ್ತಾ, ಪುನಃ, 'ಹೀಗೇಕೆ ಯೋಚನೆಯು ಹುಟ್ಟಿತು? ಅವನಾರಿಗೂ ಕಟೂಕ್ತಿಗಳನ್ನು ಹೇಳುವವನಲ್ಲ—ಹಾಗಿರದು. ಒಂದುವೇಳೆ ನನ್ನನ್ನು ಮರೆತಿರಬಹುದು. ನಾನು ಯವನನ ಭವನದಲ್ಲಿರುವೆನೆಂದು ತಿರಸ್ಕರಿಸಿ ಬೇಸರಗೊಂಡಿರುವನೇನೋ?' ಎಂದು ಭಾವಿಸಿಕೊಂಡು,

'ಅದಿರದು; ದುರ್ಗದಲ್ಲವನು ಹೇಗೆ ಬಂದಿಯೋ ಹಾಗೆ ನಾನೂ ಬಂದಿಯಾಗಿದ್ದೇನೆ. ಹೀಗಿರುತ್ತಾ, ತಿರಸ್ಕರಿಸುವನೇಕೆ? ಒಂದುವೇಳೆ ತಿರಸ್ಕರಿಸಿದರೆ, ನಾನವನ ಕಾಲಿಗೆ ಬಿದ್ದು ಸಂಗತಿಗಳನ್ನೆಲ್ಲಾ ವಿವರವಾಗಿ ಹೇಳಿಕೊಳ್ಳುವೆನು. ಆಗೆಲ್ಲವನ್ನೂ ತಿಳಿಯುವನು. ನಿಜಸ್ಥಿತಿಯನ್ನು ನಂಬದಿದ್ದರೆ ನಾನವನ ಸಮ್ಮುಖದಲ್ಲಿ ಪ್ರಾಣತ್ಯಾಗವನ್ನು ಮಾಡುವೆನು. ಪೂರ್ವದಲ್ಲಿ ಅಗ್ನಿಪರೀಕ್ಷೆಮಾಡುತಿದ್ದರು. ಕಲಿಯುಗದಲ್ಲದು ಸಾಧ್ಯವಿಲ್ಲ; ಅದನ್ನು ಮಾಡಕೂಡದು. ಒಳ್ಳೆಯದಾಯಿತು; ನಾನಾಗಿಯೇ ಅವನೆದುರಿಗೆ ಜೆಂಕಿಯಲ್ಲಿ ಬಿದ್ದು ಪ್ರಾಣತ್ಯಾಗಮಾಡಿಬಿಡುವೆನು' ಎಂದು ಚಿಂತಿಸುತಿದ್ದು, ಪುನಃ, 'ಅವನನ್ನು ಹೇಗೆ ನೋಡಲಾಪೆನು? ಅವನು ಸೆರೆಯಿಂದ ಹೇಗೆ ಮುಕ್ತನಾಗುವನು? ನಾನು ಮುಕ್ತಳಾದರೆ ಆವ ಕಾರ್ಯವು ಸಿದ್ಧಿಯಾದಹಾಗಾಯಿತು? ಈ ಉಂಗುರವು ನನ್ನ ವಿಮಾತಿಗೆ ಎಲ್ಲಿ ಸಿಕ್ಕಿತು? ಅದರಿಂದವನ ಮುಕ್ತಿಯಾಗದೆ? ಉಂಗುರವನ್ನು ಅವನಿಗೆ ಕಳುಹಿಸಲೆ? ನನ್ನನ್ನು ಕರಕೊಂಡು ಹೋಗುವರಾರು? ಅವನಿಂದಾವ ಉಪಾಯವಾಗದೆ ಹೋಗುವುದೆ? ಒಳ್ಳೆಯದು, ಅವನನ್ನೇ ಕೇಳುವೆನು. ಏನು ಹೇಳುವನೋ ಗೊತ್ತಾಗುವುದು. ಆದರೆ ಕೇಳುವ ಬಗೆ ಹೇಗೆ? ಅವನನ್ನು ಮತ್ತೊಂದು ಸಲ ನೋಡಲಾರೆನೆ' ಎಂದು ಭಾವಿಸುತ್ತ, ಪುನಃ, 'ಅವನನ್ನು ನೋಡಬೇಕೆಂದು ಹೇಗೆ ಹೇಳಲಿ? ನೋಡಿದರೆ ಅವನ ಸಂಗಡ ಏನೆಂದು ಮಾತನಾಡಲಿ? ನನ್ನ ಮನಸ್ಸಿನ ದುಃಖವನ್ನು ಹೇಗೆ ತಿಳಿಸಲಿ?' ಎಂದು ಬಗೆ ಬಗೆಯಾಗಿ ಬಗೆಯುತೊಡಗಿದಳು.

ಆ ಸಮಯದಲ್ಲೊಬ್ಬ ಪರಿಚಾರಿಕೆಯು ಕೊಟಡಿಗೆ ಬಂದಳು. ಅವಳನ್ನು ನೋಡಿ, ತಿಲೋತ್ತಮೆಯು, 'ಈಗ ರಾತ್ರಿ ಹೊತ್ತೆಷ್ಟು?' ಎಂದು ಕೇಳಿದಳು.

ದಾಸಿಯು ಹನ್ನೆರಡುಘಂಟೆಯ ಮೇಲಾಯಿತೆಂದಳು. ದಾಸಿಯು ಹೊರಗೆ ಹೊರಟುಹೋಗಲೆಂದಿದ್ದಹಾಗೆ ಅವಳು ತಾನಾಗಿ ಬಂದ ಕೆಲಸವಾಯಿತೆಂದು ಹೊರಟುಹೋದಳು. ಬಳಿಕ ತಿಲೋತ್ತಮೆಯು ವಿಮಲೆಯು ಕೊಟ್ಟಿದ್ದುಂಗುರವನ್ನು ತೆಗೆದುಕೊಂಡು ಕೊಟಡಿಯಿಂದ ಹೊರಟಳು. ಪುನಃ ಅವಳ ಮನಸ್ಸಿನಲ್ಲಿ ಶಂಕೆಯುಂಟಾಯಿತು. ಕಾಲು ಅದರಿತು, ಎದೆಗುಂದಿತು, ಮುಖವು ಬಾಡಿತು. ಒಂದು ಕಾಲು ಮುಂದಾಯಿತು; ಕ್ರಮವಾಗಿ ಸಾಹಸಗೊಂಡು ಅಂತಃಪುರದ ಬಾಗಿಲವರೆಗೆ ಹೋದಳು, ಅಂತಃಪುರದಲ್ಲಿದ್ದ ಖೋಜೆಗಳು, ಹಬಸಿಜನ ಮುಂತಾದವರು ಪ್ರಮೋದಗಳಲ್ಲಿ ವ್ಯಸ್ತರಾಗಿದ್ದರು. ಅವಳನ್ನಾರೂ ನೋಡಲಿಲ್ಲ; ನೋಡಿದರೂ ಗಮನಿಸಲಿಲ್ಲ. ಆದರೆಲ್ಲರೂ ತನ್ನನ್ನೇ ನೋಡುತಿದ್ದರೆಂದು ತಿಲೋತ್ತಮೆಯು ತಿಳಿದಳು. ಹೇಗೇಗೋ ಸಾಹಸಗೊಂಡು ಅಂತಃಪುರದ ಬಾಗಿಲವರೆಗೆ ಬಂದಳು. ಅಲ್ಲಿ ಪ್ರಹರಿಗಳು ಆನಂದದಿಂದುನ್ಮತ್ತರಾಗಿದ್ದರು. ಕೆಲವರು ನಿದ್ರಿತರಾಗಿದ್ದರು; ಕೆಲವರು ಜಾಗ್ರತಾವಸ್ಥೆಯಲ್ಲಿ

ಅಚೇತನರಾಗಿದ್ದರು ; ಕೆಲವರು ಅರ್ಧಚೇತನವುಳ್ಳವರಾಗಿದ್ದರು. ಅವಳನ್ನಾರೂ ಲಕ್ಷಿಸಲಿಲ್ಲ. ಬಾಗಿಲಲ್ಲೊಬ್ಬನು ನಿಂತಿದ್ದನು. ಅವನೂ ಪಹರೇದವರ ಉಡುಪುಳ್ಳವನಾಗಿದ್ದನು, ತಿಲೋತ್ತಮೆಯನ್ನು ಕಂಡು, 'ನಿಮ್ಮ ಕೈಯಲ್ಲಿ ಉಂಗುರವಿದೆಯೆ ?' ಎಂದು ಕೇಳಿದನು.

ತಿಲೋತ್ತಮೆಯು ಭಯಗೊಂಡು, ವಿಮಲೆಯು ಕೊಟ್ಟಿದ್ದುಂಗುರವನ್ನು ತೋರಿದಳು. ಪ್ರಹರಿಯ ವೇಷದಲ್ಲಿದ್ದವನು ಉಂಗುರವನ್ನು ನೋಡಿ ತನ್ನ ಕೈಲಿದ್ದುಂಗುರವನ್ನು ತಿಲೋತ್ತಮೆಗೆ ತೋರಿ, 'ನನ್ನ ಹಿಂದೆ ಬನ್ನಿ, ಭಯವೇನೂ ಇಲ್ಲ' ಎಂದು ಹೇಳಿದನು.

ತಿಲೋತ್ತಮೆಯು ಚಂಚಲಚಿತ್ತಳಾಗಿ ಪ್ರಹರಿಯ ಹಿಂದೆ ಹೋದಳು. ಅಂತಃಪುರದ ಬಾಗಿಲಲ್ಲಿ ಪಹರೇದವರೂ ಶಿಥಿಲಭಾವಾಪನ್ನರಾಗಿದ್ದರು. ಅದಲ್ಲದೆ ಅಂದಾರು ಎತ್ತೆಡೆಹೋಗಬೇಕಾಗಿದ್ದರೂ ಅಡ್ಡಿಯಿರಲ್ಲವಾದಕಾರಣ ಅವರನ್ನಾರೂ ಆತಂಕಪಡಿಸಲಿಲ್ಲ. ಪ್ರಹರಿಯು ತಿಲೋತ್ತಮೆಯನ್ನು ತನ್ನ ಸಂಗಡ ಕರೆದುಕೊಂಡು ಅನೇಕ ಮಹಾದ್ವಾರಗಳನ್ನೂ, ಅನೇಕ ಪ್ರಕೋಷ್ಠಗಳನ್ನೂ, ಅನೇಕ ಪ್ರಾಂಗಣಭೂಮಿಗಳನ್ನೂ ದಾಟಿ ಕಡೆಗೆ ಕೋಟೆಯ ಬಾಗಿಲ ಬಳಿ ಬಂದು ತಿಲೋತ್ತಮೆಯನ್ನು ಕುರಿತು, 'ಎಲ್ಲಿಗೆ ಕರೆದುಕೊಂಡೊಯ್ದು ಬಿಡಲಿ ?' ಎಂದನು.

ತಿಲೋತ್ತಮೆಗೆ ಏನನ್ನು ಹೇಳುವುದಕ್ಕೂ ತೋಚಲಿಲ್ಲ. ಜ್ಞಾನಶೂನ್ಯಳಾಗಿ, ಇದ್ದಕ್ಕಿದ್ದಹಾಗೆ ಹೃತ್ಕಂಪವುಂಟಾಯಿತು ; ಕಣ್ಣು ಕಾಣಿಸದೆ ಹೋಯಿತು ; ಕಿವಿ ಕೇಳದೆಹೋಯಿತು ; ವಿಮಲೆಯು ಹೇಳಿಕೊಟ್ಟುದುದೆಲ್ಲಾ ಮರೆತುಹೋಯಿತು ; ಕನವರಿಸಿದವಳಂತೆ ಬಾಯಿಂದ ಮಾತುಗಳು ಹೊರಟವು. ಅವಳಾ ಮಾತುಗಳಲ್ಲಿ ಜಗತ್ಸಿಂಹನೆಂಬೊಂದು ಮಾತು ಅಸ್ಪಷ್ಟವಾಗಿ ಪಹರೇದವನ ಕಿವಿಗೆ ಬಿದ್ದಿತು.

ಪ್ರಹರಿಯು, 'ಜಗತ್ಸಿಂಹನು ಸೆರೆಮನೆಯಲ್ಲಿದ್ದಾನೆ, ಅಲ್ಲಿಗೆ ಹೋಗಲಾರಿಗೂ ಸಾಧ್ಯವಿಲ್ಲ ; ಆದರೆ ನೀವೆಲ್ಲಿಗೆ ಹೋಗಬೇಕೆಂದರೂ ಕೊಂಡೊಯ್ದು ಬಿಡಬೇಕೆಂದು ಅಪ್ಪಣೆಯಾಗಿರುವಕಾರಣ, ಬನ್ನಿ, ಕೊಂಡೊಯ್ದುಬಿಡುವೆನು' ಎಂದನು.

ಪಹರೇದವನು ತಿಲೋತ್ತಮೆಯನ್ನು ಪುನಃ ಕೋಟೆಯೊಳಗೆ ಕರೆತಂದನು. ತಿಲೋತ್ತಮೆಗೆ ಆವದೂ ಅರುವಿಲ್ಲದೆ ಕೀಲುಬೊಂಬೆಯಹಾಗೆ ಪಹರೇದವನ ಸಂಗಡ ಹಿಂದಿರುಗಿದಳು. ಪ್ರಹರಿಯು ಸೆರೆಮನೆಯ ಬಳಿ ಬಂದು ನೋಡಿದನು. ಬೇರೇ ಸ್ಥಳದಲ್ಲಿದ್ದಂತೆ ಅಲ್ಲಿಯ ಪ್ರಹರಿಗಳು ಪ್ರಮೋದಾಸಕ್ತರಾಗಿರದೆ ಎಲ್ಲರೂ ತಮ್ಮ ತಮ್ಮ ಸ್ಥಾನದಲ್ಲಿದ್ದುಕೊಂಡಿದ್ದರು. ಪ್ರಹರಿಯು ಅವರಲ್ಲೊಬ್ಬನನ್ನು ಕುರಿತು, 'ರಾಜಪುತ್ರನೆಲ್ಲಿದ್ದಾನೆ ?' ಎಂದು ಕೇಳಿದನು. ಅವನು ಸೆರೆಮನೆಯ

ಕಡೆ ಬೆರಳನ್ನು ತೋರಿದನು. ಪ್ರಹರಿಯು ಕಾರಾಗಾರರಕ್ಷಕನನ್ನು ಕುರಿತು, 'ಒಳಗಿರುವ ಬಂದಿಯು ನಿದ್ರಿತನಾಗಿದ್ದಾನೋ ಅಥವಾ ಜಾಗರಿತನಾಗಿದ್ದಾನೋ?' ಎಂದು ಕೇಳಿದನು. ಕಾರಾಗಾರರಕ್ಷಕನು ಒಳಗೆ ಹೋಗಿ ನೋಡಿ, ಬಂದು, 'ಬಂದಿಯು ಮಾತನಾಡಿದನು, ಎಚ್ಚರವಾಗಿದ್ದಾನೆ' ಎಂದು ಹೇಳಿದನು.

ಉಂಗುರವನ್ನು ತಂದಿದ್ದವನು, 'ನಾನು ಒಳಗೆ ಹೋಗಬೇಕು, ಬಾಗಿಲನ್ನು ತೆಗಿ, ಈ ರಮಣಿಯು ಬಂದಿಯ ಸಂಗಡ ಮಾತನಾಡಬೇಕಾಗಿದೆ' ಎಂದನು.

ರಕ್ಷಕನು ಚಮತ್ಕೃತನಾಗಿ, 'ಹೇಗೆ ತೆಗೆಯಲಿ?; ಅಪ್ಪಣೆಯಿಲ್ಲ; ನಿನಗದು ಗೊತ್ತಿಲ್ಲವೆ?' ಎಂದನು.

ಉಂಗುರವಾಹಕನು ಉಸ್ಮಾನನು ಕೊಟ್ಟಿದ್ದ ಸಾಂಕೇತಿಕವಾದುಂಗುರ ವನ್ನು ರಕ್ಷಕನಿಗೆ ತೋರುತ್ತಲೇ, ಅವನು ಕಾರಾಗಾರದ ಬಾಗಿಲನ್ನು ತೆರೆದು ಬಿಟ್ಟನು.

ರಾಜಕುಮಾರನು ಕೊಟಡಿಯಲ್ಲೊಂದು ಸಾಮಾನ್ಯದ ಮರದ ಮಂಚದ ಮೇಲೆ ಮಲಗಿದ್ದನು. ಬಾಗಿಲನ್ನು ತೆಗೆದ ಶಬ್ದವನ್ನು ಕೇಳಿ, ಕೌತೂಹಲ ಪ್ರಯುಕ್ತವಾಗಿ ಬಾಗಿಲಕಡೆ ನೋಡಿದನು. ತಿಲೋತ್ತಮೆಯು ಬಾಗಿಲವರೆಗೂ ಬಂದವಳು ಒಳಗೆ ಹೋಗಲಾಗದೆ ಹೊರಗೆ ನಿಂತಿದ್ದಳು; ಕಾಲೇಳದೆ ಪಾರ್ಶ್ವದಲ್ಲಿ ಬಾಗಿಲನ್ನು ಹಿಡಿದುಕೊಂಡು ನಿಂತಿದ್ದಳು.

ತಿಲೋತ್ತಮೆಗೆ ಕೊಟಡಿಯೊಳಗೆ ಬರಲಿಷ್ಟವಿಲ್ಲದಂತಿದ್ದುದನ್ನು ಕಂಡು, ಉಂಗುರದವನು, 'ಇಲ್ಲಿ ವಿಳಂಬವೇಕೆ? ಇಷ್ಟವಿಲ್ಲದಿದ್ದರೆ ಹಿಂದಿರುಗಿ ಹೋಗೋಣ' ಎಂದು ಹೇಳಿದನು. ಆದರೂ ತಿಲೋತ್ತಮೆಗೆ ಕಾಲೇಳಲಿಲ್ಲ.

ತಿಲೋತ್ತಮೆಯು ಹಿಂದಿರುಗಿ ಹೋಗಲುದ್ಯುಕ್ತೆಯಾದಳು. ಹಿಂದಿರುಗಿ ಹೋಗುವುದಕ್ಕೂ ಕಾಲು ಬರಲಿಲ್ಲ. ಪ್ರಹರಿಯು ವ್ಯಸ್ತನಾದನು. ಯೋಚಿಸುತ ಕಡೆಗೆ ಪ್ರಯತ್ನವಿಲ್ಲದೆ ಆವಳೊಂದು ಕಾಲು ಮುಂದಾಗಿ ಹಾಗೇವೇ ಕೊಟಡಿ ಯೊಳಗೆ ಬಂದಳು.

ಕೊಟಡಿಯೊಳಗೆ ಬಂದು ರಾಜಪುತ್ರನನ್ನು ನೋಡುತಲೇ ಅವಳಿಗೆ ಪುನಃ ಗತಿಶಕ್ತಿಯು ನಿಂತುಹೋಗಿ ಬಾಗಿಲ ಪಾರ್ಶ್ವದಲ್ಲಿ ಗೋಡೆಯನ್ನೊರಗಿಕೊಂಡು ಅಧೋಮುಖಿಯಾಗಿ ನಿಂತಳು.

ರಾಜಪುತ್ರನು ಮೊದಲು ತಿಲೋತ್ತಮೆಯನ್ನು ಗುರುತಿಸಲಾರದೆ, ಹೆಂಗ ಸೊಬ್ಬಳು ಬಂದು ನಿಂತಿದ್ದುದನ್ನು ನೋಡಿ ವಿಸ್ಮಿತನಾದನು. ರಮಣಿಯು ಗೋಡೆಯನ್ನು ಹಿಡಿದು ಅಧೋಮುಖಿಯಾಗಿ ನಿಂತವಳು ಹತ್ತಿರ ಬಾರದಿದ್ದು ದನ್ನು ನೋಡಿ ಹೆಚ್ಚು ಅಚ್ಚರಿಗೊಂಡು, ರಾಜಪುತ್ರನೇ ಹಾಸಿಗೆಯಿಂದೆದ್ದು ಬಾಗಿಲ ಬಳಿ ಬಂದು ನೋಡಿದನು. ಗುರುತಾಯಿತು.

ತಿಲಾರ್ಧಕಾಲ ಕಣ್ಣಿಗೆ ಕಣ್ಣು ಸೇರಿದ್ದುವು. ಬಳಿಕ ತಿಲೋತ್ತಮೆಯು

ದೃಷ್ಟಿಯು ನೆಲದಮೇಲೆ ಊರಿತು. ಆದರೆ ಶರೀರವು ಮಾತ್ರ ರಾಜಪುತ್ರನ ಕಾಲಿನಮೇಲೆ ಬೀಳಲೆಳಸಿದ್ದಂತೆ ಸ್ವಲ್ಪ ಬಗ್ಗಿತು.

ರಾಜಪುತ್ರನು ಸ್ವಲ್ಪ ಹಿಂದಕ್ಕೆ ಸರಿದು ನಿಂತನು. ತಿಲೋತ್ತಮೆಯ ಶರೀರವು ಮಂತ್ರಮುಗ್ಧವಾಗಿದ್ದಂತೆ ಸ್ತಂಭಿತವಾಗಿ ನಿಂತಿದ್ದಿತು. ಪೂರ್ವ ಕ್ಷಣದಲ್ಲಿ ಪ್ರಸ್ಫುಟಿತವಾಗಿದ್ದವಳ ಹೃತ್ಪದ್ಮವು ಶುಷ್ಕವಾಗುತ್ತ ಬಂದಿತು. ರಾಜಪುತ್ರನು, 'ವೀರೇಂದ್ರಸಿಂಹನ ಮಗಳೆ?' ಎಂದನು.

ತಿಲೋತ್ತಮೆಯ ಹೃದಯದಲ್ಲಿ ಸಿಡಿಲುಬಿದ್ದಂತಾಯಿತು. 'ವೀರೇಂದ್ರಸಿಂಹನ ಮಗಳೆ!' ಎಂಬುದೆ ಸಂಬೋಧನೆ? ಜಗತ್ಸಿಂಹನಿಗೆ ತಿಲೋತ್ತಮೆಯೆಂಬ ಹೆಸರು ಸಹ ಮರೆತುಹೋಯಿತೆ? ಇಬ್ಬರೂ ಕ್ಷಣಕಾಲ ನೀರವವಾಗಿದ್ದರು. ಅನಂತರ ಪುನಃ ರಾಜಕುಮಾರನು, 'ಇಲ್ಲಿಗೆ ಬಂದುದೇಕೆ?' ಎಂದನು.

'ಬಂದುದೇಕೆ!' ಎಂತಹ ಪ್ರಶ್ನೆ! ತಿಲೋತ್ತಮೆಯ ತಲೆಯು ಸುತ್ತಲಾರಂಭವಾಯಿತು. ಕೊಟಡಿ, ಗೋಡೆ, ದೀಪ ಮುಂತಾದುವೆಲ್ಲಾ ತಿರುಗಲಾರಂಭಿಸಿದುವು. ತಲೆಗೆ ಗೋಡೆಯನ್ನಾಸರೆ ಮಾಡಿಕೊಂಡು ನಿಂತಳು.

ರಾಜಪುತ್ರನು ಬಹಳ ಹೊತ್ತು ಪ್ರತ್ಯುತ್ತರವು ಹೊರಡಬಹುದೆಂದು ನಿರೀಕ್ಷಿಸಿದನು. ಆದರೆ ಉತ್ತರವನ್ನು ಹೇಳುವವರಾರು? ಪ್ರತ್ಯುತ್ತರ ಹೊರಡುವ ಸಂಭವವಿಲ್ಲದೆ ರಾಜಪುತ್ರನು, 'ನಿನಗೆ ಕಷ್ಟವಾಗಿರಬಹುದು. ಹಾಗೂ ಸ್ವಸ್ಥವಾಗಿರುವಂತಿಲ್ಲ; ಹಿಂದಿರುಗಿ ಹೋಗು; ಹಿಂದಿನ ಮಾತುಗಳನ್ನು ಮರೆತುಬಿಡು' ಎಂದನು.

ತಿಲೋತ್ತಮೆಗಿದ್ದ ಭ್ರಮೆಯು ತಪ್ಪಿಹೋಯಿತು. ಅಕಸ್ಮಾತ್ತು ವೃಕ್ಷಚ್ಯುತವಲ್ಲರಿಯಂತೆ ನೆಲದಮೇಲೆ ಬಿದ್ದಳು.

---

## ಹದಿನಾಲ್ಕನೆಯ ಪರಿಚ್ಛೇದ

### ಮೋಹ

ಜಗತ್ಸಿಂಹನು ಹತ್ತಿರ ಬೊಗ್ಗಿ ನೋಡಲಾಗ ತಿಲೋತ್ತಮೆಗೆ ಚಲನವಿರಲಿಲ್ಲ. ತನ್ನ ಬಟ್ಟೆಯ ಸೆರಗಿನಿಂದ ಬೀಸಲಾರಂಭಿಸಿದವನು ಅರುವಿನ ಚಿಹ್ನೆಯನ್ನು ಕಾಣದೆ ಪ್ರಹರಿಯನ್ನು ಕರೆದನು. ಅವಳ ಸಂಗಡ ಬಂದಿದ್ದವನು ಹತ್ತಿರ ಬಂದನು. ಜಗತ್ಸಿಂಹನವನನ್ನು ಕುರಿತು, 'ಇದ್ದಕ್ಕಿದ್ದ ಹಾಗೆ ಮೂರ್ಛಿತಳಾಗಿದ್ದಾಳೆ, ಸಂಗಡ ಬಂದಿರುವಳನ್ನು ಕರೆದು ಶುಶ್ರೂಷೆಯನ್ನು ಮಾಡಹೇಳು' ಎಂದು ಹೇಳಿದನು. ಪ್ರಹರಿಯು, ಸಂಗಡ ಬಂದವನು ತಾನೊಬ್ಬನೇ ಎಂದನು.

ರಾಜಕುಮಾರನು ವಿಸ್ಮಿತನಾಗಿ, 'ನೀನೊಬ್ಬನೇವೇ!' ಎಂದನು.

ಪ್ರಹರಿಯು, ಮತ್ತಾರೂ ಸಂಗಡ ಬರಲಿಲ್ಲವೆಂದನು.

ರಾಜಕುಮಾರನು, 'ಹಾಗಾದರೆ, ಮಾಡುವುದೇನು? ಅಂತಃಪುರದಲ್ಲಾ ರಾದರೂ ದಾಸಿಯರಿಗೆ ತಿಳಿಸು' ಎಂದು ಹೇಳಿದನು.

ಪ್ರಹರಿಯು ಹೋದನು. ರಾಜಕುಮಾರನು ಪುನಃ ಅವನನ್ನು ಕರೆದು, 'ಕೇಳು, ಮತ್ತಾರಿಗಾದರೂ ತಿಳುಹಿದರೆ ಗದ್ದಲಕ್ಕೆ ಕಾರಣವಾಗುವುದಲ್ಲದೆ, ಇಂದಿನ ರಾತ್ರಿ ಪ್ರಮೋದಾಮೋದಗಳನ್ನು ಬಿಟ್ಟು ಇವಳ ಸಹಾಯಕ್ಕಾರೂ ಬರಲಾರರು' ಎಂದನು.

ಪ್ರಹರಿಯು, 'ನಿಜ, ಅದಲ್ಲದೆ ಕಾರಾಗಾರದ ಪಹರೇದವರು ಮತ್ತಾರನ್ನೂ ಒಳಗೆ ಬಿಡರು; ಬೇರೇ ಜನರನ್ನು ಒಳಗೆ ಕರೆತರಲೆನಗೆ ಧೈರ್ಯವಿಲ್ಲ' ಎಂದನು.

ರಾಜಪುತ್ರ—ಹಾಗಾದರೆ ಉಪಾಯಾಂತರವಿಲ್ಲ. ನೀನು ಬೇಗನೆ ಹೋಗಿ ಒಬ್ಬ ದಾಸಿಯ ಮೂಲಕ ನವಾಬನ ಮಗಳಿಗೆ ಸಮಾಚಾರವನ್ನು ಹೇಳಿಕಳುಹು.

ಪ್ರಹರಿಯು ಹಾಗೆ ಮಾಡುವುದಾಗಿ ಹೇಳಿ ಹೊರಟುಹೋದನು. ರಾಜ ಪುತ್ರನು ತಿಲೋತ್ತಮೆಗೆ ಸಾಧ್ಯವಾದಷ್ಟು ಶುಶ್ರೂಷೆಯನ್ನು ಮಾಡತೊಡಗಿದನು. ಆ ಕಾಲದಲ್ಲಿ ರಾಜಕುಮಾರನು ಮನಸ್ಸಿನಲ್ಲೇನೆಂದು ಭಾವಿಸಿಕೊಳ್ಳುತಿದ್ದನೋ ಅದನ್ನಾರು ಹೇಳಬಲ್ಲರು? ಕಣ್ಣುಗಳಲ್ಲಿ ನೀರು ತುಂಬಿದನೋ ಇಲ್ಲವೋ ಅದನ್ನು ಹೇಳುವುದಸಾಧ್ಯ—

ರಾಜಕುಮಾರನು ಕಾರಾಗಾರದಲ್ಲಿ ತಿಲೋತ್ತಮೆಯ ಸಂಗಡ ತಾನೊಬ್ಬನೇ ಉಳಿದುದನ್ನು ಕಂಡು ಅತ್ಯಂತ ವ್ಯಸ್ತನಾದನು. ಆಯಷೆಗೆ ಸಮಾಚಾರವು ತಲ್ಪ ದಿದ್ದರೂ, ಅಥವಾ ಅವಳಾವ ಉಪಾಯವನ್ನು ಮಾಡದೆ ಹೋದರೂ ಮಾಡುವು ದೇನು?

ತಿಲೋತ್ತಮೆಗೆ ಕ್ರಮವಾಗಿ ಸ್ವಲ್ಪ ಸ್ವಲ್ಪವಾಗಿ ಅರುವುಂಟಾಗುತ್ತ ಬಂದಿತು. ಅದರೊಳಗೆ ತೆರೆದಿದ್ದ ಬಾಗಿಲಲ್ಲಿ ಹೆಂಗಸರಿಬ್ಬರು ಪ್ರಹರಿಯ ಸಂಗಡ ಬರುತಿದ್ದು ದನ್ನು ನೋಡಿದನು. ಬರುತಿದ್ದವರಲ್ಲೊಬ್ಬಳು ಅವಕುಂಠನವತಿಯಾಗಿದ್ದಳು. ಅವಕುಂಠನವತಿಯ ಉನ್ನತ ಶರೀರವೂ, ಸಂಗೀತದಂತೆ ಮಧುರವಾದ ಪಾದವಿನ್ಯಾ ಸವೂ, ಲಾವಣ್ಯಮಯವಾದ ಗ್ರೀವಾಭಂಗಿಯೂ ಇವೇ ಮುಂತಾದುವುಗಳನ್ನು ದೂರದಿಂದ ನೋಡಿ ಜಗತ್ಸಿಂಹನು ದಾಸಿಯ ಸಂಗಡ ಆಯಷೆಯು ಸ್ವಯಂ ಬರು ತಿದ್ದಳೆಂದೂ ಅವಳೊಂದಿಗೆ ಧೈರ್ಯವೇ ಮೂರ್ತಿಗೊಳಿಸಿ ಬರುತಿದ್ದಿತೆಂದೂ ತಿಳಿದನು.

ಆಯಷೆಯೂ ದಾಸಿಯೂ ಪ್ರಹರಿಯೊಡನೆ ಬಾಗಿಲ ಬಳಿ ಬರುತ್ತಲೇ ಅಲ್ಲಿದ್ದ ದ್ವಾರಪಾಲಕನು ಉಂಗುರವ ತಂದವನನ್ನು ಕುರಿತು, 'ಅವರನ್ನೂ ಒಳಗೆ ಬಿಡ ಬೇಕೆ?' ಎಂದು ಕೇಳಿದನು.

ಉಂಗುರವಾಹಕನು—'ನಾನರಿಯೆ, ನಿನ್ನಿಷ್ಟವಿದ್ದಂತೆ ಮಾಡು' ಎಂದು ಹೇಳಿದನು. ದ್ವಾರಪಾಲಕನು ಹೆಂಗಸರನ್ನು ಒಳಗೆ ಹೋಗಲು ಅಡ್ಡಿಮಾಡಿದನು.

ಆ ನಿಷೇಧವನ್ನು ಕೇಳಿ ಆಯುಷೆಯು ತನ್ನ ಮುಖಾವರಣವನ್ನು ತೆಗೆದು, 'ಪ್ರಹರಿ! ನನ್ನನ್ನು ಒಳಗೆ ಬಿಡು, ನಿನಗದರಿಂದ ಆಕ್ಷೇಪ ಬಂದರೆ ತಪ್ಪನ್ನು ನನ್ನ ಮೇಲೆ ಹಾಕು' ಎಂದಳು.

ಪ್ರಹರಿಯು ಆಯುಷೆಯ ಗುರುತನ್ನು ಬಲ್ಲವನಾಗಿರಲಿಲ್ಲ. ದಾಸಿಯು ಮೆಲ್ಲ ಮೆಲ್ಲನೆ ಅವಳ ಪರಿಚಯವನವನಿಗೆ ತಿಳುಪಿದಳು. ಪ್ರಹರಿಯು ಚಮಕಿತನಾಗಿ, ಅಭಿವಾದನವನ್ನು ಮಾಡಿ, 'ದೀನನಾದವನ ಅಪರಾಧವನ್ನು ಮನ್ನಿಸಬೇಕು, ತಮಗೆಲ್ಲಿಗೆ ಹೋಗುವುದಕ್ಕೂ ನಿಷೇಧವಿಲ್ಲ' ಎಂದು ದೈನ್ಯದೊಡನೆ ವಿಜ್ಞಾಪಿಸಿ ಕೊಂಡನು.

ಆಯುಷೆಯು ಕಾರಾಗಾರದೊಳಗೆ ಪ್ರವೇಶಿಸಿದಳು. ಆಗವಳು ನಗುತಿರಲಿಲ್ಲ ವಾದರೂ ಮುಖವು ಸ್ವಭಾವತಃ ಮಂದಹಾಸಯುಕ್ತವಾದುದರಿಂದ ನಗುತಿದ್ದ ಳೆಂದು ಬೋಧೆಯಾಯಿತು. ಕಾರಾಗಾರದ ಕಾಂತಿಯೇ ಬದಲಾಯಿಸಿತು. ಕಾರಾಗಾರವೆಂದು ಬೋಧೆಯಾಗುತ್ತಿರಲಿಲ್ಲ.

ಆಯುಷೆಯು, ರಾಜಪುತ್ರನಿಗೆ ಅಭಿವಾದನವಂಗೈದು, 'ಸಮಾಚಾರ ವೇನು?' ಎಂದು ಕೇಳಿದಳು.

ರಾಜಕುಮಾರನು ಏನೆಂದುತ್ತರವನ್ನು ಕೊಡಬಲ್ಲನು? ಉತ್ತರವನ್ನು ಹೇಳದೆ ಭೂತಲಶಾಯಿನಿಯಾಗಿದ್ದ ತಿಲೋತ್ತಮೆಯನ್ನು ಕೇವಲ ಕೈಬೆರಳಿನಿಂದ ತೋರಿದನು.

ಆಯುಷೆಯು ತಿಲೋತ್ತಮೆಯನ್ನು ನೋಡಿ, 'ಇವಳಾರು?' ಎಂದು ಕೇಳಿದಳು.

ರಾಜಕುಮಾರನು ಸಂಕುಚಿತನಾಗಿ, 'ವೀರೇಂದ್ರಸಿಂಹನ ಕನ್ಯೆ' ಎಂದನು.

ಆಯುಷೆಯು ತಿಲೋತ್ತಮೆಯನ್ನು ತೊಡೆಯಮೇಲೆತ್ತಿ ಮಲಗಿಸಿ ಕೊಂಡಳು. ಮತ್ತಾರಾಗಿದ್ದರೂ ಸಂಕೋಚಪಡುತ್ತಿದ್ದರು; ನೂರೆಂಟನ್ನು ಯೋಚಿಸಿಕೊಳ್ಳುತಿದ್ದರು. ಆಯುಷೆಯು ಹಾಗೆ ಮಾಡದೆ ಕೂಡಲೆ ಮಲಗಿದ್ದವಳ ನ್ನೆತ್ತಿ ತೊಡೆಯಮೇಲೆ ಮಲಗಿಸಿಕೊಂಡಳು.

ಆಯುಷೆಯು ಏನನ್ನು ಮಾಡಿದರೂ ಅದವಳಿಗೆ ಸುಂದರವಾಗಿ ಒಪ್ಪುವುದು. ಆವ ಕಾರ್ಯವನ್ನಾದರೂ ಶ್ಲಾಘಾರ್ಹವಾಗಿ ನಿರ್ವಹಿಸುವಳು. ಜಗತ್ಸಿಂಹನೂ ದಾಸಿಯೂ ಮನದಲ್ಲಿ, 'ಅವಳೆಷ್ಟೊಂದು ಸುಂದರವಾಗಿದ್ದಾಳೆ!' ಎಂದು ಭಾವಿಸಿ ಕೊಂಡರು.

ಆಯುಷೆಯು ದಾಸಿಯ ಕೈಯಲ್ಲಿ ಅತ್ತರು ಷರಬತ್ತು ಮುಂತಾದ ಶೈತ್ಯೋಪಚಾರದ ಸಾಮಗ್ರಿಗಳನ್ನು ತೆಗೆಯಿಸಿಕೊಂಡು ಬಂದಿದ್ದವಳು, ಅದ ನ್ನೆಲ್ಲಾ ಪುನಃಪುನಃ ತಿಲೋತ್ತಮೆಯ ಮೈಮೇಲೆ ತಳಿದಳು. ದಾಸಿಯು

ಬಿಜ್ಜಣವಿಕ್ಕುತ್ತಿದ್ದಳು.* ಈ ಪ್ರಕಾರ ಆಯಷೆಯು ಮಾಡಿದ ಶುಶ್ರೂಷೆಯಿಂದ ತಿಲೋತ್ತಮೆಗೆ ಚೆನ್ನಾಗಿ ಅರುವುಂಟಾಯಿತು.

ತಿಲೋತ್ತಮೆಯು ಕಣ್ತೆರದು ನಾಲ್ಕೂಕಡೆ ನೋಡಿದವಳಿಗೆ ಮೊದಲ ಮಾತುಕಥೆಗಳೆಲ್ಲಾ ನೆನವಿಗೆ ಬಂದವು. ಕೂಡಲೇ ಕೊಟಡಿಯನ್ನು ಬಿಟ್ಟು ಹೊರಗೆ ಹೋಗಬೇಕೆಂಬ ಇಷ್ಟವುಂಟಾಯಿತು. ಆದರೆ ರಾತ್ರಿಯ ಶಾರೀರಕ ಮಾನಸಿಕ ಪರಿಶ್ರಮಗಳಿಂದವಳು ಬಹಳ ದಣಿದಿದ್ದಳು. ಆದುದರಿಂದ ಹೊರಟುಹೋಗಲ ಸಮರ್ಥೆಯಾಗಿ, ಪೂರ್ವಸ್ಮರಣೆಯು ಬರುತ್ತಲೇ ತಲೆಯು ಸುತ್ತಿ ನೆಲದಮೇಲೆ ಕುಳಿತುಕೊಂಡಳು.

ಆಯಷೆಯು ಅವಳ ಕೈಯನ್ನು ಹಿಡಿದುಕೊಂಡು, 'ತಂಗಿ! ವ್ಯಸ್ತಳಾಗ ಬೇಡ ; ನೀನೀಗ ಅತಿದುರ್ಬಲಳಾಗಿರುತ್ತೀ ; ನನ್ನ ಕೊಟಡಿಗೆ ಹೋಗಿ ಅಲಸಿಕೆ ತೀರಿಸಿಕೊಂಡು ಬಳಿಕ ನೀನೆಲ್ಲಿಗೆ ಹೋಗಬೇಕೆಂದರೂ ಅಲ್ಲಿಗೆ ಕಳುಹಿಸುವೆನು' ಎಂದು ಹೇಳಿ ಸಂತವಿಸಿದಳು.

ತಿಲೋತ್ತಮೆಯು ಉತ್ತರವನ್ನು ಕೊಡಲಿಲ್ಲ.

ಆಯಷೆಯು ಪ್ರಹರಿಯ ಮುಖದಿಂದ ಅವನಿಗೆ ತಿಳಿದಿದ್ದರಮಟ್ಟಿಗೆ ಕೇಳಿದ್ದ ಳಾದಕಾರಣ, ತಿಲೋತ್ತಮೆಯ ಮನದಲ್ಲಿ ಸಂದಿಗ ನಿಂತಿರಬೇಕೆಂದು ತಿಳಿದು, 'ನನ್ನಲ್ಲಿ ಅಪನಂಬಿಕೆ ಬೇಡ ; ನಾನು ನಿನ್ನ ವೈರಿಯ ಮಗಳಾದರೂ, ಅನ್ಯೆಯ ಳೆಂದು ತಿಳಿಯಬೇಡ, ನಿಮ್ಮ ವಿಚಾರವಾವದೂ ನನ್ನಿಂದ ಹೊರಪಡದು. ಬೆಳ ಗಾಗುವುದರೊಳಗೆ ದಾಸಿಯನ್ನು ಕೂಡಿಟ್ಟು ನಿನಗಿಷ್ಟವಿದ್ದಲ್ಲಿಗೆ ಕಳುಹುವೆನು. ನನ್ನಮೇಲೆ ಭರವಸವಿಡು' ಎಂದಳು.

ಈ ರೀತಿಯಾಗಿ ಆಯಷೆಯು ಮೃದುವಾಗಿ ಮಧುರ ಸ್ವರದಿಂದ ಹೇಳಿದ ಮಾತನ್ನು ಕೇಳಿ ತಿಲೋತ್ತಮೆಗೆ ಅವಳಲ್ಲಿ ತಿಲಾರ್ಧವೂ ಅಪನಂಬಿಕೆಯುಂಟಾಗ ಲಿಲ್ಲ. ಆಗವಳು ನಡೆಯಲಾರದವಳಾಗಿದ್ದಳಲ್ಲದೆ, ಜಗತ್ಸಿಂಹನ ಬಳಿ ಕುಳಿತಿರ ಲಾರದವಳಾಗಿಯೂ ಇದ್ದಳು. ಆದಕಾರಣ ಆಯಷೆಯ ಮಾತಿಗೊಪ್ಪಿದಳು. ಆಯಷೆಯು, 'ನೀನು ನಡೆಯಲಾರೆ, ದಾಸಿಯ ಕೈಯನ್ನು ಹಿಡಿದುಕೊಂಡು ಹೋಗು' ಎಂದಳು.

ತಿಲೋತ್ತಮೆಯು ದಾಸಿಯ ಭುಜದಮೇಲೆ ಕೈಯಿಟ್ಟುಕೊಂಡು ಅವಳವ ಲಂಬನದಿಂದ ಮೆಲ್ಲಮೆಲ್ಲನೆ ನಡೆದಳು. ಆಯಷೆಯು ತಾನೂ ಹೊರಟುಹೋಗಲು ರಾಜಕುಮಾರನಲ್ಲಿ ಅಪ್ಪಣೆಯನ್ನು ಬೇಡಿದಳು. ರಾಜಕುಮಾರನೇನನ್ನೋ ಹೇಳ ಬೇಕೆಂಬ ಇಷ್ಟವುಳ್ಳವನಂತೆ ಅವಳ ಮುಖವನ್ನು ನೋಡಿದನು. ಆಯಷೆಯು ಆ ಭಾವವನ್ನು ತಿಳಿದು ದಾಸಿಯನ್ನು ಕುರಿತು, 'ತಿಲೋತ್ತಮೆಯನ್ನು ಕರೆದು ಕೊಂಡು ಹೋಗು' ಎಂದಳು.

---

* ಬಿಜ್ಜಣ = ವ್ಯಜನ, ಬೀಸಣಿಗೆ.

ಜಗತ್ಸಿಂಹನು, ಮನಸ್ಸಿನಲ್ಲಿ ತಿಲೋತ್ತಮೆಯನ್ನುದ್ದೇಶಿಸಿ, ತನಗೂ ಅವಳಿಗೂ ಅದೇ ಕಡೆಯ ದರ್ಶನವೆಂದೆಂದುಕೊಂಡು, ಬಳಿಕ ಗಂಭೀರಭಾವದಿಂದ ದೀರ್ಘನಿಶ್ವಾಸವನ್ನು ಬಿಟ್ಟು, ಬಾಗಿಲ ಹೊರಗೆ ಕಣ್ಣಿಗೆ ಕಾಣುವವರೆಗೂ ತಿಲೋತ್ತಮೆಯನ್ನು ನೋಡುತಿದ್ದನು.

ತಿಲೋತ್ತಮೆಯೂ ತನಗದೇ ಕಡೆಯ ದರ್ಶನವೆಂದೆಂದುಕೊಂಡು ಹಿಂದಿರುಗಿ ನೋಡದೆ ಹೊರಟುಹೋದಳು. ಹಿಂದಿರುಗಿ ನೋಡಿದಾಗ ಜಗತ್ಸಿಂಹನವಳ ಕಣ್ಣಿಗೆ ಬೀಳಲಿಲ್ಲ.

ಅಂಗುಲೀಯವಾಹಕನು ತಿಲೋತ್ತಮೆಯ ಬಳಿಗೆ ಬಂದು, ತಾನು ಹೋಗುವುದಾಗಿ ಹೇಳಿದನು.

ತಿಲೋತ್ತಮೆಯು ಉತ್ತರವನ್ನು ಕೊಡಲಿಲ್ಲ. ಸಂಗಡ ಹೋಗುತಿದ್ದ ದಾಸಿಯು ಹೋಗಬಹುದೆಂದಳು.

ಪ್ರಹರಿಯು ಸಾಂಕೇತಿಕವಾದ ಉಂಗುರವನ್ನು ಹಿಂದಕ್ಕೆ ಕೊಡಿರೆಂದು ಬೇಡಿದನು. ತಿಲೋತ್ತಮೆಯು ಉಂಗುರವನ್ನು ತೆಗೆದುಕೊಟ್ಟಳು. ಪ್ರಹರಿಯು ಅದನ್ನು ತೆಗೆದುಕೊಂಡು ಹೊರಟುಹೋದನು.

---

## ಹದಿನೈದನೆಯ ಪರಿಚ್ಛೇದ

### ಮುಕ್ತಕಂಠವಾಗಿ ಹೇಳಿದುದು

ತಿಲೋತ್ತಮೆಯೂ ದಾಸಿಯೂ ಕಾರಾಗಾರದಿಂದ ಹೊರಟುಹೋದ ಬಳಿಕ ಆಯಷೆಯು ಬಂದು ಶಯ್ಯೆಯಮೇಲೆ ಕುಳಿತಳು. ಶಯ್ಯೆಯ ಮೇಲೆ ಮತ್ತೊಬ್ಬ ಬಂದು ಕುಳಿತುಕೊಳ್ಳಲು ಸ್ಥಳವಿರಲಿಲ್ಲವಾದುದರಿಂದ ಜಗತ್ಸಿಂಹನು ಮಂಚಕ್ಕೆ ಸಮೀಪ ಬಂದು ನಿಂತನು.

ಆಯಷೆಯು ತನ್ನ ಕಬರಿಯಮೇಲೆ ಕೈಯಿಟ್ಟವಳು ತಲೆಯಲ್ಲಿ ಮುಡಿದಿದ್ದೊಂದು ಗುಲಾಬಿಹೂವು ಕೈಗೆ ಸಿಕ್ಕಿದುದನ್ನು ತೆಗೆದುಕೊಂಡು ಅದರ ದಳಗಳನ್ನೊಂದೊಂದಾಗಿ ಕೀಳುತ್ತಾ 'ರಾಜಕುಮಾರ! ನಿಮ್ಮ ಭಾವದಿಂದ ನೀವೆನ್ನೊಡನೆ ಮಾತನಾಡಲಿಷ್ಟವುಳ್ಳವರಂತೆ ತೋರಿತು; ನನ್ನಿಂದಾವಕಾರ್ಯವಾಗಬೇಕಾದರೂ ಸಂಕೋಚವಿಲ್ಲದೆ ಅಪ್ಪಣೆ ಕೊಡಿ, ನಿಮಗೆ ಸಲುವಾಗಿ ಆವಕಾರ್ಯವನ್ನು ಮಾಡುವುದಕ್ಕೂ ಪರಮ ಸುಖಿಯಾಗಿರುವೆನು' ಎಂದಳು.

ರಾಜಕುಮಾರನು, 'ನವಾಬಪುತ್ರಿ! ಪ್ರಕೃತ ನನಗಾವಕಾರ್ಯವೂ ಇಲ್ಲ, ಅದಕ್ಕಾಗಿ ನಿನ್ನನ್ನು ನೋಡಬೇಕೆಂದು ಅಭಿಲಾಷಿಯಾಗಿಯೂ ಇರಲಿಲ್ಲ. ನನ್ನೀ ಇರುವಡಿ*ಯಲ್ಲಿ ನಿನ್ನನ್ನು ಪುನಃ ನೋಡಲಾರೆನೆಂದಿದ್ದೆನು. ಇದೇ ಕಡೆಯ

* ಇರುವಡಿ = ಇರುವು, ಸ್ಥಿತಿ

ದರ್ಶನವೆಂದು ತೋರುತ್ತದೆ; ನಿನ್ನಿಂದೆನಗೆ ಆಗಿರುವ ಉಪಕಾರವು ಬರಿಬಾಯಿ ಮಾತಿನಿಂದ ಪ್ರತಿಶೋಧವಾಗದು; ನಿನ್ನುಪಕಾರಕ್ಕೆ ಕಾರ್ಯತಃ ಪ್ರತ್ಯುಪಕಾರ ವನ್ನು ಮಾಡುವೆನೆಂಬ ಭರವಸೆಯೆನಗಿಲ್ಲ. ನನ್ನದೃಷ್ಟದಲ್ಲದು ಬರೆದಿಲ್ಲ; ಈಗೆನ್ನ ದೊಂದೇ ಪ್ರಾರ್ಥನೆ; ಈಗಳೆನ್ನ ದುರ್ದೈವವು ಕಳೆದುಹೋಗಿ ಒಳ್ಳೆಯ ಕಾರ್ಯ ವಾಗಬೇಕಾದರೂ, ನೀನು ಸಂಕೋಚಪಡದೆ ಅಪ್ಪಣೆಮಾಡು, ಪರಸ್ಪರ ಸೋದರ ಸೋದರಿಯರಂತೆ ತಿಳಿದು ಸಂಕೋಚಪಡದೆ ನನ್ನಿಂದೇನಾಗಬೇಕಾದರೂ ಹೇಳು' ಎಂದನು.

ಜಗತ್ಸಿಂಹನ ಸ್ವರವು ಅತ್ಯಂತ ಕಾತರಯುಕ್ತವಾದುದಾಗಿಯೂ ನೈರಾಶ್ಯ ವ್ಯಂಜಕವಾದುದಾಗಿಯೂ ಇದ್ದುದರಿಂದ ಆಯಿಷೆಯೂ ಮನದಲ್ಲಿ ಕ್ಲಿಷ್ಟಳಾಗಿ 'ತಾವು ಅಷ್ಟೊಂದು ನಿರಾಶರಾಗಲೇಕೆ? ಇಂದಿನದ ಅಮಂಗಳವು ನಾಳೆ ಇರದು' ಎಂದಳು.

ಜಗತ್ಸಿಂಹನು, 'ನಾನು ನಿರಾಶನಾಗುವುದಿಲ್ಲ; ಆದರೆ ಮುಂದೆ ನಾನಾವ ಆಶೆಬಡಲೂ ಇಷ್ಟವಿಲ್ಲ; ಈ ಪ್ರಾಣವನ್ನು ತ್ಯಜಿಸಬೇಕೆಂದು ಹೊರತು ಅದನ್ನಿಟ್ಟು ಕೊಂಡಿರಬೇಕೆಂಬ ಇಷ್ಟವಿಲ್ಲ; ಈ ಕಾರಾಗಾರವನ್ನು ಬಿಟ್ಟು ಹೋಗಲೂ ಇಷ್ಟವಿಲ್ಲ' ಎಂದನು.

ರಾಜಕುಮಾರನು ಕರುಣಸ್ವರದಿಂದ ಹೇಳಿದಾ ಮಾತುಗಳನ್ನು ಕೇಳಿ ಆಯಿಷೆಯು ವಿಸ್ಮಿತೆಯಾಗಿ ಹೆಚ್ಚು ಕಾತರೆಯಾದಳು. ಆಗವಳಿಗೆ ತಾನು ನವಾಬನ ಮಗಳೆಂಬ ಭಾವನೆಯು ಇರಲಿಲ್ಲ. ಸಂಕೋಚವು ಹೋಯಿತು, ಸ್ನೇಹಮಯಿಯಾದ ರಮಣಿಯಾಗಿ ರಮಣಿಯಂತೆ ಯತ್ನವಿಶಿಷ್ಟಳಾಗಿ, ತನ್ನ ಕೋಮಲ ಕರಪಲ್ಲವದಿಂದ ರಾಜಪುತ್ರನ ಕೈಯನ್ನು ಹಿಡಿದುಕೊಂಡು, ಅವನನ್ನು ದೃಷ್ಟಿಯೆತ್ತಿ ನೋಡುತ್ತಾ, 'ಕುಮಾರ!' ಎಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದು, ಪುನಃ 'ಕುಮಾರ! ನಿನ್ನ ಮನಸ್ಸಿನಲ್ಲೀ ದಾರುಣ ದುಃಖವೇಕೆ? ನನ್ನನ್ನು ಅನ್ಯಳೆಂದು ತಿಳಿಯಬೇಡ, ನೀನು ಧೈರ್ಯಕೊಟ್ಟರೆ ಹೇಳುತ್ತೇನೆ— ನಿನಗೆ ವೀರೇಂದ್ರಸಿಂಹನ ಕನ್ಯೆಯು....

ಆಯಿಷೆಯ ಮಾತು ಪೂರ್ತಿಯಾಗುವುದರೊಳಗೆ ರಾಜಕುಮಾರನು 'ಆ ಮಾತಿನಿಂದಿನ್ನು ಪ್ರಯೋಜನವಿಲ್ಲ; ಅದು ಭಂಗವಾಗಿ ಹೋಯಿತು' ಎಂದನು.

ಆಯಿಷೆಯು ನೀರವವಾಗಿದ್ದಳು. ಜಗತ್ಸಿಂಹನೂ ನೀರವವಾಗಿದ್ದನು. ಇಬ್ಬರೂ ಅನೇಕ ಕ್ಷಣಗಳತನಕ ನೀರವವಾಗಿದ್ದರು. ಹಿಡಿದಿದ್ದ ಕೈ ಹಾಗೆಯೇ ಇದ್ದಿತು. ಆಯಿಷೆಯು ಮುಖತಗ್ಗಿದವಳಾಗಿದ್ದಳು.

ಜಗತ್ಸಿಂಹನು ಅಕಸ್ಮಾತ್ತು ಚಮತ್ಕೃತನಾದನು. ಅವನ ಕೈಮೇಲೆ ಕವೋಷ್ಣವಾದೊಂದು ಕಂಬನಿಯು ತೊಟಕಿತು! ಜಗತ್ಸಿಂಹನು ಬಗ್ಗಿ ದೃಷ್ಟಿ ಯನ್ನು ಕೆಳಗೆ ಮಾಡಿ ಆಯಿಷೆಯ ಮುಖಪದ್ಮವನ್ನು ದೃಷ್ಟಿಸಿ ನೋಡಿದನು.

ಉಜ್ವಲವಾದವಳ ಗಂಡಸ್ಥಳದಮೇಲೆ ಬಾಷ್ಪವಾರಿಯು ಧಾರೆ ಧಾರೆಯಾಗಿ ಹರಿಯುತಿದ್ದುದನ್ನು ಕಂಡನು.

ರಾಜಕುಮಾರನು ಅಚ್ಚರಿಗೊಂಡು, 'ಇದೇನು, ಆಯುಷೆ! ಅಳುತ್ತೀ?' ಎಂದನು.

ಆಯುಷೆಯು ಏನೊಂದುತ್ತರವನ್ನೂ ಹೇಳದೆ ಹಿಡಿದಿದ್ದವನ ಕೈಯನ್ನು ಮೆಲ್ಲಗೆಳೆದು ಮಂಚದಮೇಲೆ ತನ್ನ ಪಕ್ಕದಲ್ಲವನನ್ನು ಕುಳ್ಳಿರಿಸಿಕೊಂಡಳು. ಅವನು ಕುಳಿತ ಬಳಿಕ, ಪುನಃ ಅವನ ಕೈಯನ್ನು ಹಿಡಿದುಕೊಂಡು, 'ಯುವರಾಜ! ಇಂದು ನಿನ್ನಿಂದೀಪರಿ ಬೀಳ್ಕೊಳ್ಳುವೆನೆಂದು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ; ಎಷ್ಟೊಂದು ಕಷ್ಟವನ್ನು ಸಹಿಸಬಲ್ಲೆನಾದರೂ ನಿನ್ನನ್ನು ಸೆರೆಯಲ್ಲಿ ಇಷ್ಟು ಕಷ್ಟದಲ್ಲೊಬ್ಬನನ್ನೇ ಬಿಟ್ಟು ಹೋಗಲಸಮರ್ಥೆಯಾಗಿದ್ದೇನೆ; ಜಗತ್ಸಿಂಹ! ಈಗೆನ್ನೊಡನೆ ಬಂದುಬಿಡು; ಅಶ್ವಾಲಯದಲ್ಲೊಂದು ಅಶ್ವವನ್ನು ತೆಗೆದು ಕೊಡುವೆನು; ಇಂದಿನ ರಾತ್ರಿಯೇ ನಿನ್ನ ಪಿತೃಸನ್ನಿಧಾನಕ್ಕೆ ಹೊರಟುಹೋಗು!' ಎಂದಳು.

ಅದೇ ಮುಹೂರ್ತದಲ್ಲಿ ಇಷ್ಟದೇವಿಯಾದ ಭವಾನಿಯು ಸಶರೀರೆಯಾಗಿ ಬಂದು ನಿಂತು ವರಪ್ರದೆಯಾಗಿದ್ದರೂ ರಾಜಪುತ್ರನು ಅಷ್ಟೊಂದು ಚಮತ್ಕೃತ ನಾಗುತ್ತಿರಲಿಲ್ಲ. ರಾಜಕುಮಾರನಿಗೆ ಆಶ್ಚರ್ಯದಿಂದ ವಾಙ್ನಿಷ್ಪತ್ತಿಯು ತಪ್ಪಿ ಉತ್ತರವನ್ನು ಕೊಡಲಾರದೆ ಸುಮ್ಮನಿದ್ದನು.

ಆಯುಷೆಯು ಪುನಃ 'ಜಗತ್ಸಿಂಹ! ರಾಜಕುಮಾರ! ಬಂದುಬಿಡು' ಎಂದಳು.

ಜಗತ್ಸಿಂಹನು ಸ್ವಲ್ಪ ಹೊತ್ತಾದ ಬಳಿಕ, 'ಆಯುಷೆ! ನೀನೆನ್ನನ್ನು ಸೆರೆಯಿಂದ ಬಿಡಿಸಬಲ್ಲೆಯಾ?' ಎಂದು ಕೇಳಿದನು.

ಆಯುಷೆ—ಈ ಮುಹೂರ್ತದಲ್ಲಿ.

ರಾಜಕುಮಾರ—ನಿಮ್ಮ ತಂದೆಗೆ ತಿಳಿಯದಹಾಗೆ?

ಆಯುಷೆ—ಆ ವಿಚಾರವಾಗಿ ಚಿಂತಿಸಬೇಡ. ನೀನು ನಿನ್ನ ಶಿಬಿರಕ್ಕೆ ಹೋಗಿ ತಲ್ಪಿದ ಬಳಿಕ ಅವನಿಗೆ ವರ್ತಮಾನವನ್ನು ಕೊಡುವೆನು.

ರಾಜಕುಮಾರ—ಪ್ರಹರಿಗಳು ನನ್ನನ್ನು ಹೊರಗೆ ಬಿಡುವರೆ?

ಆಯುಷೆಯು ತನ್ನ ಕಂಠದಿಂದೊಂದು ರತ್ನಕಂಠಿಯನ್ನು ತೆಗೆದು ಕೈಯಲ್ಲಿ ಹಿಡಿದು ತೋರುತ್ತ, 'ಈ ಪುರಸ್ಕಾರದ ಲೋಭದಿಂದ ಪ್ರಹರಿಯು ಮಾರ್ಗವನ್ನು ಬಿಡುವನು' ಎಂದಳು.

ರಾಜಕುಮಾರ—ಈ ಸಂಗತಿಯು ಪ್ರಕಾಶಗೊಂಡರೆ ನಿನ್ನ ತಂದೆಯ ಬಳಿ ನೀನು ನಿಷ್ಠುರಕ್ಕೊಳಗಾಗಿ ಕಷ್ಟಕ್ಕೆ ಗುರಿಯಾಗುವೆ.

ಆಯುಷೆ—ಅದರಿಂದ ಹಾನಿಯೇನು?

ರಾಜಕುಮಾರ—ಅಯುಷೆ ! ನಾನು ಹೋಗುವುದಿಲ್ಲ.

ಅಯುಷೆಯ ಮುಖವು ಏಶುಷ್ಕವಾಯಿತು. ಅವಳು ಕ್ಷುಣ್ಣಳಾಗಿ, 'ಹೋಗುವುದಿಲ್ಲವೇಕೆ ?' ಎಂದಳು.

ರಾಜಕುಮಾರ—ಪ್ರಾಣದಾನಪರ್ಯಂತವೂ ನಿನ್ನಿಂದುಪಕೃತನಾಗಿದ್ದೇನೆ ; ನಿನಗೆ ಕಷ್ಟದಾಯಕವಾದ ಕಾರ್ಯವನ್ನೆಂದಿಗೂ ಮಾಡೆನು.

ಅಯುಷೆಯು ಪ್ರಾಯಃ ರುದ್ಧಕಂಠೆಯಾಗಿ, 'ನಿಜವಾಗಿ ಹೋಗುವುದಿಲ್ಲವೆ ?' ಎಂದು ಕೇಳಿದಳು.

ರಾಜಕುಮಾರ—ನೀನೊಬ್ಬಳೇ ಹೋಗು.

ಅಯುಷೆಯು ಪುನಃ ನೀರವವಾಗಿದ್ದವಳ ಕಣ್ಣುಗಳಿಂದ ಅನರ್ಗಳವಾಗಿ ವಾರಿಧಾರೆಯು ಹೊರಟಿತು. ಕಷ್ಟದಿಂದ ಅಶ್ರುಸಂವರಣ ಮಾಡಲೆತ್ನಿಸಿದಳು.

ರಾಜಪುತ್ರನು ಅಯುಷೆಯ ನಿಶ್ಶಬ್ದವಾದ ರೋದನವನ್ನು ಕಂಡು, 'ಅಯುಷೆ! ರೋದನಮಾಡುವುದೇಕೆ?' ಎಂದು ಕೇಳಿದನು.

ಅಯುಷೆಯು ಮಾತನಾಡಲಿಲ್ಲ. ರಾಜಕುಮಾರನು ಪುನಃ 'ಅಯುಷೆ ! ನನ್ನ ಮಾತನ್ನು ಕೇಳು, ನಿನ್ನ ರೋದನಕ್ಕೆ ಕಾರಣವನ್ನು ಪ್ರಕಾಶಮಾಡಬಹುದಾಗಿದ್ದರೆ, ನನಗದನ್ನು ಹೇಳು ; ನಿನ್ನ ನೀರವ ರೋದನವು ನಿವಾರಣವಾಗಲೆನ್ನ ಪ್ರಾಣವನ್ನು ಕೊಡಬೇಕಾದರೂ ಹಿಂಜರಿಯೆನು ; ನಾನೀ ಕಾರಾಗಾರವನ್ನು ಬಿಡಲೊಪ್ಪದ ಮಾತ್ರಕ್ಕೆ ಅಯುಷೆಯ ಕಣ್ಣುಗಳಲ್ಲಿ ನೀರು ತುಂಬದು ; ನಿಮ್ಮ ತಂದೆಯ ಕಾರಾಗಾರದಲ್ಲಿ ನನ್ನಹಾಗೆ ಅನೇಕ ಬಂದಿಗಳು ಕಷ್ಟಪಡುತಿರುವರು' ಎಂದು ಹೇಳಿದನು.

ಅಯುಷೆಯು ಉತ್ತರವನ್ನು ಕೊಡದೆ ತನ್ನ ಸೆರಗಿನಿಂದ ಕಣ್ಣೊರಸಿಕೊಂಡು ಅನಂತರ, 'ರಾಜಪುತ್ರ! ನಾನಿನ್ನು ಅಳುವುದಿಲ್ಲ' ಎಂದಳು.

ರಾಜಪುತ್ರನು ತನ್ನ ಪ್ರಶ್ನೆಗೆ ಸರಿಯಾದ ಉತ್ತರವು ಬಾರದುದಕ್ಕೆ ಸಲುವಾಗಿ ಹಳವಳಿಸಿದನು. ಇಬ್ಬರೂ ನೀರವವಾಗಿ ಅಧೋವದನರಾಗಿದ್ದರು.

ಆ ಸಮಯದಲ್ಲಿ ಚಿಕ್ಕಮನೆಯ ಗೋಡೆಯಮೇಲೆ ಮತ್ತೊಬ್ಬ ವ್ಯಕ್ತಿಯ ಛಾಯೆಯು ಬಿದ್ದಿತು. ಅದನ್ನವರಾರೂ ನೋಡಲಿಲ್ಲ ; ಆ ಮನುಷ್ಯನು ಅವರಿಬ್ಬರೆದುರಿಗೆ ಬಂದು ನಿಂತನು. ಆದರೂ ಅವರು ತಲೆಯೆತ್ತಿ ನೋಡಲಿಲ್ಲ. ಆ ವ್ಯಕ್ತಿಯು ಕ್ಷಣಕಾಲ ಸ್ತಂಭೀಭೂತನಾಗಿ ನಿಂತಿದ್ದು, ಬಳಿಕ ಮಾಮುಸಕದಿಂ* ಕಂಪಿತವಾದ ಸ್ವರದಿಂದ, 'ಕುಮಾರಿ ! ಇದು ಒಳ್ಳೆಯ ಕೆಲಸ !' ಎಂದನು.

ಇಬ್ಬರೂ ಮಿಂಟ್ಟಬಿದ್ದು † ತಲೆಯೆತ್ತಿ ನೋಡಿದರು—ಉಸ್ಮಾನನಾಗಿದ್ದನು ! ಉಸ್ಮಾನನು ತನ್ನ ಅನುಚರನಾದ ಉಂಗುರವ ತಂದವನಿಂದ ಸಂಗತಿಯನೆಲ್ಲಾ

* ಮಾಮುಸಕದಿಂ=ಕ್ಷೋಭದಿಂದ ಅಥವಾ ಕೋಪದಿಂದ.

† ಮಿಂಟ್ಟಬಿದ್ದು=ಬೆಚ್ಚಿ ಬಿದ್ದು.

ತಿಳಿದು, ಅಯುಷೆಯನ್ನು ಅನುಸಂಧಾನಮಾಡಬಂದಿದ್ದನು. ರಾಜಪುತ್ರನು ಉಸ್ಮಾನನನ್ನಾ ಸ್ಥಳದಲ್ಲಿ ನೋಡಿ, ಅಯುಷೆಗೆ ಸಲುವಾಗಿ, ಅವಳು ಉಸ್ಮಾನನಿಂದಲೂ ಕತಲೂಖಾನನಿಂದಲೂ ತಿರಸ್ಕೃತಳಾಗಿ ಅವಮಾನಕ್ಕೆ ಗುರಿಯಾಗುವಳೆಂದು ಭೀತಿಗೊಂಡನು. ಉಸ್ಮಾನನು ಕ್ರೋಧದೊಡನೆ ಹೇಳಿದ ವ್ಯಂಗೋಕ್ತಿಯಿಂದ ಹಾಗಾಗಬಹುದೆಂದು ತೋರಿತು. ಅವನಾ ವ್ಯಂಗೋಕ್ತಿಯನ್ನು ಕೇಳಿ ಅಯುಷೆಯು ಉಸ್ಮಾನನ ಅಭಿಪ್ರಾಯವನ್ನು ತಿಳಿದುಕೊಂಡಳು. ಮುಹೂರ್ತಮಾತ್ರ ಅವಳ ಮುಖವು ರಕ್ತವರ್ಣವಾಗಿದ್ದಿತು ; ಆದರಾವ ಅಧೈರ್ಯದ ಚಿಹ್ನೆಗಳೂ ಕಾಣಿಸಲಿಲ್ಲ. ಧೈರ್ಯಭಾವದಿಂದವಳು, 'ಉಸ್ಮಾನ್ ! ಆವದನ್ನು ಕಂಡು ಒಳ್ಳೆಯ ಕೆಲಸವೆಂದು ಹೇಳಿದೆ ?' ಎಂದು ಕೇಳಿದಳು.

ಉಸ್ಮಾನನು ಮೊದಲಿನಂತೆ ಮುಖಭಂಗಿಯನ್ನು ತಾಳಿ, 'ನಿಶೀಥಕಾಲದಲ್ಲಿ ಒಂಟರಿಗಿತ್ತಿಯಾಗಿ ಬಂದು ಬಂದಿಯ ಸಹವಾಸಮಾಡುವುದು ನವಾಬರ ಪುತ್ರಿಗೆ ಉತ್ತಮವಾದ ಕೆಲಸ ! ಹಾಗೂ ಕಾರಾಗಾರದ ನಿಯಮವನುಲ್ಲಂಘಿಸಿ ಒಬ್ಬ ಬಂದಿಗೆ ಸಲುವಾಗಿ ಕಾರಾಗಾರವನ್ನು ಪ್ರವೇಶಿಸುವುದು ನವಾಬರ ಪುತ್ರಿಗೆ ಮತ್ತೂ ಉತ್ತಮವಾದ ಕೆಲಸ !!' ಎಂದನು.

ಅಯುಷೆಯ ಪವಿತ್ರವಾದ ಮನಸ್ಸಿಗೆ ಅವನಾ ತಿರಸ್ಕಾರವು ಸಹನಾತೀತವಾಯಿತು. ಅವಳು ಉಸ್ಮಾನನನ್ನು ದೃಷ್ಟಿಸಿ ನೋಡಿ, ಹಿಂದವನೆಂದೂ ಕೇಳದವಳ ಕಂಠದಲ್ಲಿ, ಬಿರುವೆಲರು ಬೀಸಿದಂತೆ, ಧಿಕ್ಕರಿಸುವ ಧ್ವನಿಯಿಂದ ಉತ್ತರವನ್ನು ಕೊಟ್ಟಳದು ಹೇಗೆಂದರೆ:—'ಈ ನಿಶೀಥಕಾಲದಲ್ಲಿ, ಏಕಾಕಿನಿಯಾಗಿ, ನಿಯಮವನುಲ್ಲಂಘಿಸಿ ಕಾರಾಗಾರಕ್ಕೆ ಪ್ರವೇಶಿಸಿ ಈ ಬಂದಿಯ ಸಂಗಡ ಮಾತನಾಡಬೇಕಾಗಿದ್ದುದು ನನಗಿಷ್ಟವಾಗಿದ್ದಿತು ; ನಾನು ಮಾಡಿದ ಕೆಲಸವು ಉತ್ತಮವಾದುದೋ ಅಧಮವಾದುದೋ ನೀನದನ್ನು ವಿಚಾರಿಸಬೇಕಾದ ಆವಶ್ಯಕವಿಲ್ಲ' ಎಂದಳು.

ಉಸ್ಮಾನನು ವಿಸ್ಮಿತನಾಗಿ, ಹಾಗೂ ಅಧಿಕ ಕ್ರೋಧಾನ್ವಿತನಾಗಿ, 'ಆವಶ್ಯಕವುಂಟೋ ಇಲ್ಲವೋ ಎಂಬುದನ್ನು ನಾಳೆ ಪ್ರಾತಃಕಾಲ ನವಾಬರ ಮುಖದಿಂದ ಕೇಳುವೆ' ಎಂದನು.

ಅಯುಷೆಯು ಮೊದಲಿನಂತೆ ದರ್ಪದಿಂದ, 'ತಂದೆಯು ಕೇಳಿದಾಗವನಿಗೆ ಉತ್ತರವನ್ನು ಕೊಡುವೆನು ; ನಿನಗೀ ಹವ್ಯಾಸವು ಆವಶ್ಯಕವಿಲ್ಲ' ಎಂದಳು.

ಉಸ್ಮಾನನು ಪೂರ್ವದಂತೆಯೇ ವ್ಯಂಗೋಕ್ತಿಯಾಗಿ, 'ನಾನೇ ಚರ್ಚಿಸಿದರೋ' ಎಂದನು.

ಅಯುಷೆಯು ಝುಡಿತಿಯಾಗಿ ಎದ್ದು ನಿಂತು ಸ್ವಲ್ಪ ಹೊತ್ತು ಉಸ್ಮಾನನನ್ನು ಕುರಿತು ನೋಡಿದಳು. ವಿಶಾಲವಾದವಳ ಲೋಚನಗಳು ಹೆಚ್ಚು ವರ್ಧಿತಾಯತನವಾಗಿ ಕಂಡವು ; ಮುಖಪದ್ಮವು ಪ್ರಸ್ಫುಟಿತವಾಯಿತು ; ಶಿರೋದೇಶವು ಭ್ರಮರ

ಕೃಷ್ಣವರ್ಣವುಳ್ಳ ಅಳಕಾವಳಿಗಳೊಡನೆ ಒತ್ತಟ್ಟು ಸ್ವಲ್ಪ ಓರೆಯಾಯಿತು; ವಕ್ಷಸ್ಥಳವು ತರಂಗಾಂದೋಳಿತ ನಿಬಿಡಶೈವಾಲಯುಕ್ತ ಜಲದಂತೆ ಉತ್ಕಂಪಿತವಾಗಲಾರಂಭಿಸಿತು. ಆಗವಳು ಅತಿ ಪರಿಷ್ಕಾರ ಸ್ವರದಿಂದ ಮುಕ್ತಕಂಠವಾಗಿ, 'ಉಸ್ಮಾನ್, ನೀನು ಚರ್ಚಿಸುವುದಾದರೆ ನನ್ನುತ್ತರವನ್ನು ಕೇಳು; ಮಾಜದೆ ಹೇಳುವೆನು :—ಈ ಬಂದಿಯು ನನ್ನ ಪ್ರಾಣೇಶ್ವರನು !!!' ಎಂದಳು.

ಆ ಮುಹೂರ್ತದಲ್ಲಿ ಆ ಚಿಕ್ಕಮನೆಯಲ್ಲಿ ಸಿಡಿಲಬ್ಬರಣೆಯಾಗಿದ್ದರೂ ಆ ರಾಜಪೂತನಾಗಲಿ ಆ ಪಠಾಣನಾಗಲಿ ಆಗವರು ಚಮಕಿತರಾದಷ್ಟು ಚಮಕಿತರಾಗುತ್ತಿರಲಿಲ್ಲ. ರಾಜಪುತ್ರನ ಮನಸ್ಸಿನಲ್ಲಿ ಅಂಧಕಾರದ ಮಧ್ಯದಲ್ಲಿ ದೀಪವು ಪ್ರಜ್ವಲಿಸಿದಂತಾಯಿತು. ಆಯುಷೆಯ ನೀರವ ರೋದನಕ್ಕೆ ಕಾರಣವು ಆಗವನಿಗೆ ಸ್ಫುರಿಸಿತು. ಉಸ್ಮಾನನು ಅಂದಿಗಂದಿಗೆ ಘುಣಾಕ್ಷರನ್ಯಾಯವಾಗಿ ಆ ಸಂಶಯವುಳ್ಳವನಾಗಿದ್ದನು. ಆದುದರಿಂದವನು ಆಯುಷೆಯನ್ನಾರೀತಿ ತಿರಸ್ಕರಿಸಿದನು. ಆದರೆ ಆಯುಷೆಯು ಮುಕ್ತಕಂಠೆಯಾಗಿ ತನ್ನಿದಿರಿದ್ದಾ ಮಾತುಗಳನ್ನು ಹೇಳುವವಳೆಂದವನಿಗೆ ಸ್ವಪ್ನದಲ್ಲಿಯೂ ಗೋಚರವಿರಲಿಲ್ಲ. ಉಸ್ಮಾನನು ನಿರುತ್ತರನಾಗಿದ್ದುಬಿಟ್ಟನು. ಆಯುಷೆಯು ಪುನಃ ಹೇಳತೊಡಗಿದಳು :—'ಕೇಳು, ಉಸ್ಮಾನ್! ಪುನಃ ಹೇಳುತ್ತೇನೆ, ಈ ಬಂದಿಯು ನನ್ನ ಪ್ರಾಣೇಶ್ವರನು; ಯಾವಜ್ಜೀವವೂ ಅನ್ಯನಾರೇ ಆಗಲಿ ನನ್ನೀ ಹೃದಯದಲ್ಲ ಸ್ಥಾನವನ್ನು ಹೊಂದನು; ನಾಳೆ ಒಂದುವೇಳೆ ವಧ್ಯಭೂಮಿಯು ಇವನ ರಕ್ತದಿಂದ ಆರ್ದ್ರವಾದರೂ—ಹೇಳುತ ಹೇಳುತ ಆಯುಷೆಯು ನಡುಗಿದಳು—ನನ್ನೀ ಹೃದಯಮಂದಿರದಲ್ಲಿ ಇವನ ಮೂರ್ತಿಯನ್ನು ಪ್ರತಿಷ್ಠೆ ಮಾಡಿ ಅಂತ್ಯಕಾಲ ಪರ್ಯಂತವೂ ಆರಾಧಿಸುವೆನು; ಈ ನಿಮಿಷ ಪರಸ್ಪರ ನಮ್ಮಿಬ್ಬರಿಗಿದು ಕಡೆಯ ದರ್ಶನವಾಗುವುದಾದರೂ, ನಾಳೆ ಇವನು ಮುಕ್ತನಾಗಿ ನೂರಾರು ಮಹಿಳೆಯರಿಂದೊಡಗೂಡಿ ಆಯುಷೆಯ ಹೆಸರನ್ನು ಧಿಕ್ಕಾರಮಾಡಿದರೂ ನಾನವನ ಪ್ರೇಮಾಕಾಂಕ್ಷಿಣಿಯಾದ ದಾಸಿಯಾಗಿರುವೆನು; ಮತ್ತೂ ಕೇಳು, ಹೇಳುತ್ತೇನೆ, ಏತಕ್ಷಣ ಪರ್ಯಂತ ಏಕಾಕಿನಿಯಾಗಿ ಆವ ಮಾತನಾಡುತಿದ್ದೆನೆಂದು ಯೋಚಿಸುತ್ತಿ? ಇದುವರೆಗೆ ಹೇಳುತಿದ್ದೇನೆಂದರೆ—ನಾನು ದ್ವಾರಪಾಲಕನನ್ನು ಸವಿಮಾತುಗಳಿಂದಾಗಲಿ ದ್ರವ್ಯದಿಂದಾಗಲಿ ವಶಮಾಡಿಕೊಳ್ಳುವೆನೆಂತಲೂ, ತಂದೆಯ ಅಶ್ವಾಲಯದಿಂದೊಂದು ಅಶ್ವವನ್ನು ತೆಗೆದುಕೊಡುವೆನೆಂತಲೂ ಹೇಳಿ, ಬಂದಿಯನ್ನು ಈಗಲೇ ಅವನ ಪಿತೃಶಿಬಿರಕ್ಕೆ ಹೊರಟುಹೋಗೆಂದು ಹೇಳಿದೆನು; ಆದರೆ ಬಂದಿಯೇ ಹೋಗಲೊಪ್ಪಲಿಲ್ಲ; ಅವನೊಪ್ಪಿದ್ದರೆ ಇಷ್ಟು ಹೊತ್ತಿಗೆ ನೀನವನ ನಖಾಗ್ರವನ್ನೂ ನೋಡುತ್ತಿರಲಿಲ್ಲ' ಎಂದು ಹೇಳಿದಳು.

ಆಯುಷೆಯು ಕಣ್ಣೀರೊರಸಿಕೊಂಡು ಕೆಲವು ನಿಮಿಷಗಳು ಮೌನವಾಗಿದ್ದಳು. ಅನಂತರ ಬೇರೇ ಬದಲಿಸಿದ ಮಟ್ಟಿನ ಸ್ವರದಿಂದ, 'ಉಸ್ಮಾನ್! ನಾನು ಈ ಮಾತುಗಳನ್ನು ಹೇಳಿ ನಿನಗೆ ಕ್ಲೇಶವನ್ನುಂಟುಮಾಡಿದೆನು; ಅಪರಾಧವನ್ನು

ಕ್ಷಮಿಸು ; ನಾವು ಪರಸ್ಪರ ಸ್ನೇಹಿತರಾಗಿದ್ದೇವೆ; ಈಗ ನಾನು ಮಾಡಿದುದು ಅನುಚಿತವಾಗಿ ಕಾಣುವುದು ; ಆದರೆ ನೀನೆನ್ನನ್ನು ಅವಿಶ್ವಾಸಿಸಿಯೆಂದು ತಿಳಿದಿದ್ದೆ; ಆಯುಷೆಯು ಮತ್ತಾವ ಅಪರಾಧವನ್ನು ಮಾಡಿದರೂ ಅವಳೆಂದೂ ಅವಿಶ್ವಾಸಿನಿಯಾಗಳು ; ಆಯುಷೆಯು ಆವ ಕೆಲಸವನ್ನು ಮಾಡಿದರೂ ಅದನ್ನು ಮುಕ್ತಕಂಠವಾಗಿ ಹೇಳಿಬಿಡುವಳು ; ಈಗ ನಿನ್ನೆದುರಿಗೆ ಹೇಳಿದ್ದೇನೆ, ಅವಶ್ಯಬಿದ್ದರೆ ನಾಳೆ ತಂದೆಗೂ ಹೇಳುವೆನು ' ಎಂದು ಹೇಳಿ ಬಳಿಕ ಜಗತ್ಸಿಂಹನ ಕಡೆಗೆ ತಿರುಗಿ,—

ರಾಜಪುತ್ರ! ನೀನೂ ನನ್ನಪರಾಧವನ್ನು ಕ್ಷಮಿಸು. ಇಂದು ಉಸ್ಮಾನನೆನಗೆ ಮನಃಕ್ಲೇಶವನ್ನುಂಟುಮಾಡದಿದ್ದರೆ ನನ್ನೀ ದಗ್ಧಹೃದಯದ ತಾಪವು ನಿನಗಾವಾಗಲೂ ಗೋಚರವಾಗುತ್ತಿರಲಿಲ್ಲ,—ಪ್ರಾಣಿ ಮಾತ್ರಕ್ಕೂ ಗೋಚರವಾಗುತ್ತಿರಲಿಲ್ಲ' ಎಂದಳು.

ರಾಜಕುಮಾರನು ನಿಶ್ಶಬ್ದವಾಗಿ ನಿಂತಿದ್ದನು. ಅವನ ಅಂತಃಕರಣವು ಸಂತಾಪದಿಂದ ಸುಡುತಿದ್ದಿತು.

ಉಸ್ಮಾನನೂ ಮಾತಿಲ್ಲದೆ ನಿಂತಿದ್ದನು. ಆಯುಷೆಯು ಪುನಃ, 'ಉಸ್ಮಾನ್ ? ಪುನಃ ಹೇಳುತ್ತೇನೆ, ಅಪರಾಧವನ್ನು ಕ್ಷಮಿಸು, ನಾನು ಮೊದಲಿನಂತೆ ನಿನ್ನ ಸ್ನೇಹಪರಾಯಣೆಯಾದ ಭಗಿನಿ : ಭಗಿನಿಯೆಂದು ನೀನು ಮೊದಲಿನಂತೆ ಪ್ರೀತಿಸುವುದಿಲ್ಲ, ನನ್ನದೃಷ್ಟದೋಷದಿಂದ ಸಂತಾಪ ಸಾಗರದಲ್ಲಿ ಮುಣುಗಿದ್ದೇನೆ, ಭ್ರಾತೃಸ್ನೇಹವನ್ನು ತೊರೆದು ನನ್ನನ್ನು ಅತಲ ಪಾತಾಳಗಳಲ್ಲಿ ಮುಣುಗಿಸಬೇಡ' ಎಂದಳು.

ಹೀಗೆಂದು ಹೇಳಿ, ಸುಂದರಿಯು ದಾಸಿಯನ್ನು ನಿರೀಕ್ಷಿಸದೆ ಕೊಟಡಿಯಿಂದೊಬ್ಬಳೇ ಹೊರಗೆ ಹೊರಟಳು. ಉಸ್ಮಾನನು ವಿಹ್ವಲನಾಗಿ ಮಾತಿಲ್ಲದೆ ನಿಂತಿದ್ದವನು, ಸ್ವಲ್ಪ ಹೊತ್ತಾದ ಬಳಿಕ ತನ್ನ ಮನೆಗೆ ಹೊರಟುಹೋದನು.

---

## ಹದಿನಾರನೆಯ ಪರಿಚ್ಛೇದ

## ದಾಸಿಯು ತನ್ನ ಚರಣದಲ್ಲಿದ್ದಾಳೆ

ಅಂದಿನ ರಾತ್ರಿ ಕತಲೂಖಾನನ ವಿಲಾಸಗೃಹದಲ್ಲಿ ಇಂದ್ರಿಯಗಳಿಗೆ ಅಪರಿಮಿತಾನಂದವನ್ನುಂಟುಮಾಡುವ ಬಹುವಿಧ ನೃತ್ಯ ಗೀತಾದಿಗಳೆಡೆಬಿಡದೆ ನಡೆಯುತಿದ್ದುವು. ಅಲ್ಲಿ ನೆರೆದಿದ್ದವರು ಅವನ ವಿಲಾಸಿನಿಯರ ಹೊರತು ಬೇರೆ ಪಾರಿಷದ್ವರ್ಗದವರಾರೂ ಇರಲಿಲ್ಲ. ಜನ್ಮದಿನಗಳಲ್ಲಿ ಮೊಗಲ ಸಮ್ರಾಟರಂತೆ ಕತಲೂಖಾನನು ಪಾರಿಷದ್ವರ್ಗದಿಂದೊಡಗೂಡಿ ಆಮೋದಪರಾಯಣನಾಗಿರುವ ಆಚರಣೆಯುಳ್ಳವನಾಗಿರಲಿಲ್ಲ. ಅವನ ಮನಸ್ಸು ಕೇವಲ ಆತ್ಮಸುಖದಲ್ಲಿ ನಿರತವಾಗಿದ್ದಿತು. ಅವನು ಸ್ವಸಂತೋಷಪರಾಯಣನಾಗಿ ಇಂದ್ರಿಯ ತೃಪ್ತಿಯಲ್ಲಿ ಅಭಿ

ಲಾಷಿಯಾಗಿದ್ದನು. ಅಂದಿನ ರಾತ್ರಿ ಅವನೊಬ್ಬನೇ ಅನೇಕರಾದ ವಿಲಾಸಿನಿಯರಿಂದ ಪರಿವೇಷ್ಟಿತನಾಗಿ ಅವರ ನೃತ್ಯಗೀತ ಕೌತುಕಗಳಲ್ಲಿ ಮಗ್ನನಾಗಿ ಮತ್ತನಾಗಿದ್ದನು. ಖೊಜ್ಜೆಗಳ ಹೊರತು ಅನ್ಯ ಪುರುಷರಿಗೆ ಅಲ್ಲಿ ಪ್ರವೇಶವಿಲ್ಲ. ಅಲ್ಲಿ ನೆರೆದಿದ್ದ ರಮಣಿಯರಲ್ಲಿ ಕೆಲವರು ನೃತ್ಯಮಾಡುತಿದ್ದರು; ಕೆಲವರು ಗಾಯನಮಾಡುತಿದ್ದರು; ಕೆಲವರು ವಾದ್ಯಗಳನ್ನು ನುಡಿಸುತಿದ್ದರು; ಉಳಿದವರು ಕತಲೂಖಾನನ ಸುತ್ತು ಕುಳಿತು ಕೇಳುತಿದ್ದರು.

ಇಂದ್ರಿಯಗಳನ್ನು ಮೋಹಗೊಳಿಸುವ ಸಾಮಗ್ರಿಗಳೆಲ್ಲವೂ ಅಲ್ಲಿದ್ದುವು. ವಿಲಾಸಗೃಹದೊಳಗೆ ಪ್ರವೇಶಮಾತ್ರದಿಂದ ನಿರಂತರ ತುಂತುರೊಗೆಯುತಿದ್ದ ಗಂಧವಾರಿಯು ತುಂತುರುವಣಿಗಳ ಸ್ನಿಗ್ಧವಾದ ಆಘ್ರಾಣದಿಂದ ಆಪಾದಮಸ್ತಕವೂ ತಣ್ಣಗಾಗುವುದು; ಅಗಣಿತವಾದ ರಜಿತ, ದಂತ, ಸ್ಫಟಿಕದೀಪಗಳ ತೀವ್ರೋಜ್ವಲ ಜ್ವಾಲೆಯು ಕಣ್ಣುಗಳನ್ನು ಕುರುಡುಮಾಡುವುದು! ಅಪರಿಮಿತ ಪುಷ್ಪರಾಶಿಗಳು ಮಾಲಾಕಾರವಾಗಿ ಕೆಲವು ಸ್ಥಳಗಳಲ್ಲಿ, ಸ್ತೂಪಾಕಾರವಾಗಿ ಕೆಲವು ಸ್ಥಳಗಳಲ್ಲಿ, ಸ್ತಬಕಾಕಾರವಾಗಿ ಕೆಲವು ಸ್ಥಳಗಳಲ್ಲಿ, ಹಾಗೂ ರಮಣಿಯರ ಕೇಶಪಾಶದಲ್ಲಿಯೂ ಕಂಠದಲ್ಲಿಯೂ ಪ್ರಕಾಶಿಸುತಿದ್ದುವು. ಕೆಲವು ರಮಣಿಯರು ಪುಷ್ಪವ್ಯಜನಧಾರಿಗಳಾಗಿಯೂ, ಕೆಲವರು ಪುಷ್ಪಾಭರಣಧಾರಿಗಳಾಗಿಯೂ—ಇದ್ದರಲ್ಲದೆ ಬೇರೆ ಅಂಗನೆಯರು ಪುಷ್ಪಾಂಜಲಿಯುಳ್ಳವರಾಗಿ ಪರಸ್ಪರ ಪುಷ್ಪಗಳನ್ನೆರಚಾಡುತಿದ್ದರು. ಪುಷ್ಪಸೌರಭ, ಸುರಭಿವಾರಿ ಸೌರಭ, ಸುಗಂಧ ದೀಪಗಳ ಸೌರಭ, ಗಂಧಮಾರ್ಜಿತ ವಿಲಾಸಿನಿಯರ ಅಂಗಸೌರಭ—ಎಲ್ಲೆಲ್ಲಿಯೂ ಸೌರಭಮಯವಾಗಿದ್ದಿತು. ದೀಪಗಳ ಕಾಂತಿ, ಪುಷ್ಪಗಳ ಕಾಂತಿ, ರಮಣಿಯರ ರತ್ನಾಲಂಕಾರಗಳ ಕಾಂತಿ, ಎಲ್ಲವನ್ನೂ ಮಿಗುದು ಕಣ್ಗೊಳಿಸುತಿದ್ದ ರಮಣಿಯರ ನಯನಗಳ ಕಾಂತಿ, ಸರ್ವತ್ರ ಕಾಂತಿಮಯವಾಗಿದ್ದಿತು. ಸಪ್ತಸ್ವರ ಸಮ್ಮಿಳಿತವಾದ ವೀಣಾಧ್ವನಿಯು ಆಕಾಶವನ್ನು ವ್ಯಾಪಿಸಿಕೊಂಡಿದ್ದಿತು. ತದಧಿಕವಾಗಿ ಮಧುರ ಕಂಠವುಳ್ಳ ರಮಣಿಯರ ಇಂಪಾದ ಸ್ವರವು ಅದರೊಂದಿಗೆ ಸೇರಿ ತರಂಗ ತರಂಗವಾಗಿ ತೇಲಿಹೋಗುತ್ತಿದ್ದಿತು. ಅವುಗಳೊಡನೆ ತಾಳ ಲಯ ಮಿಳಿತವಾದ ಪಾದವಿಕ್ಷೇಪದಿಂದ ನರ್ತಕಿಯರ ಆಭರಣಗಳ ಸಿಂಜಿತ ಧ್ವನಿಯು ಬಂದು ಮನಸ್ಸನ್ನು ಮುಗ್ಧಮಾಡುತಿದ್ದಿತು. ಪಾಠಕರೆ! ಅಲ್ಲಿ ನೋಡಿರಿ, ಆ ರಮಣಿಯು ಪದ್ಮವನದಲ್ಲಿ ಹಂಸಿಯು ಸಮೀರಣೋತ್ಥಿತ ತರಂಗ ಹಿಲ್ಲೋಲದಲ್ಲಿ ಕುಣಿಯುವಂತೆ ಕುಣಿಯುತಿರುವಳು; ಪ್ರಫುಲ್ಲ ಪದ್ಮಮುಖಿಯರು ಅವಳ ಸುತ್ತು ನಿಂತು ನೋಡುತಿರುವರು.—ಮತ್ತೊಬ್ಬ ರಮಣಿಯನ್ನು ನೋಡಿರಿ, ನೀಲಾಂಬರ ಪರಿಧಾನೆಯಾಗಿರುವಳು; ಅವಳಾ ನೀಲವಾಸಸ್ಸು ಸ್ವರ್ಣತಾರಾವಳಿಗಳಿಂದ ಖಚಿತವಾಗಿದೆ. ಅತ್ತ ನೋಡಿರಿ, ಎಂತಹ ವಿಶಾಲಾಯತ ಲೋಚನಗಳು! ಅವುಗಳಾ ಮೇಘದಂತಿರುವ ನೀಲವರ್ಣ! ಎಂತಹ ವಿದ್ಯುತ್ಕಟಾಕ್ಷ! ಇತ್ತಿರುವ ಸುಂದರಿಯು ಹೇಗಿದ್ದಾಳೆ!

ಆ ಲಲಾಟದಮೇಲೆ ಅಲಂಕೃತವಾಗಿರುವ ವಜ್ರತಾರೆಯು ಸೀಮಂತದಿಂದ ಹರಿದು ಬಂದು ಕುಳಿತಿರುವಂತೆ ಹೊಳೆಯುತ್ತಿದೆ! ಎಷ್ಟೊಂದು ಸುಂದರವಾದ ಲಲಾಟ! ಅಷ್ಟೊಂದು ಪ್ರಶಾಂತವಾಗಿಯೂ, ಪ್ರಶಸ್ತವಾಗಿಯೂ, ಪರಿಷ್ಕಾರವಾಗಿಯೂ ಇರುವ ಲಲಾಟವನ್ನು ಮತ್ತೆಲ್ಲಿ ನೋಡಿರುವಿರಿ! ವಿಧಾತನಾ ಲಲಾಟದಲ್ಲಿ ಆ ವಿಲಾಸಮಂದಿರವನ್ನು ಬರೆದನೆ! ಅದನ್ನು ಬಿಡಿ, ಆ ಪುಷ್ಪಾಭರಣಗಳಾದ ಶ್ಯಾಮವರ್ಣಗಳೊ! ಅವಳಿಗೆ ಆ ಪುಷ್ಪಾಭರಣವು ಹೇಗೆ ಒಪ್ಪುತಿದೆ, ನೋಡಿರಿ! ಆ ನಾರಿಯ ದೇಹಾಲಂಕಾರಕ್ಕಲ್ಲವೆ, ಪುಷ್ಪವು ಸೃಷ್ಟಿಯಾದುದು? ಸಂಪೂರ್ಣ ಮೃದುರಕ್ತ ಓಷ್ಠಾಧರಗಳುಳ್ಳ ರಮಣೀಶಿರೋಮಣಿಯನ್ನು ನೋಡಬಾರದೆ? ಆ ಓಷ್ಠಾಧರಗಳು ಸ್ವಲ್ಪ ಕುಂಚಿತವಾಗಿವೆಯಲ್ಲವೆ? ಅವಳಾ ದೇಹಕಾಂತಿಯು ಶುದ್ಧವಾದಾ ಸೀಲವಸನಗಳಿಂದ ಹೇಗೆ ಪ್ರಕಾಶಿಸುತ್ತಿದೆ! ನಿರ್ಮಲವಾದಾ ನೀಲಾಂಬರದ ಮಧ್ಯದಲ್ಲಿ ಪೂರ್ಣ ಚಂದ್ರಾಲೋಕವನ್ನು ನೋಡಿದಂತೆ ತೋರುವು ದಿಲ್ಲವೆ! ಈ ಸುಂದರಿಯು ಮರಾಳನಿಂದಿತ ಗ್ರೀವಾಭಂಗಿಯಿಂದ ನಗುನಗುತ ಮಾತನಾಡುವಾಗ ಅವಳಾ ಕರ್ಣಾಭರಣವು ಹೇಗೆ ತೂಗಲಾಡುತ್ತದೆ! ಇವಳಾರು ಸುಕೇಶಿಯಾದ ಸುಂದರಿ! ನಿನ್ನ ಕುಂಚಿತವಾದ ಅಳಕರಾಶಿಯನ್ನು ಉರಃ ಪರ್ಯಂತವೂ ತೂಗಲಾಡುವಂತೆ ಬಿಟ್ಟಿರುವೇಕೆ? ಪದ್ಮವೃಕ್ಷಕ್ಕೆ ಕಾಲಫಣಿಯು ಸುತ್ತಿರ್ಪದನ್ನು ಪ್ರತ್ಯಕ್ಷ ದೃಷ್ಟಾಂತಪಡಿಸುವಿಯಾ, ಏನು?

ಕತಲೂಖಾನನ ಪಕ್ಕದಲ್ಲಿ ಕುಳಿತು ಮಿಸುನಿ* ಪಾತ್ರದಲ್ಲಿ ಸುರಾಪಾನ ವನ್ನು ಮಾಡಿಸುತಿರುವವಳು ನೀನಾರು, ಸುಂದರಿ! ಕತಲೂಖಾನನು ಮಿಕ್ಕ ರಮಣಿಯರನ್ನೆಲ್ಲಾ ಬಿಟ್ಟು ನಿನ್ನ ಪೂರ್ಣ ಲಾವಣ್ಯದೇಹವನ್ನೇಕೆ ಸತೃಷ್ಣನಯನ ಗಳಿಂದ ನೋಡುತ್ತಿರುವನು? ನಿನ್ನಾ ಅವ್ಯರ್ಥವಾದ ಕಟಾಕ್ಷದಿಂದ ಕತಲೂ ಖಾನನ ಹೃದಯವನ್ನು ಭೇದಿಸುತ್ತಿರುವಿಯಾ? ನಿನ್ನಾ ಮಧುರವಾದ ಕಟಾಕ್ಷ ವನ್ನು ನೋಡಿ ನಮಗೀಗ ಗೊತ್ತಾಯಿತು—ನೀನು ವಿಮಲೆ! ಬಟ್ಟಲಿಗೆ ಅಷ್ಟೊಂದು ಮದ್ಯವನ್ನೇಕೆ ಸುರಿಯುತ್ತಿ? ಹಾಕು—ಹಾಕು; ಮತ್ತೂ ಹಾಕು. ಚೇಲಾಂಚಲದಲ್ಲಿ ಛರ್ಜಿಯಿದೆಯಲ್ಲವೆ? ಇದೆ—ಸಂದೇಹವಿಲ್ಲದೆ ಇದೆ; ಹಾಗಿದ್ದರೆ ಈಪರಿ ಹೇಗೆ ನಗುಬಲ್ಲೆ? ಕತಲೂಖಾನನು ನಿನ್ನನ್ನೇ ನೋಡುತ್ತಿರುವನು. ಅದೇನು, ಕಟಾಕ್ಷವೋ, ಮತ್ತೇನು? ಆ ಯವನನು ಸುರಾಸ್ವಾದದಿಂದ ಪ್ರಮತ್ತನಾದನೆ? ನೋಡು, ನೋಡು. ನಿನ್ನಾ ಕೌಶಲದಿಂದಲ್ಲವೆ ಕತಲೂಖಾನ ನಿಗೆ ನೀನೆಲ್ಲರಿಗಿಂತ ಮಿಗಿಲು ಪ್ರೇಮಾಸ್ಪದೆಯಾದೆ? ಹಾಗಲ್ಲದೆ ಅನ್ಯಥಾ ಹೇಗಾಗ ಬಲ್ಲದು? ಆ ಹಾಸ್ಯ, ಆ ಅಂಗಭಂಗಿ, ಆ ಸರಸಾಲಾಪ, ಆ ಕಟಾಕ್ಷ, ಅವಲ್ಲದೆ, ಮದ್ಯವೂ ಸಿಕ್ಕಿದೆ! ಕತಲೂಖಾನ್! ಜಾಗರೂಕನಾಗಿರು. ಕತಲೂಖಾನನು ಏನನ್ನು ಮಾಡಬಲ್ಲವನಾಗಿದ್ದಾನೆ! ಎಂತಹ ಸುಂದರವಾದ ಕೈಯಿಂದ

* ಮಿಸುನಿ = ಭಂಗಾರದ.

ವಿಮಲೆಯು ಮದ್ಯವನ್ನು ಕೊಡುತ್ತಾಳೆ! ಅದೇನು ಧ್ವನಿ! ಸಂಗೀತವಾಗುತ್ತದೆ! ಗಾಯನಮಾಡುವವರು ಮನುಷ್ಯರೊ ದೇವತೆಯರೊ? ವಿಮಲೆಯು ಗಾಯಕಿಯರ ಸಂಗಡ ಕೂಡಿ ಹಾಡುತ್ತಾಳೆ! ಎಂತಹ ಸ್ವರ! ಎಂತಹ ಕಂಠ! ಎಂತಹ ಲಯ! ಕತಲೂಖಾನ್! ಇದೇನು ನಿನ್ನ ಮನಸ್ಸು ಎಲ್ಲಿದೆ! ವಿಮಲೆಯು ತೀಕ್ಷ್ಣಬಾಣಗಳಿಗಿಂತ ಮಿಗು ತೀವ್ರ ಕಟಾಕ್ಷ ಬಾಣದಿಂದ ಮನಸ್ಸನ್ನಿರಿಯುವಳಲ್ಲವೆ? ಅದನ್ನು ನೋಡುತ್ತಿರುವಿಯಾ? ಕಟಾಕ್ಷವೊಂದೇ ಪ್ರಾಣಹರಣಕ್ಕೆ ಸಾಕು. ಅಂತಹದುದರಲ್ಲಿ ಸಂಗೀತ ಸಂಧಿಸಂಬಂಧದಿಂದ ಕೂಡಿದ ಕಟಾಕ್ಷವಾಗಿದೆ. ಅವಳು ತಲೆಯನ್ನು ಲಯಕ್ಕೆ ಸರಿಯಾಗಿ ಹೇಗೆ ಅಗಲಾಡಿಸುತ್ತಾಳೆ! ಹಾ! ಮತ್ತೂ ಮದ್ಯವು ಬೇಕೆ? ಇದೇನು! ವಿಮಲೆಯು ನೃತ್ಯಮಾಡಲಿ. ಎಷ್ಟು ಸುಂದರವಾಗಿದೆ! ಆ ಅಂಗವೋ! ಆ ಭಂಗಿಯೋ! ಕತಲೂಖಾನ್! ಜಹಾಪನಾ! ಸ್ಥಿರನಾಗು! ಶರೀರವು ಬೆಂಕಿಯಾಗಿ ಸುಡುತ್ತದೆ! ಸಾಕು, ಬೇಡ—ಇಲ್ಲ ಮತ್ತೂ ಬೇಕು. ಮತ್ತೂ ಬೇಕೋ? ಹಾಗಾದರೆ, ಪಾನಮಾಡು; ಕೊಡುತ್ತಾಳೆ—ಪುನಃ ಕುಣಿಯುತ್ತಾಳೆ!

ಕತಲೂಖಾನನು ಪಾನಮಾಡಿ ಉನ್ಮತ್ತನಾದನು. ಬಳಿಕ ವಿಮಲೆಯನ್ನು ಕುರಿತು, 'ನೀನು ದೂರಹೋಗಲೇಕೆ?' ಎಂದನು. ಕೂಡಲೆ ಸುತ್ತು ಕುಳಿತಿದ್ದ ಹೆಂಗಸರು ನಗುತ ನಗುತ ಎದ್ದರು.

ವಿಮಲೆಯು ಹತ್ತಿರಬಂದು ತನ್ನೊಂದು ಕೈಯನ್ನು ಕತಲೂಖಾನನ ಭುಜದ ಮೇಲಿಟ್ಟು, 'ದಾಸಿಯು ತಮ್ಮ ಚರಣಸಮೀಪದಲ್ಲಿದ್ದಾಳೆ' ಎಂದಳು. ಮತ್ತೊಂದು ಕೈಯಲ್ಲಿ—ಭರ್ಜಿ!

ಒಮ್ಮೆಂದೊಮ್ಮೆ ಹತ್ತಿರ ಉರಿಯುತಿದ್ದ ದೀಪವು ನೊಂದಿಹೋಯಿತು. ತಕ್ಷಣದಲ್ಲಿ ಕತಲೂಖಾನನು ಭಯಂಕರವಾದ ಚೀತ್ಕಾರಧ್ವನಿಯನ್ನು ಮಾಡಿ, ವಿಮಲೆಯನ್ನು ದೂರದೂಡಿ ನೆಲದಮೇಲೆ ಬಿದ್ದನು. ವಿಮಲೆಯು ತೀಕ್ಷ್ಣವಾದ ಭರ್ಜಿಯನ್ನು ಆಮೂಲವಾಗಿ ಅವನ ವಕ್ಷಸ್ಥಳದಲ್ಲಿರಿದಿದ್ದಳು!!

ಕತಲೂಖಾನನು ಕೆಳಗೆ ಬೀಳುವಾಗ, 'ಅಯ್ಯೋ, ಪಿಶಾಚಿ!' ಎಂದು ಕೂಗಿ ಹಿಂದಕ್ಕೆ ನೆಲದಮೇಲೆ ಬಿದ್ದನು.

ವಿಮಲೆಯು, 'ಪಿಶಾಚಿಯಲ್ಲ, ವಿತಂತುವಾಗಿ ಮಾಡಲ್ಪಟ್ಟ ವೀರೇಂದ್ರಸಿಂಹನ ಸಹಧರ್ಮಿಣಿ' ಎಂದು ಹೇಳಿ ಬೇಗನೆ ಪಲಾಯನವಾಗಿ ಹೊರಟು ಹೋದಳು.

ಕತಲೂಖಾನನಿಗೆ ವಾಙ್ನಿಸ್ಮೃತ್ತಿಯು ತಪ್ಪುತ ಬಂದಿತು. ಆದರೂ ಸಾಧ್ಯವಾದಷ್ಟು ಚೀತ್ಕಾರ ಮಾಡುತಿದ್ದನು. ವಿಮಲೆಯೂ ಓಡಾಡುತ ಚೀತ್ಕಾರ ಮಾಡುತ ಬೇರೊಂದು ಕೊಟಡಿಗೆ ಹೋಗಿ ಜನರು ಮಾತನಾಡುತಿದ್ದುದನ್ನು ಕೇಳಿದಳು. ಊರ್ಧ್ವಶ್ವಾಸದಿಂದೋಡುತಿದ್ದಳು. ಅಲ್ಲೊಂದು ಕೊಟಡಿಯಲ್ಲಿದ್ದ

ಪ್ರಹರಿಯುರವಳ ಗದ್ದಲವನ್ನು ಕೇಳಿ, 'ಏನಾಯಿತು?' ಎಂದು ವಿಚಾರಿಸಿದರು. ಪ್ರತ್ಯುತ್ಪನ್ನಮತಿಯಾದ ವಿಮಲೆಯು, 'ಸರ್ವನಾಶವಾಗಿದೆ, ಬೇಗನೆ ಹೋಗಿರಿ, ಕಳ್ಳರು ಬಂದು ನವಾಬರನ್ನು ಖೂನಿಮಾಡಿದರು!' ಎಂದು ಹೇಳಿದಳು.

ಪ್ರಹರಿಯುರು ಉಸುರುಗುಕ್ಕುಲವಿಲ್ಲದೆ ವಿಲಾಸ ಗೃಹಾಭಿಮುಖರಾಗಿ ಓಡಿದರು. ವಿಮಲೆಯೂ ಓಡುತಲೇ ಇದ್ದಳು. ಮುಂಬಾಗಿಲುಗಳಲ್ಲಿ ಪ್ರಹರಿಯರು ಪ್ರಮೋದದಿಂದ ಕ್ಲಾಂತರಾಗಿ ನಿದ್ರಿತರಾಗಿದ್ದಕಾರಣ ವಿಮಲೆಯು ನಿರ್ವಿಘ್ನವಾಗಿ ಹೋಗುತಿದ್ದಳು; ಅರಮನೆಯ ಹೊರಬಾಗಿಲಲ್ಲಿ ಜಾಗರಿತ ರಾಗಿದ್ದ ಪಹರೆಯುವರಲ್ಲೊಬ್ಬನು ವಿಮಲೆಯುನ್ನು ನೋಡಿ, 'ಹೋಗುವವರಾರು?' ಎಂದನು.

ಅಂತಃಪುರದಲ್ಲಿ ಅತ್ಯಂತ ಕೋಲಾಹಲವಾಗುತಿದ್ದಿತು. ಎಲ್ಲರೂ ಅತ್ತ ಓಡುತಿದ್ದರು. ವಿಮಲೆಯು ಪ್ರಹರಿಯುನ್ನು ಕುರಿತು, 'ಕುಳಿತೇನು ಮಾಡು ತ್ತೀರಿ? ಗದ್ದಲವು ಕೇಳುವುದಿಲ್ಲವೆ?' ಎಂದಳು.

ಪ್ರಹರಿಯು, 'ಗದ್ದಲವೇನು?' ಎಂದು ಕೇಳಿದನು.

ವಿಮಲೆಯು, 'ಅಂತಃಪುರದಲ್ಲಿ ಸರ್ವನಾಶಘಟನೆಯಾಗಿದೆ; ನವಾಬರ ನ್ನಾರೋ ಹೊಡೆದು ಹಾಕಿದರು' ಎಂದಳು.

ಪ್ರಹರಿಗಳು ಭಲ್ಲೆಯುಗಳನ್ನು ಬಿಸುಟು ಓಡಿದರು. ವಿಮಲೆಯು ನಿರ್ವಿಘ್ನ ವಾಗಿ ನಿಷ್ಕ್ರಾಂತಳಾದಳು.

ವಿಮಲೆಯು ಸ್ವಲ್ಪ ದೂರ ಹೋದಳು. ಅಲ್ಲೊಬ್ಬ ಪುರುಷನು ನಿಂತಿದ್ದು ದನ್ನು ಕಂಡವಳು, ಅವನು ಅಭಿರಾಮಸ್ವಾಮಿಯೆಂದು ತಿಳಿದಳು.

ಅಭಿರಾಮಸ್ವಾಮಿಯು ವಿಮಲೆಯುನ್ನು ನೋಡಿ, 'ನಾನು ಬಹಳ ಉದ್ವಿಗ್ನನಾಗಿದ್ದೆನು; ಕೋಲಾಹಲವೇನು?' ಎಂದು ಕೇಳಿದನು.

ವಿಮಲೆ—ನಾನು ವೈಧವ್ಯದ ಶೋಕನಿವಾರಣೆಯುನ್ನು ಮಾಡಿಕೊಂಡು ಬಂದೆನು; ಹೆಚ್ಚು ಮಾತುಗಳೀಗ ಬೇಡ; ಶೀಘ್ರವಾಗಿ ಆಶ್ರಮಕ್ಕೆ ಹೋಗೋಣ, ಬಳಿಕ ಮಾತನಾಡೋಣ, ತಿಲೋತ್ತಮೆಯು ಆಶ್ರಮಕ್ಕೆ ಬಂದಳೆ?

ಅಭಿರಾಮಸ್ವಾಮಿಯು, 'ಆಶ್ಮನಿಯ ಸಂಗಡ ತಿಲೋತ್ತಮೆಯು ಮುಂದೆ ಹೋದಳು, ಅವಳನ್ನಲ್ಲಿ ನೋಡುವೆ' ಎಂದು ಹೇಳಿದನು.

ಅಲ್ಲಿಂದಿಬ್ಬರೂ ಹೊರಟು ಸ್ವಲ್ಪ ಹೊತ್ತಿನಲ್ಲಿ ಕುಟೀರಕ್ಕೆ ಬಂದು ನೋಡಲು, ಅದಕ್ಕೆ ಪೂರ್ವಕ್ಷಣದಲ್ಲಿ ಆಯುಷೆಯ ಅನುಗ್ರಹದಿಂದ ಆಶ್ಮನಿಯು ತಿಲೋತ್ತಮೆ ಯುನ್ನು ಸಂಗಡ ಕರೆತಂದಿದ್ದಳು. ತಿಲೋತ್ತಮೆಯು ಅಭಿರಾಮಸ್ವಾಮಿಯ ಪಾದಗಳಿಗೆರಗಿ ರೋದನ ಮಾಡತೊಡಗಿದಳು. ಅಭಿರಾಮಸ್ವಾಮಿಯು ಅವಳನ್ನು ಸಂತೈಸಿ, 'ಈಶ್ವರಾನುಗ್ರಹದಿಂದ ನೀವಾ ದುರಾತ್ಮನ ಸೆರೆಯಿಂದ ಮುಕ್ತರಾಗಿ ಬಂದಿರಿ, ನಾವಿನ್ನು ತಿಲಾರ್ಧಕಾಲವಾದರೂ ಇಲ್ಲಿರಕೂಡದು, ಯುವನರಿಗದು

ಗೊತ್ತಾದರೆ ನಮ್ಮನ್ನು ಪ್ರಾಣದಿಂದ ಬಿಡರು; ನಾವೀರಾತ್ರಿ ಈ ಸ್ಥಳವನ್ನು ಬಿಟ್ಟು ಹೋಗಬೇಕು' ಎಂದನು.

ಎಲ್ಲರೂ ಅದಕ್ಕೆ ಸಮ್ಮತಿಸಿದರು.

---

## ಹದಿನೇಳನೆಯ ಪರಿಚ್ಛೇದ

### ಅಂತಿಮಕಾಲ

ವಿಮಲೆಯು ಪಲಾಯನವಾಗಿ ಹೋದ ಕೆಲವು ನಿಮಿಷಗಳ ಬಳಿಕ ಒಬ್ಬ ರಾಜ ಕರ್ಮಚಾರಿಯು ಅತ್ಯಂತ ವ್ಯಸ್ತನಾಗಿ ಜಗತ್ಸಿಂಹನಿದ್ದ ಕಾರಾಗಾರಕ್ಕೆ ಬಂದು, 'ಯುವರಾಜ! ನವಾಬ ಸಾಹೆಬರವರಿಗೆ ಮೃತ್ಯುಕಾಲವು ಸಮೀಪಿಸಿದೆ, ತಮ್ಮನ್ನವರು ಸ್ಮರಿಸಿದರು' ಎಂದನು.

ರಾಜಕುಮಾರನು ಮಿಟ್ಟಬಿದ್ದು, 'ಅದು ಹೇಗೆ?' ಎಂದನು—

ರಾಜಪುರುಷನು, 'ಅಂತಃಪುರಕ್ಕೆ ಶತ್ರುಗಳಾರೋ ಪ್ರವೇಶಿಸಿ ನವಾಬ ಸಾಹೆಬರನ್ನು ಆಹತರನ್ನಾಗಿ ಹೊಡೆದೋಡಿಹೋದರು, ಪ್ರಾಣವಿನ್ನೂ ಹೋಗಿಲ್ಲ, ಆದರದಕ್ಕೆ ಹೆಚ್ಚು ವಿಳಂಬ ಕಾಣುವುದಿಲ್ಲ, ತಾವು ಬೇಗನೆ ಹೊರಡಿ, ಇಲ್ಲದಿದ್ದರೆ ನೋಡಲಾರಿರಿ' ಎಂದನು.

ರಾಜಕುಮಾರನು, 'ಈಗೆನ್ನನ್ನು ನೋಡುವುದರಿಂದಾಗುವುದೇನು?' ಎಂದನು. ದೂತನು, 'ನನಗಾವುದೂ ತಿಳಿಯದು; ನಾನು ಕೇವಲ ವಾರ್ತಾವಹನು' ಎಂದನು.

ಯುವರಾಜನು ದೂತನ ಸಂಗಡ ಅಂತಃಪುರಕ್ಕೆ ಹೋದನು. ಅಲ್ಲಿ ಹೋಗಿ ನೋಡಲಾಗಿ, ಕತಲೂಖಾನನ ಪ್ರಾಣದ ಜ್ವಾಲೆಯು ನಿಜವಾಗಿಯೂ ನಿರ್ವಾಣವಾಗುತ್ತಾ ಬರುತಿದ್ದಿತು. ಅಂಧಕಾರಕ್ಕೆ ಹೆಚ್ಚು ವಿಳಂಬವಿರಲಿಲ್ಲ. ಉಸ್ಮಾನ್, ಆಯಿಷೆ, ಮುಮೂರ್ಷುವಿನ* ಅಪ್ರಾಪ್ತವಯಸ್ಕರಾಗಿದ್ದ ಪುತ್ರರು, ಪತ್ನಿ, ಉಪಪತ್ನಿಯರು, ದಾಸಿಯರು, ಅಮಾತ್ಯವರ್ಗದವರು ಮುಂತಾಗಿ ಎಲ್ಲರೂ ಸುತ್ತಿಕೊಂಡಿದ್ದರು. ರೋದನಧ್ವನಿಯ ಕೋಲಾಹಲವು ಹತ್ತಿದ್ದಿತು. ಪ್ರಾಯಃ ಎಲ್ಲರೂ ಉಚ್ಚಸ್ವರದಿಂದ ಅಳುತಿದ್ದರು. ಶಿಶುಗಳೂ ಕಾರಣವನ್ನರಿಯದೆ ಅಳುತಲಿದ್ದುವು. ಆಯಿಷೆಯೊಬ್ಬಳು ಅಳುತಿರಲಿಲ್ಲ. ಆದರವಳ ಮುಖವು ಕಂಬನಿಗಳಿಂದ ಪ್ಲಾವಿತವಾಗಿದ್ದಿತು. ತಂದೆಯ ತಲೆಯನ್ನು ತೊಡೆಯ ಮೇಲಿಟ್ಟು ಕೊಂಡು ನಿಶ್ಶಬ್ದವಾಗಿ "ನಿವಾತ ನಿಷ್ಪಂದಮಿವ ಪ್ರದೀಪಂ" ಎಂಬಂತೆ ಸ್ಥಿರವಾಗಿಯೂ ಗಂಭೀರವಾಗಿಯೂ ಕುಳಿತಿದ್ದಳು.

ಜಗತ್ಸಿಂಹನು ಬರುತಲೇ ಖ್ವಾಜಾಯಿಸಾ ಎಂಬ ಮಂತ್ರಿಯು ಅವನಿಗೆ

* ಮುಮೂರ್ಷುವಿನ = ಸಾಯುವುದಕ್ಕಿರುವವನ.

ಹಸ್ತಲಾಘವವನ್ನು ಕೊಟ್ಟು ಕತಲೂಖಾನನ ಬಳಿ ಕೊಂಡೊಯ್ದು, ಅವನ ಕಿವಿಯಲ್ಲಿ ಕಿವುಡರನ್ನು ಮಾತನಾಡಿಸುವಂತೆ ಘಟ್ಟಿಯಾಗಿ, 'ಯುವರಾಜ ಜಗತ್ಸಿಂಹನು ಬಂದಿದ್ದಾನೆ' ಎಂದು ತಿಳುಹಿದನು.

ಕತಲೂಖಾನನು ಕ್ಷೀಣಸ್ವರದಿಂದ, 'ನಾನು—ಶತ್ರು—ಸಾಯುತ್ತೇನೆ—ದ್ವೇಷ—ತ್ಯಾಗ—' ಎಂದನು.

ಜಗತ್ಸಿಂಹನು ತಿಳಿದುಕೊಂಡು, 'ಈಗ ತ್ಯಾಗಮಾಡಿದೆನು' ಎಂದನು.

ಕತಲೂಖಾನನು ಪುನಃ ಅದೇ ಸ್ವರದಿಂದ, 'ಒಂದು ಪ್ರಾರ್ಥನೆ—ವಾಗ್ದಾನ—' ಎಂದನು.

ಜಗತ್ಸಿಂಹನು, 'ನಾನಾವ ವಾಗ್ದಾನವನ್ನು ಮಾಡಬಲ್ಲೆನು?' ಎಂದನು.

ಕತಲೂಖಾನನು 'ಬಾಲಕರು—ಎಲ್ಲರೂ—ಯುದ್ಧ—ಬಹಳ ದಾಹ' ಎಂದನು. ಕೂಡಲೆ ಅಯಷೆಯು ಬಾಯಿಗೆ ಷರಬತ್ತನ್ನು ಬಿಟ್ಟಳು.

'ಯುದ್ಧ—ಪ್ರಯೋಜನ—ಇಲ್ಲ—ಸಂಧಿ—' ಎಂದು ಹೇಳಿ, ಮುಂದೆ ಹೇಳಲಾರದೆ ಸುಮ್ಮನಾದನು.

ಜಗತ್ಸಿಂಹನು ಉತ್ತರವನ್ನು ಕೊಡಲಿಲ್ಲ. ಕತಲೂಖಾನನು ಜಗತ್ಸಿಂಹನ ಉತ್ತರವನ್ನು ಎದುರುನೋಡುತಿದ್ದವನು, ಉತ್ತರ ಬಾರದುದನ್ನು ನೋಡಿ, ಕಷ್ಟದಿಂದ—'ಅಸ್ವೀಕಾರವೆ?' ಎಂದನು.

ಯುವರಾಜನು, 'ಪಠಾನರು ದಿಲ್ಲೀಶ್ವರನ ಪ್ರಭುತ್ವವನ್ನು ಸ್ವೀಕಾರ ಮಾಡಿದರೆ ನಾನು ಸಂಧಿಯ ವಿಚಾರವಾಗಿ ಅನುರೋಧ ಮಾಡಲೊಪ್ಪುವೆನು' ಎಂದನು.

ಕತಲೂಖಾನನು ಅರ್ಧ ಸ್ಫುಟಸ್ವರದಿಂದ 'ಉತ್ಕಲದೇಶ—' ಎಂದನು.

ರಾಜಪುತ್ರನು, ಅಭಿಪ್ರಾಯವನ್ನು ತಿಳಿದು, 'ನಾನು ಮಾಡುವ ಪ್ರಯತ್ನವು ಸಫಲವಾದರೆ ನಿನ್ನ ಪುತ್ರರು ಉತ್ಕಲಚ್ಯುತರಾಗರು' ಎಂದನು.

ಕತಲೂಖಾನನ ಮೃತ್ಯುಕ್ಲೇಶ ಪೀಡಿತವಾಗಿದ್ದ ಮುಖವು ಸಂತೋಷದಿಂದ ಸ್ವಲ್ಪಮಟ್ಟಿಗೆ ಪ್ರದೀಪ್ತವಾಗಿ— 'ನೀನು—ಮುಕ್ತ—ಜಗದೀಶ್ವರ—ಮಂಗಳ' ಎಂದನು.

ಜಗತ್ಸಿಂಹನು ಹೊರಟುಹೋಗುತಿದ್ದನು. ಅಯಷೆಯು ತಲೆಯನ್ನು ಬೊಗ್ಗಿಸಿ ತಂದೆಗೇನೋ ಹೇಳಿದಳು.

ಕತಲೂಖಾನನು ಹೊರಟುಹೋಗುತಿದ್ದವನನ್ನು ಕರೆಯಲು ಮಂತ್ರಿಗೆ ಸಂಜ್ಞೆಮಾಡಿದನು. ಮಂತ್ರಿಯು ರಾಜಪುತ್ರನನ್ನು ಕುರಿತು, 'ಪುನಃ ತಮ್ಮ ಸಂಗಡ ಮಾತನಾಡಲಿಷ್ಟಪಡುವಂತಿದೆ' ಎಂದನು. ರಾಜಪುತ್ರನು ಹಿಂದಿರುಗಿ ಬಂದನು.

ಕತಲೂಖಾನನು, 'ಕಿವಿ—' ಎಂದನು.

ರಾಜಕುಮಾರನು ತಿಳಿದು, ಮುಮೂರ್ಷುವಿನ ಸಮೀಪ ಬಂದು ಅವನ ಬಾಯಿಗೆ ಹತ್ತಿರ ತನ್ನ ಕಿವಿಯನ್ನು ತಗ್ಗಿಸಿದನು. ಕತಲೂಖಾನನು ಮೊದಲಿಗಿಂತ ಹೆಚ್ಚು ಅಸ್ಪಷ್ಟವಾದ ಸ್ವರದಿಂದ—'ವೀರ' ಎಂದವನು ನಿಸ್ತಬ್ಧನಾಗಿದ್ದು ಸ್ವಲ್ಪ ಹೊತ್ತಾದ ಬಳಿಕ 'ವೀರೇಂದ್ರಸಿಂಹ— ಬಾಯಾರಿಕೆ—' ಎಂದನು.

ಆಯಷೆಯು ಪುನಃ ಬಾಯಿಗೆ ಷರಬತ್ತನ್ನು ಬಿಟ್ಟಳು.

'ವೀರೇಂದ್ರಸಿಂಹ—ಕನ್ಯೆ—' ಎಂದನು.

ರಾಜಪುತ್ರನಿಗೆ ವೃಶ್ಚಿಕದಂಶನವಾದಂತಾಯಿತು. ಚಮಕಿತನಾಗಿ ಸ್ವಲ್ಪ ಹಿಂದಕ್ಕೆ ಸರಿದನು.

ಕತಲೂಖಾನ್—'ಪಿತೃವಿಹೀನಳು—ನಾನು—ಪಾಪಿ—ಹಾ! ತೃಷೆ—' ಎಂದನು.

ಆಯಷೆಯು ಪುನಃ ಪಾನೀಯವನ್ನು ಬಿಟ್ಟಳು. ಆದರೂ ವಾಕ್ಯಸ್ಫೂರ್ತಿಯು ದುರ್ಘಟವಾಯಿತು. ಶ್ವಾಸವನ್ನು ಬಿಡುತ, 'ದಾರುಣಜ್ವಾಲೆ-ಸಾಧ್ವೀ—ನೀನೇ ನೋಡುವೆ—' ಎಂದನು.

ರಾಜಕುಮಾರನು, 'ಏನು!' ಎಂದನು. ಕತಲೂಖಾನನ ಕಿವಿಯಲ್ಲಿ ಆ ಪ್ರಶ್ನೆಯು ಮೇಘಗರ್ಜನೆಯಂತೆ ಘೋಷವಾಗಿ—'ಆ-ಕ-ಕನ್ಯೆಯ—ಹಾಗೆ ಪವಿತ್ರಳು-ಸ್ವರ್ಗ-ನೋಡಿ—ಇಲ್ಲ—ನೀನು-ಹಾಹಾ ತೃಷೆ—ಹೋದೆ-ಹೋದೆ-ಆಯಷೆ—' ಎಂದನು.

ಮುಂದೆ ಮಾತು ಹೊರಡಲಿಲ್ಲ, ಸಾಧ್ಯಾತೀತ ಪರಿಶ್ರಮವುಂಟಾಯಿತು. ತಲೆಯು ಓರೆಯಾಯಿತು. ಮಗಳ ಹೆಸರು ಬಾಯಲ್ಲಿ ಹೊರಡುತಿದ್ದಹಾಗೆ ಕತಲೂಖಾನನ ಪ್ರಾಣವಿಯೋಗವಾಯಿತು.

---

## ಹದಿನೆಂಟನೆಯ ಪರಿಚ್ಛೇದ

### ಪ್ರತಿಯೋಗಿತಾ

ಜಗತ್ಸಿಂಹನು ಕಾರಾಮುಕ್ತನಾಗಿ ಪಿತೃಶಿಬಿರಕ್ಕೆ ಹೊರಟುಹೋದ ಬಳಿಕ, ತಾನು ವಾಗ್ದಾನಮಾಡಿದ್ದ ಪ್ರಕಾರ ಮೊಗಲರಿಗೂ ಪಠಾನರಿಗೂ ಸಂಧಿ ಸಂಬಂಧವನ್ನುಂಟುಮಾಡಿದನು. ಪಠಾನರು ದಿಲ್ಲೀಶ್ವರನಿಗೆ ಅಧೀನರಾಗಿ ಉತ್ಕಲಾಧಿಕಾರವನ್ನು ಮಾಡುತಿದ್ದರು. ಸಂಧಿಯಾಗಿ ತಹನಾಮೆಯು ಹುಟ್ಟಿತು. ಅದರ ವಿವರಣೆಯನ್ನು ಬಂಗಾಳೆಯ ಚರಿತ್ರೆಯಲ್ಲೋದಬಹುದು. ಈ ಸ್ಥಳದಲ್ಲಿ ಅದರ ಪ್ರಸ್ತಾಪದಿಂದ ಪ್ರಯೋಜನವಿಲ್ಲ. ಸಂಧಿ ಸಮಾಪನಾರ್ಥವಾಗಿ ಕತಲೂಖಾನನ ಪ್ರಧಾನ ಮಂತ್ರಿಯಾಗಿದ್ದ ಖ್ವಾಜಾಯಿಸಾನೂ ಸೇನಾಪತಿ ಉಸ್ಮಾನ್ ಖಾನನೂ ನವಾಬನ ಮಕ್ಕಳನ್ನು ಸಂಗಡ ಕರೆದುಕೊಂಡು ರಾಜಾ ಮಾನಸಿಂಹನ

ಶಿಬಿರಕ್ಕೆ ಹೋಗಿ ಐವತ್ತು ಗಜಗಳನ್ನೂ ಬೇರೆ ಅಮೌಲ್ಯವಾದ ಅನೇಕ ಪದಾರ್ಥಗಳನ್ನೂ ರಾಜಾ ಮಾನಸಿಂಹನಿಗೆ ಉಪಟೌಕನವಾಗಿ ಕೊಟ್ಟು ಸಂತೋಷವನ್ನುಂಟುಮಾಡಿದರು. ರಾಜನೂ ಅವರಿಗೆ ಬಹು ವಿಧವಾಗಿ ಸನ್ಮಾನಮಾಡಿ ಎಲ್ಲರಿಗೂ ಖಿಲ್ಲತ್ತುಗಳನ್ನು ಕೊಟ್ಟು ಕಳುಹಿದನು.

ಈ ಪ್ರಕಾರ ಸಂಧಿಸಂಬಂಧವು ಪೂರ್ತಿಯಾದ ಬಳಿಕ ಶಿಬಿರವನ್ನೆತ್ತಿ ಹೊರಡಲು ಕೆಲವು ದಿನಗಳ ಸಾವಕಾಶವಾಯಿತು.

ಕಡೆಗೆ ರಾಜಪೂತ ಸೈನ್ಯವು ಪಾಟ್ನಾಭಿಮುಖವಾಗಿ ಹೊರಡಲು ಸಿದ್ಧವಾಯಿತು. ಆಗ ಒಂದು ದಿನ ಜಗತ್ಸಿಂಹನು ಅಪರಾಹ್ನದಲ್ಲಿ ಸಹಚರರಿಂದೊಡಗೂಡಿ ಪಠಾನರ ದುರ್ಗದಲ್ಲಿದ್ದ ಉಸ್ಮಾನ್ ಮುಂತಾದವರನ್ನು ನೋಡಿ, ಅವರಿಂದ ಬೀಳ್ಕೊಂಡು ಬರಲು ಹೋದನು. ಕಾರಾಗಾರದಲ್ಲಿ ನೋಡಿದ ಬಳಿಕ ಉಸ್ಮಾನನು ರಾಜಕುಮಾರನ ವಿಚಾರದಲ್ಲಿ ಅಷ್ಟೊಂದು ಸೌಹೃದಭಾವವನ್ನು ತೋರುತ್ತಿರಲಿಲ್ಲ. ಅಂದು ರಾಜಕುಮಾರನು ಬಂದು ನೋಡಿದಾಗ ಸಾಮಾನ್ಯವಾದ ಮಾತುಕಥೆಗಳನ್ನಾಡಿ ಬೀಳ್ಕೊಟ್ಟು ಕಳುಹಿದನು.

ಜಗತ್ಸಿಂಹನು ಉಸ್ಮಾನನ ಬಳಿ ಅಪ್ಪಣೆಯನ್ನು ತೆಗೆದುಕೊಂಡು, ಕ್ಷುಣ್ಣಮನಸ್ಕನಾಗಿ ಮಂತ್ರಿ ಖ್ವಾಜಾಯಿಸಾನ ಬಳಿ ಬಂದು ಅವನಪ್ಪಣೆಯನ್ನು ಪಡೆದು, ಅಲ್ಲಿಂದ ಅಯೆಷೆಯ ಅಪ್ಪಣೆಯನ್ನು ಪಡೆದುಕೊಂಡು ಹೋಗುವ ಅಭಿಪ್ರಾಯದಿಂದ, ಅವಳಿದ್ದಲ್ಲಿಗೆ ಹೋಗಿ ಅಲ್ಲಿದ್ದೊಬ್ಬ ಅಂತಃಪುರದ ದ್ವಾರಪಾಲಕನನ್ನು ಕರೆದು ಅಯೆಷೆಯ ಬಳಿಗೆ ವರ್ತಮಾನವನ್ನು ಕಳುಹಿದನೇನಂದರೆ:—ನವಾಬರಿಗೆ ಲೋಕಾಂತರವಾದ ಬಳಿಕ ಅವಳನ್ನು ತಾನು ನೋಡಿಲ್ಲವೆಂದೂ ತಾನು ಪಾಟ್ನಾನಗರಕ್ಕೆ ಹೊರಟಿರುವುದರಿಂದ ಪುನಃ ನೋಡುವ ಸಂಭವವಿರದೆಂದೂ ಅದುಕಾರಣ ಅವಳಿಗೆ ಅಭಿವಾದನವನ್ನು ಮಾಡಿ ಹೋಗಲಿಷ್ಟವುಳ್ಳವನಾಗಿ ಬಂದಿದ್ದನೆಂದೂ ಹೇಳೆಂದು ಹೇಳಿ ಕಳುಹಿದನು.

ದ್ವಾರಪಾಲಕನು ಒಳಗೆ ಹೋಗಿ ಸ್ವಲ್ಪ ಹೊತ್ತಿನೊಳಗೆ ಹಿಂದಿರುಗಿ ಬಂದು ನವಾಬರ ಮಗಳು ಯುವರಾಜನನ್ನು ನೋಡಲಾರಳೆಂದೂ ಅಪರಾಧವನ್ನು ಮನ್ನಿಸಬೇಕೆಂದು ತಿಳಿಸೆಂದು ಅಪ್ಪಣೆ ಕೊಟ್ಟಳೆಂದೂ ಹೇಳಿದನು.

ರಾಜಕುಮಾರನು ಸಂವರ್ಧಿತ ವಿಷಾದದಿಂದ ತನ್ನ ಶಿಬಿರಾಭಿಮುಖವಾಗಿ ಹೊರಟನು; ಕೋಟೆಯ ಬಾಗಲಿಗೆ ಹೋಗಲು ಉಸ್ಮಾನನಲ್ಲಿ ಕಾದಿದ್ದವನನ್ನು ಕಂಡನು.

ರಾಜಕುಮಾರನು ಉಸ್ಮಾನನನ್ನು ನೋಡಿ ಪುನಃ ಅಭಿವಾದನವನ್ನು ಮಾಡಿ ಮುಂದೆ ತೆರಳಿದನು. ಉಸ್ಮಾನನೂ ಅವನ ಹಿಂದೆ ಹೋದನು. ರಾಜಕುಮಾರನು ಉಸ್ಮಾನನನ್ನು ನೋಡಿ, 'ಸೇನಾಪತಿ ಮಹಾಶಯರೆ! ತಮಗೆ ಬೇಕಾದ

ವಿಚಾರದಲ್ಲಿ ಅಪ್ಪಣೆಯನ್ನು ಕೊಟ್ಟರೆ ನಾನದನ್ನು ಅಗತ್ಯವಾಗಿ ನೆರವೇರಿಸಿ ಕೃತಾರ್ಥನಾಗುವೆನು ' ಎಂದನು.

ಉಸ್ಮಾನನು, 'ತಮ್ಮೊಂದಿಗೊಂದು ವಿಶೇಷ ಸಂಗತಿಯನ್ನು ಕುರಿತು ಮಾತನಾಡತಕ್ಕುದಿದೆ, ಬಹಿರಂಗವಾಗಿ ಹೇಳತಕ್ಕುದಲ್ಲ, ಸಹಚರರನ್ನು ಮುಂದೆ ಹೋಗಲು ಅಪ್ಪಣೆ ಕೊಟ್ಟು ನನ್ನೊಂದಿಗೆ ಬಂದರೆ ಹೇಳುವೆನು ' ಎಂದನು.

ರಾಜಕುಮಾರನು ಸ್ವಲ್ಪವೂ ಅನುಮಾನಿಸದೆ ಸಹಚರರನ್ನು ಮುಂದೆ ಹೋಗುತ್ತಿರುವಂತೆ ಅಪ್ಪಣೆ ಮಾಡಿ ತಾನೊಬ್ಬನೇ ಅಶ್ವಾರೂಢನಾಗಿ ಪಠಾನನ ಹಿಂದೆ ಹೋದನು. ಉಸ್ಮಾನನೂ ಕುದುರೆ ಸವಾರನಾಗಿದ್ದನು. ಸ್ವಲ್ಪ ದೂರ ಹೋಗಿ ಉಸ್ಮಾನನು ಅಲ್ಲೊಂದು ಶಾಲವನವನ್ನು ಪ್ರವೇಶಿಸಿದನು. ವನದ ಮಧ್ಯದಲ್ಲೊಂದು ಶಿಥಿಲವಾದ ಅರಮನೆಯು ಇದ್ದಿತು. ಅದನ್ನು ನೋಡಿದರೆ ಪೂರ್ವಕಾಲದಲ್ಲಿ ರಾಜವಿದ್ರೋಹಿಗಳಲ್ಲಿ ಬಂದು ಅಡಗಿಕೊಂಡಿರುವುದಕ್ಕೆ ಯೋಗ್ಯ ವಾದ ಸ್ಥಳವೆಂದು ಬೋಧೆಯಾಗುವುದು. ಉಸ್ಮಾನನು ಕುದುರೆಯನ್ನೊಂದು ಶಾಲವೃಕ್ಷಕ್ಕೆ ಕಟ್ಟಿ ರಾಜಕುಮಾರನನ್ನು ಜದ್ದುಹೋಗಿದ್ದಾ ಅರಮನೆಯೊಳಗೆ ಕರೆದುಕೊಂಡು ಹೋದನು. ಅದು ನಿರ್ಜನವಾಗಿದ್ದಿತು. ಮಧ್ಯೆ ಪ್ರಶಸ್ತವಾ ದೊಂದು ಪ್ರಾಂಗಣ. ಅದರೊಂದು ಭಾಗದಲ್ಲಿ ತುರುಕರ ಸಮಾಧಿಯ ಗುಂಡಿ ಯೊಂದು ಅಗೆದು ಸಿದ್ಧವಾಗಿದ್ದಿತು; ಆದರದರಲ್ಲಿ ಶವವಿರಲಿಲ್ಲ, ಮತ್ತೊತ್ತಟ್ಟು ಒಂದು ಚಿತೆಯು ಸಿದ್ಧಮಾಡಲ್ಪಟ್ಟಿತ್ತು; ಆದರದರಮೇಲೆ ಮೃತದೇಹವಿರಲಿಲ್ಲ.

ಪ್ರಾಂಗಣದ ಮಧ್ಯೆ ಬರುತಲೇ ರಾಜಕುಮಾರನು, 'ಇದೇನು?' ಎಂದು ಕೇಳಿದನು.

ಉಸ್ಮಾನನು, 'ಇದೆಲ್ಲಾ ನನ್ನಪ್ಪಣೆಯ ಪ್ರಕಾರ ಸಿದ್ಧಮಾಡಲ್ಪಟ್ಟಿವೆ; ಇಂದೆನಗೆ ಮರಣವು ಸಂಭವಿಸಿದರೆ ನೀವು ನನ್ನನಿಲ್ಲಿ ಸಮಾಧಿ ಮಾಡಬೇಕು. ಅದಾಗದೆ ನೀವು ದೇಹವನ್ನು ಬಿಡುವ ಪಕ್ಷಕ್ಕೆ ಆ ಚಿತೆಯಲ್ಲಿ ಬ್ರಾಹ್ಮಣರ ಮೂಲಕ ನಿಮ್ಮ ದೇಹಸಂಸ್ಕಾರವನ್ನು ಮಾಡಿಸುವೆನು. ಹಾಗಾದರೆ ಈ ಸಂಗತಿ ಯಾರಿಗೂ ಗೊತ್ತಾಗದಿರುವುದು ' ಎಂದು ಹೇಳಿದನು.

ರಾಜಕುಮಾರನು ವಿಸ್ಮಿತನಾಗಿ, 'ತಮ್ಮ ಮಾತುಗಳ ತಾತ್ಪರ್ಯವೇನು?' ಎಂದನು.

ಉಸ್ಮಾನನು, 'ನಾನು. ಪಠಾನನು, ಅಂತಃಕರಣವು ಪ್ರಜ್ವಲಿತವಾದರೆ ನಾವು ಉಚಿತಾನುಚಿತವನ್ನು ವಿವೇಚನೆ ಮಾಡುವವರಲ್ಲ; ಈ ಪೃಥಿವಿಯಲ್ಲಿ ಆಯಿಷೆಯ ಪ್ರಣಯಾಕಾಂಕ್ಷಿಗಳು ಇಬ್ಬರಿರಕೂಡದು; ಅವರಲ್ಲೊಬ್ಬನು ಇಲ್ಲಿ ಪ್ರಾಣವನ್ನು ಬಿಡಬೇಕು' ಎಂದನು.

ರಾಜಕುಮಾರನು ಆದ್ಯೋಪಾಂತವನ್ನು ತಿಳಿದು ಅತ್ಯಂತ ಕ್ಷುಬ್ಧನಾಗಿ 'ಈಗ ನಿಮ್ಮ ಅಭಿಪ್ರಾಯವೇನು?' ಎಂದನು.

ಉಸ್ಮಾನನು, 'ನೀನು ಈಗ ಶಸ್ತ್ರಪಾಣಿಯಾಗಿರುತ್ತಿ; ನನ್ನೊಡನೆ ಯುದ್ಧವನ್ನು ಮಾಡು! ಸಾಧ್ಯವಾದರೆ ನನ್ನನ್ನು ವಧೆಮಾಡಿ ನಿನ್ನ ಮಾರ್ಗವನ್ನು ನಿಷ್ಕಂಟಕವಾಗಿ ಮಾಡಿಕೊಳ್ಳಬಹುದು. ಇಲ್ಲವಾದರೆ ನೀನು ನನ್ನ ಕೈಯಲ್ಲಿ ಪ್ರಾಣವನ್ನು ಬಿಟ್ಟು ನನ್ನ ಮಾರ್ಗವನ್ನು ನಿರಾತಂಕವಾಗಿ ಮಾಡು' ಎಂದು ಹೇಳುತ್ತಾ, ಜಗತ್ಸಿಂಹನಿಗೆ ಪ್ರತ್ಯುತ್ತರವನ್ನು ಕೊಡಲವಕಾಶವನ್ನು ಕೊಡದೆ ಖಡ್ಗಹಸ್ತದಿಂದ ಅವನನ್ನು ಆಕ್ರಮಣ ಮಾಡಿದನು. ರಾಜಪುತ್ರನು ನಿರ್ವಾಹವಿಲ್ಲದೆ ಆತ್ಮಸಂರಕ್ಷಣಾರ್ಥವಾಗಿ ಜಾಗ್ರತೆಯಾಗಿ ತನ್ನೊರೆಯಿಂದ ಕತ್ತಿಯನ್ನು ಹಿರಿದು ಉಸ್ಮಾನನ ಆಘಾತವನ್ನು ನಿವಾರಣೆ ಮಾಡುತ್ತಾ ಬಂದನು. ಉಸ್ಮಾನನು ರಾಜಕುಮಾರನ ಪ್ರಾಣನಾಶದಲ್ಲಿ ಪುನಃಪುನಃ ವಿಷಮೋದ್ಯಮಿಯಾಗಿದ್ದನು. ರಾಜಕುಮಾರನು ಭ್ರಮೆಯಿಂದಲೂ ಉಸ್ಮಾನನನ್ನು ಹೊಡಿಯಲು ಯತ್ನಪಡದೆ ಕೇವಲ ಆತ್ಮರಕ್ಷಣೆಗೆ ಸಲುವಾಗಿ ಅವನ ಪೆಟ್ಟುಗಳನ್ನು ನಿವಾರಣೆ ಮಾಡುತಿದ್ದನು. ಉಭಯರೂ ಶಸ್ತ್ರವಿದ್ಯೆಯಲ್ಲಿ ಸುಶಿಕ್ಷಿತರಾಗಿದ್ದಕಾರಣ ಬಹು ಕ್ಷಣಗಳು ಯುದ್ಧವು ನಡೆದರೂ ಆರೂ ಸೋಲಲಿಲ್ಲ. ಆದರೆ ಕಡೆಗೆ ಪಠಾನನೊಂದು ಪೆಟ್ಟಿನಿಂದ ರಾಜಪುತ್ರನ ಶರೀರದಲ್ಲೊಂದು ಕ್ಷತವಾಗಿ, ಅದರಿಂದವನ ಅಂಗಾಂಗವೆಲ್ಲಾ ರಕ್ತಮಯವಾಯಿತು. ಉಸ್ಮಾನನ ಮೈಮೇಲೊಂದು ಪೆಟ್ಟನ್ನೂ ಹೊಡೆಯಲಿಲ್ಲವಾದುದರಿಂದವನು ಅಕ್ಷತನಾಗಿದ್ದನು. ಜಗತ್ಸಿಂಹನು ರಕ್ತಸ್ರಾವದಿಂದ ಶರೀರವು ಶೋಷಿಸುತ್ತಿರುವುದನ್ನು ಕಂಡು ಅಂತಹ ಸಂಗ್ರಾಮದಲ್ಲಿ ತನಗೆ ಮರಣಸಂಭವವು ನಿಶ್ಚಿತವೆಂದು ತಿಳಿದು, ಕಾತರಸ್ವರದಿಂದ, 'ಉಸ್ಮಾನ್! ಕ್ಷಾಂತನಾಗು, ನಾನು ಪರಾಭವವನ್ನೊಪ್ಪುವೆನು' ಎಂದನು.

ಉಸ್ಮಾನನು ಘಟ್ಟಿಯಾಗಿ ನಗುತ, 'ರಾಜಪೂತ ಸೇನಾಪತಿಯು ಮರಣಕ್ಕೆ ಅಂಜುವನೆಂದು ತಿಳಿದಿರಲಿಲ್ಲ. ಯುದ್ಧವನ್ನು ಮಾಡು, ನಾನು ನಿನ್ನನ್ನು ವಧೆ ಮಾಡುವೆನೇ ಹೊರತು ಕ್ಷಮಿಸುವುದಿಲ್ಲ; ನೀನು ಜೀವಂತನಾಗಿದ್ದರೆ ನಾನು ಆಯುಷೆಯನ್ನು ಪಡೆಯಲಾರೆನು' ಎಂದು ಹೇಳಿದನು.

ರಾಜಕುಮಾರನು 'ನಾನು ಆಯುಷೆಯ ಅಭಿಲಾಷಿಯಲ್ಲ' ಎಂದನು.

ಉಸ್ಮಾನನು ಕತ್ತಿಯನ್ನು ತಿರುಗಿಸುತ್ತಾ, 'ನೀನು ಅಭಿಲಾಷಿಯಾಗಿಲ್ಲದಿದ್ದರೂ ಆಯುಷೆಯು ನಿನ್ನಲ್ಲಿ ಅಭಿಲಾಷಿಣಿಯಾಗಿದ್ದಾಳೆ, ಯುದ್ಧವನ್ನು ಮಾಡು, ಕ್ಷಮೆಯಿಲ್ಲ' ಎಂದು ಹೇಳಿದನು.

ರಾಜಪುತ್ರನು ಕತ್ತಿಯನ್ನು ದೂರ ಬಿಸುಟು, 'ನಾನು ಯುದ್ಧವನ್ನು ಮಾಡೆನು. ನೀನೆನಗೆ ಕಷ್ಟಕಾಲದಲ್ಲುಪಕಾರವನ್ನು ಮಾಡಿದೆ, ನಿನ್ನೊಂದಿಗೆ ಯುದ್ಧಮಾಡುವುದಿಲ್ಲ' ಎಂದನು.

ಉಸ್ಮಾನನು ಕ್ರೋಧದಿಂದ ರಾಜಪುತ್ರನನ್ನು ಕಾಲಿಂದೊದ್ದು, 'ಯೋದ್ಧನಾವಾತನು ಯುದ್ಧವನ್ನು ಮಾಡಲು ಅಂಜುವನೋ ಅಂತಹವನಿಗೆ ಹೀಗೆ ಮಾಡಿ ಅವನಿಂದ ಯುದ್ಧವನ್ನು ಮಾಡಿಸತಕ್ಕುದು' ಎಂದನು.

ರಾಜಕುಮಾರನಿಗೆ ತಾಳ್ಮೆಯು ತಪ್ಪಿತು. ಬಿಸುಟಿದ್ದ ಕತ್ತಿಯನ್ನು ಕೈಯಲ್ಲಿ ತೆಗೆದುಕೊಂಡು, ಶೃಗಾಲದಂಶಿತ ಸಿಂಹದಂತೆ ಹಾರಿ ಪಠಾನನನ್ನಾಕ್ರಮಣ ಮಾಡಿದನು. ರಾಜಕುಮಾರನು ಆಪರಿ ದುರ್ದಮವಾಗಿ ಮೈಮೇಲೆ ಬಿದ್ದುದನ್ನು ಯವನನು ಸಹಿಸಲಾರದೆ ಹೋದನು. ರಾಜಕುಮಾರನಾ ವಿಶಾಲವಾದ ಶರೀರದಾಘಾತದಿಂದ ಉಸ್ಮಾನನು ಭೂಶಾಯಿಯಾದನು. ರಾಜಕುಮಾರನು ಅವನೆದೆಯ ಮೇಲೆ ಕುಳಿತು ಅವನ ಕೈಯಲ್ಲಿದ್ದ ಅಸ್ತ್ರವನ್ನು ಕಿತ್ತು ಬಿಸುಟು, ತನ್ನ ಕತ್ತಿಯನ್ನವನ ಕುತ್ತಿಗೆಯ ಮೇಲಿಟ್ಟು, 'ಯುದ್ಧಾಭಿಲಾಷೆಯು ತೃಪ್ತಿಗೊಂಡಿತೆ?' ಎಂದನು.

ಉಸ್ಮಾನನು, 'ಪ್ರಾಣವಿರುವವರೆಗೂ ತೃಪ್ತಿಹೊಂದೆನು' ಎಂದನು.

ರಾಜಪುತ್ರನು, 'ನಿನ್ನ ಪ್ರಾಣವನ್ನೀಗಲೇ ನಿಶ್ಶೇಷಮಾಡಲೆ?' ಎಂದನು.

ಉಸ್ಮಾನನು, 'ಮಾಡು, ಇಲ್ಲದಿದ್ದರೆ ನಿನ್ನ ವಧಾಭಿಲಾಷಿಯು ಜೀವಿತನಾಗಿ ಉಳಿದಿರುವನು' ಎಂದು ಹೇಳಿದನು.

ಜಗತ್ಸಿಂಹ—ಜೀವಿತನಾಗಿರಲಿ, ರಜಪೂತನದಕ್ಕೆ ಅಂಜನು. ನಿನ್ನ ಪ್ರಾಣವನ್ನೀಗಲೇ ಹೋಗಲಾಡಿಸಬಲ್ಲೆನು, ಆದರೆ ನೀನೆನ್ನ ಪ್ರಾಣವನ್ನು ರಕ್ಷಿಸಿರುತ್ತಿ; ನಾನೂ ನಿನ್ನನ್ನು ಪ್ರಾಣದಿಂದ ರಕ್ಷಿಸುವೆನು.

ಹೀಗೆಂದು ಹೇಳಿ ಅವನ ಕೈಕಾಲುಗಳನ್ನು ಬಿಗಿದು ಕಟ್ಟಿ ಅವನ ಅಸ್ತ್ರಗಳನ್ನೆಲ್ಲಾ ಒಂದೊಂದಾಗಿ ತೆಗೆದುಕೊಂಡು, ಬಳಿಕ ಅವನ ಹಿಂಗಟ್ಟುಮುರಿಯನ್ನು ಬಿಚ್ಚಿ, 'ನಿರ್ವಿಘ್ನವಾಗೀಗ ಮನೆಗೆ ಹೋಗು, ನೀನು ಯವನನಾಗಿ ರಾಜಪೂತನನ್ನು ಕಾಲಿಂದೊದ್ದುದರಿಂದ ನಿನ್ನನ್ನೀ ಸ್ಥಿತಿಯಲ್ಲಿ ಬಿಟ್ಟಿದ್ದೇನೆ, ರಾಜಪೂತರು ಉಪಕಾರಿಯ ಅಂಗಸ್ಪರ್ಶವನ್ನು ಮಾಡುವಷ್ಟು ಕೃತಘ್ನರಲ್ಲ' ಎಂದು ಹೇಳಿದನು.

ಉಸ್ಮಾನನು ಮುಕ್ತನಾದ ಕೂಡಲೆ ಬೇರೆ ಮಾತನ್ನುಸುರದೆ ಕುದುರೆಯನ್ನೇರಿ ದುರ್ಗಾಭಿಮುಖವಾಗಿ ಹೊರಟುಹೋದನು.

ರಾಜಪುತ್ರನು ಪ್ರಾಂಗಣದಲ್ಲಿದ್ದ ಭಾವಿಗೆ ಬಟ್ಟೆಯನ್ನು ಇಳಿಪಿ ಅದರಿಂದ ಬಂದ ನೀರಿನಿಂದ ಮೈ ರಕ್ತವನ್ನು ತೊಳೆದುಕೊಂಡು ಶಾಲತರುವಿನ ಬಳಿಗೆ ಬಂದು ಕುದುರೆಯನ್ನು ಬಿಚ್ಚಿ ಅದರಮೇಲೆ ಹತ್ತಿದನು. ಹತ್ತಿ ನೋಡಲಾಗ ಕುದುರೆಯ ಲಗಾಮಿಗೆ ಬಳ್ಳಿಗಳಿಂದೊಂದು ಕಾಗದವು ಕಟ್ಟಲ್ಪಟ್ಟಿದ್ದಿತು. ಕಾಗದವನ್ನು ಬಿಚ್ಚಿ ತೆಗೆದು ನೋಡಿದನು. ಕಾಗದವು ಮನುಷ್ಯರ ಕೂದಲಿನಿಂದ ಭದ್ರವಾಗಿ ಕಟ್ಟಲ್ಪಟ್ಟಿದ್ದಿತು. ಕಾಗದದ ಲಕೋಟೆಯ ಮೇಲ್ಗಡೆ 'ಈ ಕಾಗದವನ್ನಿನ್ನೆರಡುದಿನ

ಗಳೊಳಗೆ ಬಿಚ್ಚಿ ನೋಡಕೂಡದು; ಹಾಗೆ ನೋಡಿದರೆ ಅದರ ಉದ್ದೇಶವು ವಿಫಲ ವಾಗುವುದು' ಎಂದು ಬರೆದಿದ್ದಿತು.

ರಾಜಕುಮಾರನು ಸ್ವಲ್ಪ ಹೊತ್ತು ಯೋಚಿಸಿ ಕಾಗದವನ್ನು ಬರೆದಿದ್ದಾತನ ಅಭಿಪ್ರಾಯಾನುಸಾರವಾಗಿ ಮಾಡಲು ಮನಸ್ಸು ಮಾಡಿದವನು, ಕಾಗದವನ್ನು ಕವಚದ ಕಿಸೆಯಲ್ಲಿಟ್ಟುಕೊಂಡು ಕುದುರೆಯನ್ನು ಕಶಾಘಾತದಿಂದೋಡಿಸುತ್ತಾ ಶಿಬಿರಾಭಿಮುಖವಾಗಿ ಹೊರಟುಹೋದನು.

ರಾಜಪುತ್ರನು ಶಿಬಿರಕ್ಕೆ ಬಂದ ಮರುದಿನ ದೂತನೊಬ್ಬನು ಮತ್ತೊಂದು ಕಾಗದವನ್ನು ತಂದುಕೊಟ್ಟನು. ಅದು ಅಯಷೆಯ ಕಾಗದವಾಗಿದ್ದಿತು. ಅದರ ವೃತ್ತಾಂತವನ್ನು ಕುರಿತು ಮುಂದಿನ ಪರಿಚ್ಛೇದದಲ್ಲಿ ಹೇಳುವೆವು.

---

## ಹತ್ತೊಂಭತ್ತನೆಯ ಪರಿಚ್ಛೇದ

### ಅಯಷೆಯ ಪತ್ರ

ಅಯಷೆಯು ಕೈಯಲ್ಲಿ ಲೇಖನಿಯನ್ನು ಹಿಡಿದು ಕಾಗದವನ್ನು ಬರೆಯಲು ಕುಳಿತಳು ! ಆ ಕಾಲದಲ್ಲಿ ಅವಳ ಮುಖದ ಕಾಂತಿಯು ಅತ್ಯಂತ ಗಂಭೀರ ವಾಗಿಯೂ ಸ್ಥಿರವಾಗಿಯೂ ಇದ್ದಿತು. ಜಗತ್ಸಿಂಹನಿಗೆ ಕಾಗದವನ್ನು ಬರೆ ಯುತ್ತಾಳೆ! ಒಂದು ಕಾಗದವನ್ನು ತೆಗೆದುಕೊಂಡು ಬರೆಯಲಾರಂಭಿಸಿದಳು. ಮೊದಲು "ಪ್ರಾಣಾಧಿಕ!" ಎಂದು ಬರೆದು, ಅದನ್ನಳಿಸಿ, "ರಾಜಕುಮಾರ!" ಎಂದು ಬರೆದಳು. ಆಗವಳ ಕಣ್ಣುಗಳಿಂದ ಅಶ್ರುಧಾರೆಯು ಹೊರಟು ಕಾಗದದ ಮೇಲೆ ಬಿದ್ದಿತು. ಅಯಷೆಯು ಆ ಕಾಗದವನ್ನೂ ಹರಿದು ಬಿಸುಟುಬಿಟ್ಟಳು. ಮತ್ತೊಂದು ಕಾಗದವನ್ನು ತೆಗೆದುಕೊಂಡು ಬರೆಯಲು ಪ್ರಾರಂಭಿಸಿದಳು. ಕೆಲವು ಪಙ್ಕ್ತಿಗಳನ್ನು ಬರೆಯುವುದರೊಳಗೆ ಕಾಗದವು ಅಶ್ರುಕಳಂಕಿತವಾಯಿತು. ಅಯಷೆಯು ಆ ಕಾಗದವನ್ನು ಹರಿದು ಬಿಟ್ಟು ಪುನಃ ಮತ್ತೊಂದು ಕಾಗದವನ್ನು ತೆಗೆದುಕೊಂಡು ಅದನ್ನು ಅಶ್ರುಕಳಂಕಶೂನ್ಯನಾಗಿ ಪೂರ್ತಿಯಾಗಿ ಬರೆದಳು. ಪೂರ್ತಿಮಾಡಿ ಓದಲು ಪ್ರಾರಂಭಿಸಿದಳು. ಓದುವಾಗ ನಯನಬಾಷ್ಪದಿಂದ ದೃಷ್ಟಿ ಲೋಪವಾಯಿತು. ಹೇಗೋಹಾಗೆ ಮಾಡಿ ಕಾಗದವನ್ನುಮಡಿಸಿ ದೂತನ ಕೈಯಲ್ಲಿ ಕೊಟ್ಟಳು. ದೂತನು ಕಾಗದವನ್ನು ತೆಗೆದುಕೊಂಡು ರಾಜಪುತ್ರನಿಗೆ ಕೊಡಲು ಹೊರಟುಹೋದನು. ಅವನು ಹೋದ ಬಳಿಕ ಅಯಷೆಯು ಮಂಚದಮೇಲೆ ಮಲಗಿ ರೋದನಮಾಡಹತ್ತಿದಳು.

ಜಗತ್ಸಿಂಹನಿಗೆ ಅಯಷೆಯ ಕಾಗದವು ಮುಟ್ಟಿ ಅವನದನ್ನು ಬಿಚ್ಚಿ ಓದ ಲಾರಂಭಿಸಿದನು:—

"ರಾಜಕುಮಾರ !

ನಿನ್ನನ್ನು ನೋಡದಿದ್ದುದಕ್ಕೆ ನಾನು ಅಧೀರಳಾಗಿದ್ದೇನೆಂದು ತಿಳಿಯ ಕೂಡದು. ನಾನಾವಾಗಲೂ ಅಧೀರಳಾಗೆನೆಂದು ತಿಳಿಯಬೇಕು. ಹಾಗೆ ತಿಳಿಯದಿದ್ದರೆ ನನಗೆ ಕ್ಲೇಶವುಂಟಾಗುವುದು. ಉಸ್ಮಾನನ ಹೃದಯದಲ್ಲಾಗಲೇ ಬೆಂಕಿಯು ಹತ್ತಿ ಉರಿಯುತಲಿದೆ. ನಾನು ನಿನ್ನನ್ನು ನೋಡಿದ್ದರೆ ಅದರ ಜ್ವಾಲೆಯು ಮತ್ತೂ ಹೆಚ್ಚಾಗುತಿದ್ದಿತು. ಆದುದರಿಂದ ನಾನು ನಿನ್ನನ್ನು ನೋಡಲಿಲ್ಲ. ನೀನೆನ್ನನ್ನು ನೋಡದಿರುವುದಕ್ಕೆ ಸಲುವಾಗಿ ನಿನಗೆ ಕ್ಲೇಶವುಂಟಾಯಿತೆಂದು ನಾನು ತಿಳಿಯುವುದಿಲ್ಲ. ನನ್ನ ಸ್ವಂತ ದುಃಖಗಳನ್ನೆಲ್ಲ ಜಗದೀಶ್ವರನ ಚರಣಗಳಲ್ಲಿ ಸಮರ್ಪಣೆಮಾಡಿದ್ದೇನೆ. ನಿನ್ನನ್ನು ಸಾಕ್ಷಾತ್ತಾಗಿ ನೋಡಿ ಕಳುಹಿದ್ದರೆ ಅದರಿಂದುಂಟಾಗುತಿದ್ದ ಕ್ಲೇಶಭೋಗವನ್ನು ನಾನು ಅನಾಯಾಸವಾಗಿ ಸಹಿಸಿಕೊಳ್ಳುತಿದ್ದೆನು. ನಿನ್ನನ್ನು ಪ್ರತ್ಯಕ್ಷವಾಗಿ ನೋಡದರಿಂದುಂಟಾಗಿರುವ ಕ್ಲೇಶವನ್ನು ಪಾಷಾಣ ಹೃದಯವುಳ್ಳ ನಾನೀಗ ಸಹಿಸುತಿದ್ದೇನೆ.

ಹಾಗಿದ್ದರೆ, ಈಗೀ ಕಾಗದವನ್ನು ಬರೆಯಲೇಕೆ? ನನ್ನದೊಂದು ಪ್ರಾರ್ಥನೆಯುಂಟು. ಅದುಕಾರಣ ಬರೆದಿದ್ದೇನೆ. ನಾನು ನೋದರಿಗಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸುತ್ತೇನೆಂದು ನೀನಂದು ನನ್ನ ಬಾಯಿಂದ ಕೇಳಿದ್ದರೆ, ಅದನ್ನೀಗ ಮರೆತುಬಿಡು. ನನ್ನ ದೇಹವಿರುವವರೆಗೂ ಅದನ್ನು ಹೊರಪಡಿಸಕೂಡದೆಂದು ಸಂಕಲ್ಪಿಸಿಕೊಂಡಿದ್ದೆನು. ಆದರೆ ವಿಧಾತನ ಇಚ್ಛೆಯು ಬೇರೆಯಾಗಿದ್ದುದರಿಂದದು ಪ್ರಕಾಶವಾಯಿತು. ಈಗ ನೀನದನ್ನು ಮರೆತುಬಿಡು.

ನಾನೀಗ ನಿನ್ನ ಪ್ರೇಮಾಕಾಂಕ್ಷಿಣಿಯಲ್ಲ. ನಾನು ಕೊಡಬೇಕಾಗಿದ್ದೆಷ್ಟು ಒಲುಮೆಯನ್ನಾಗಲೇ ಕೊಟ್ಟುಬಿಟ್ಟೆನು. ನೀನದಕ್ಕೆ ಪ್ರತಿಯಾಗಿ ಕೊಡಬೇಕೆಂದು ನಾನು ಅಪೇಕ್ಷಿಸುವವಳಲ್ಲ. ನನ್ನ ಸ್ನೇಹವು ಕೇವಲ ಬದ್ಧಮೂಲವುಳ್ಳದಾದುದರಿಂದ ನೀನು ಸ್ನೇಹಮಾಡದಿದ್ದರೂ ನಾನು ಸುಖಿಯಾಗಿರುವೆನು. ಆದರೆ ಅದನ್ನೀಗ ಹೇಳಿ ಪ್ರಯೋಜನವೇನು?

ನೀನು ಅಸುಖಿಯಾಗಿದ್ದುದನ್ನು ನೋಡಿದ್ದೆನು. ನೀನಾವಾಗಲಾದರೂ ಸುಖಿಯಾದರೆ ನನ್ನನ್ನು ಸ್ಮರಿಸಿಕೊಂಡು ನನಗಾ ಸಮಾಚಾರವನ್ನು ಕೊಡು. ಇಷ್ಟವಿಲ್ಲದಿದ್ದರೆ ಬೇಡ. ಆವಾಗಲಾದರೂ ನಿನ್ನ ಅಂತಃಕರಣದಲ್ಲಿ ಕ್ಲೇಶಬೋಧೆಯಾದರೆ ಆಯಿಷೆಯನ್ನು ಸ್ಮರಿಸುವಿಯಾ?

ನಾನೀಗ ನಿನಗೆ ಕಾಗದವನ್ನು ಬರೆದಿರುವುದಕ್ಕೂ ಮುಂದೆ ಬರೆಯಬಹುದಾದುದಕ್ಕೂ ಜನರು ನನ್ನನ್ನು ದೂಷಿಸುವರು. ನಾನು ನಿರ್ದೋಷಿಯಾದುದರಿಂದ ಜನರು ದೂಷಿಸಿದರೆ ನೀನಾ ವಿಚಾರವಾಗಿ ಕೊರತೆಪಡಬೇಡ. ನಿನಗಿಷ್ಟ ಬಂದಾಗ ಕಾಗದವನ್ನು ಬರೆಯುತ್ತಿರು.

ನೀನು ಹೊರಟುಹೋಗುತ್ತಿ. ನೀನೊಮ್ಮೆಗೆ ಈ ದೇಶವನ್ನು ಬಿಟ್ಟು

ಹೋಗುತ್ತಿ. ನವಿಬ್ಮಾ ಪಠಾನರು ಶಾಂತಸ್ವಭಾವದವರಲ್ಲ. ಆದುದರಿಂದ ಪುನಃ ನೀನೀ ದೇಶಕ್ಕೆ ಬರಬೇಕಾದ ಸಂಭವವೇ ಹೆಚ್ಚಾಗಿದೆ. ಆದರೆ ನೀನಾಗ ನನ್ನನ್ನು ನೋಡಲಾರೆ. ನಾನು ಮನಸ್ಸಿನಲ್ಲಿ ಪುನಃಪುನಃ ಚಿಂತಿಸಿ ಹಾಗೆ ಸ್ಥಿರಮಾಡಿಕೊಂಡಿದ್ದೇನೆ. ಹೆಂಗಸರ ಮನಸ್ಸು ಅತ್ಯಂತ ದುರ್ದಮ್ಯವಾದುದರಿಂದ ಅದರಲ್ಲಿಯೂ ಹೆಚ್ಚು ನಂಬಿಕೆಯನ್ನಿಡಕೂಡದು.

ಮತ್ತೆ ಒತ್ತಡವೆ ನಿನ್ನನ್ನು ನೋಡಬೇಕೆಂದು ಇಷ್ಟವುಳ್ಳವಳಾಗಿದ್ದೇನೆ. ನೀನೀ ಪ್ರದೇಶದಲ್ಲಿ ವಿವಾಹವನ್ನು ಮಾಡಿಕೊಂಡರೆ ನನಗೆ ವರ್ತಮಾನವನ್ನು ಕೊಡು. ನಾನು ನಿನ್ನ ವಿವಾಹಕಾಲದಲ್ಲಿದ್ದು ನೋಡುವೆನು. ನಿನಗೆ ಮಹಿಷಿಯಾಗುವ ಆ ಪುಣ್ಯಾತ್ಮಳಿಗೆ ಸಲುವಾಗಿ ಕೆಲವು ಸಾಮಾನ್ಯವಾದ ಅಲಂಕಾರಗಳನ್ನು ಸಂಗ್ರಹಮಾಡಿಕೊಂಡಿದೇನೆ. ಸಮಯ ಸಿಕ್ಕರೆ ನನ್ನ ಸ್ವಹಸ್ತದಿಂದ ಅವಳಿಗಾ ಅಲಂಕಾರಗಳನ್ನು ತೊಡಿಸಿ ಬರುವೆನು.

ಮತ್ತೊಂದು ಪ್ರಾರ್ಥನೆ—ನಿನಗೆ ಆಯಿಷೆಯ ಮರಣ ಸಮಾಚಾರವು ಬಂದಾಗ ಕೂಡಲೆ ನೀನೊಮ್ಮೆ ಈ ದೇಶಕ್ಕೆ ಬರಬೇಕು. ಬಂದು ನಿನ್ನ ಹೆಸರಿನೊಂದು ಪೆಟ್ಟಿಗೆಯನ್ನು ತೆಗೆದು ಅದರಲ್ಲಿರುವುದನ್ನು ನನಗೆ ಸಲುವಾಗಿ ಗ್ರಹಣ ಮಾಡು. ಪಿತನ ಸ್ನೇಹಾತಿಶಯದ ಕನ್ಯೆಯಾಗಿ ನಾನು ಅಧಿಕಾರಿಣಿಯಾಗಿರುವ ಸಂಪತ್ತು ಧನಹೀನವಾದೀ ದರಿದ್ರದೇಶದಲ್ಲಿ ಅತುಳೈಶ್ವರ್ಯವೆಂದು ಗಣ್ಯವಾಗಿರುವುದು. ಅಂಬರವಂಶದಲ್ಲದು ಅಗ್ರಾಹ್ಯವಾಗದಿದ್ದರೆ ಅದನ್ನು ನಿನ್ನಧೀನಮಾಡಿಕೊ. ದಾನಪತ್ರವೂ ಅದೇ ಪೆಟ್ಟಿಗೆಯಲ್ಲಿರುವುದು.

ಮತ್ತೇನು ಬರೆಯಲಿ ? ಹೆಚ್ಚು ಬರೆಯಲಿಷ್ಟವಿದೆ. ಆದರೆ ನಿಷ್ಪ್ರಯೋಜನ, ಜಗದೀಶ್ವರನು ನಿನ್ನನ್ನು ಸುಖಿಯಾಗಿಟ್ಟಿರಲಿ. ಆಯಿಷೆಯ ಸಮಾಚಾರವನ್ನು ಮನಸ್ಸಿನಲ್ಲಿ ಹಚ್ಚಿಕೊಂಡು ಆವಾಗಲೂ ದುಃಖಿತನಾಗಬೇಡ—ಇತಿ.''

ಜಗತ್ಸಿಂಹನು ಕಾಗದವನ್ನೋದಿ ಅಳುವುದಕ್ಕೆ ತೊಡಗಿ ಬಹಳ ಹೊತ್ತು ಕಾಗದವನ್ನು ಕೈಯಲ್ಲಿ ಹಿಡಿದುಕೊಂಡು ಮೇಲಕ್ಕೂ ಕೆಳಕ್ಕೂ ಶತಪಥ ತಿರುಗುತಿದ್ದನು. ಬಳಿಕ ಬೇಗನೆ ಒಂದು ಕಾಗದವನ್ನು ತೆಗೆದುಕೊಂಡು ಕೆಳಗಣ ಉತ್ತರವನ್ನು ಬರೆದು ದೂತನ ಕೈಯಲ್ಲಿ ಕೊಟ್ಟು ಕಳುಹಿದನು.

''ಆಯಿಷೆ! ನೀನು ರಮಣೀರತ್ನವು. ಪ್ರಪಂಚವು ಆವಾಗಲೂ ಕ್ಲೇಶದಾಯಕವಾಗಿರಬೇಕೆಂಬುದೇ ಈಶ್ವರಸಂಕಲ್ಪವೆಂದು ತೋರುತ್ತದೆ. ನಿನ್ನಾವ ಮಾತಿಗೂ ಪ್ರತ್ಯುತ್ತರವನ್ನು ಹೇಳಲಶಕ್ತನಾಗಿದ್ದೇನೆ. ನಿನ್ನ ಪತ್ರವನ್ನೋದಿ ನಾನು ಅತ್ಯಂತ ಕಾತರನಾಗಿದ್ದೇನೆ. ಇಷ್ಟರಮಟ್ಟಿಗೆ ತಿಳಿ; ಏನೆಂದರೆ ನಾನು ನಿನ್ನನ್ನು ಚಿರಕಾಲ ನನ್ನ ಪ್ರಾಣಾಧಿಕೆಯಾದ ಸೋದರಿಯೆಂದು ತಿಳಿದಿರುವೆನು—ಇತಿ.''

ದೂತನು ಕಾಗದವನ್ನು ಆಯಿಷೆಗೆ ಕೊಡಲು ತೆಗೆದುಕೊಂಡು ಹೊರಟು ಹೋದನು.

## ಇಪ್ಪತ್ತನೆಯ ಪರಿಚ್ಛೇದ

## ನಿರ್ವಾಣೋನ್ಮುಖ ದೀಪ

ತಿಲೋತ್ತಮೆಯು ಅಯಷೆಯಿಂದ ಬೀಳ್ಕೊಂಡು ಆಶ್ಮನಿಯ ಸಂಗಡ ಹೊರಟು ಹೋದ ಬಳಿಕ ಅವಳ ಸಮಾಚಾರವು ಆರಿಗೂ ತಿಳಿಯಲಿಲ್ಲ. ತಿಲೋತ್ತಮೆ, ವಿಮಲೆ, ಆಶ್ಮನಿ, ಅಭಿರಾಮಸ್ವಾಮಿ ಮುಂತಾದವರು ಎಲ್ಲಿಗೆ ಹೋದರೋ ಅದನ್ನಾರೂ ಗೊತ್ತುಮಾಡದೆ ಹೋದರು. ಮೊಗಲರಿಗೂ ಪಠಾಣರಿಗೂ ಸಂಧಿ ಸಂಬಂಧವಾದ ಬಳಿಕ, ವೀರೇಂದ್ರಸಿಂಹನಿಗೂ ಅವರ ಪರಿಜನರಿಗೂ ಸಂಭವಿಸಿದ ಅಶ್ರುತಪೂರ್ವ ವಿಪತ್ತನ್ನು ಕೇಳಿ, ಉಭಯಪಕ್ಷದವರೂ ವೀರೇಂದ್ರಸಿಂಹನ ಪತ್ನಿ, ಕನ್ಯೆ, ಅನುಚರರು ಮುಂತಾದವರನ್ನು ಅನುಸಂಧಾನಮಾಡಿ ಪುನಃ ಅವರನ್ನು ಮಂದಾರಣದುರ್ಗದಲ್ಲಿ ಅವರ ಪೂರ್ವ ಪದವಿಯಲ್ಲಿ ಸ್ಥಾಪಿಸಬೇಕೆಂದು ಸಮ್ಮತರಾಗಿ, ಉಸ್ಮಾನ್, ಖ್ವಾಜಾಯಿಸಾ, ಮಾನಸಿಂಹ ಪ್ರಭೃತಿಗಳೆಲ್ಲರೂ ವಿಶೇಷ ಪ್ರಯತ್ನಪಟ್ಟು ಅನುಸಂಧಾನಮಾಡಿದರು. ಆದರೆ ತಿಲೋತ್ತಮೆಯು ಅಯಷೆಯನ್ನು ಬಿಟ್ಟು ಆಶ್ಮನಿಯ ಸಂಗಡ ಹೊರಟುಹೋದವರೆಗಿನ ಸಮಾಚಾರ ಹೊರತು ಮುಂದಾವದೂ ಗೊತ್ತಾಗಲಿಲ್ಲ. ಕಡೆಗೆ ಮಾನಸಿಂಹನು ನಿರಾಶನಾಗಿ ತನ್ನ ವಿಶ್ವಾಸಪಾತ್ರನಾಗಿದ್ದೊಬ್ಬ ಅನುಚರನನ್ನು ಮಂದಾರಣ ದುರ್ಗಕ್ಕೆ ಅಧಿಪತಿಯನ್ನಾಗಿ ನಿಯಮಿಸಿ, ಅವನಲ್ಲಿದ್ದು, ಮೃತ ಜಹಗೀರುದಾರನ ಹೆಂಡತಿಯನ್ನೂ ಮಗಳನ್ನೂ ಅನುಸಂಧಾನಮಾಡಿ ಅವರನ್ನು ದುರ್ಗಾಧಿಕಾರಿಗಳನ್ನಾಗಿ ಸ್ಥಾಪಿಸಿ ಬರಬೇಕೆಂದು ಅಪ್ಪಣೆಮಾಡಿ, ಅದಕ್ಕಾಗಿ ಅವನಿಗೆ ಬೇರೆ ಜಹಗೀರನ್ನು ಕೊಡುವುದಾಗಿಯೂ ಹೇಳಿ, ಮಾನಸಿಂಹನು ಪಾಟ್ನಾನಗರಕ್ಕೆ ಹೊರಡುವುದಕ್ಕನುವಾದನು.

ಕತಲೂಖಾನನು ತನ್ನ ಮರಣಕಾಲದಲ್ಲಿ ಹೇಳಿದ ಮಾತುಗಳನ್ನು ಕೇಳಿ, ಜಗತ್ಸಿಂಹನ ಹೃದಯದಲ್ಲಿ ಭಾವಾಂತರೋದಯವಾಯಿತೋ ಇಲ್ಲವೋ ಅದಾವದೂ ಪ್ರಕಾಶವಾಗಲಿಲ್ಲ. ಜಗತ್ಸಿಂಹನೂ ವಿಶೇಷ ಅರ್ಥವ್ಯಯದಿಂದಲೂ ಶಾರೀರಕಕ್ಲೇಶದಿಂದಲೂ ಅವರನುಸಂಧಾನವನ್ನು ಮಾಡಿದನು. ಆದರೆ ಅವನ ಪ್ರಯತ್ನವು ಕೇವಲ ಪೂರ್ವಸಂಬಂಧದ ಸ್ಮೃತಿಜನಿತವಾದುದೋ ಅಥವಾ ಆವ ಕಾರಣದಿಂದ ಮಾನಸಿಂಹ ಪ್ರಭೃತಿಗಳು ಅವರನುಸಂಧಾನದಲ್ಲಿ ಯತ್ನಪಟ್ಟರೋ ಅಂತಹ ಕಾರಣಸಂಭೂತವಾದುದೋ, ಅಥವಾ ಪುನಸ್ಸಂಚಾಲಿತ ಪ್ರೇಮಾನುರೋಧದಿಂದುತ್ಪನ್ನವಾದುದೋ, ಅದಾವದೂ ಗೊತ್ತಾಗಲಿಲ್ಲ; ಅವನ ಪ್ರಯತ್ನವೂ ಅದಾವಕಾರಣದಿಂದುಂಟಾಗಿದ್ದರೂ ವಿಫಲವಾಯಿತು.

ಜಗತ್ಸಿಂಹನು ಮಾರನೆಯ ದಿನ ಶಿಬಿರವನ್ನು ಬಿಟ್ಟು ಹೊರಡಬೇಕಾದ ದಿನವಾಗಿದ್ದಿತು. ಹೊರಡುವುದಕ್ಕೆ ಹಿಂದಿನ ದಿನ ಕುದುರೆಯ ಲಗಾಮಿಗೆ ಕಟ್ಟಿದ

ಕಾಗದವನ್ನೋದಬೇಕಾಗಿದ್ದ ದಿನವಾಗಿದ್ದಕಾರಣ ರಾಜಕುಮಾರನು ಕೌತೂಹ ಲಾಕ್ರಾಂತನಾಗಿ ಕಾಗದವನ್ನು ಬಿಚ್ಚಿ ಓದಿದನು. ಅದರಲ್ಲಿ ಸ್ವಲ್ಪವೇ ಬರೆದಿದ್ದಿತು—

"ಧರ್ಮಭೀತನಾಗಿ ಬ್ರಹ್ಮಶಾಪಕ್ಕೆ ಭಯಪಡುವವನಾಗಿದ್ದರೆ ಪತ್ರವನ್ನು ಪಾಠಮಾಡುತ್ತಲೇ ಈ ಸ್ಥಳಕ್ಕೆ ನೀನೊಬ್ಬನೇ ಹೊರಟು ಬರುವೆ—ಇತಿ.

ಅಹಂ ಬ್ರಾಹ್ಮಣಃ"

ರಾಜಪುತ್ರನು ಪತ್ರವನ್ನೋದಿ ಚಮತ್ಕೃತನಾಗಿ, ಮನಸ್ಸಿನಲ್ಲೊಮ್ಮೆ ಶತ್ರುವಿನ ಉಪಾಯವಿರಬಹುದೆಂದು ಯೋಚಿಸಿದನು. 'ಹೋಗುವುದುಚಿತವೆ?' ಎಂದು ಯೋಚಿಸಿದನು. ರಾಜಪೂತರ ಹೃದಯದಲ್ಲಿ ಬ್ರಹ್ಮಶಾಪಕ್ಕಿಂತ ಹೆಚ್ಚು ಭಯವನ್ನುಂಟುಮಾಡುವುದು ಮತ್ತಾವುದೂ ಇಲ್ಲವಾದ ಕಾರಣ ಹೋಗುವುದೇ ಯುಕ್ತವೆಂದು ಸ್ಥಿರಮಾಡಿದನು. ಅತಏವ ತನ್ನನುಚರರನ್ನು ಕುರಿತು, 'ನಾನು ನಿಮ್ಮೊಂದಿಗೆ ಬರಲು ಅನನುಕೂಲವಾಗಿದೆ, ಸೈನ್ಯವು ಮುಂದೆ ಹೋಗುತ್ತಿರಲಿ ಬಾಧಕವಿಲ್ಲ, ನಾನು ವರ್ಧಮಾನ ಅಥವಾ ರಾಜಮಹಲಿಗೆ ಬಂದು ಸೇರುವೆನು. ನೀವು ಮುಂದುವರಿದು ಹೋಗಿರಿ' ಎಂದು ಹೇಳಿ ಅಪ್ಪಣೆಯನ್ನು ಕೊಟ್ಟು ಕಳುಹಿದನು.

ಅಪ್ಪಣೆಯನ್ನು ಕೊಟ್ಟು ಜಗತ್ಸಿಂಹನೊಬ್ಬನೇ ಶಾಲವನಾಭಿಮುಖವಾಗಿ ಹೊರಟನು.

ಜಗತ್ಸಿಂಹನು ಮೇಲೆ ಹೇಳಿದ್ದ ಹಳೇ ಅರಮನೆಯ ಬಾಗಲಿಗೆ ಬಂದು ಮೊದಲಿನಂತೆ ಶಾಲವೃಕ್ಷಕ್ಕೆ ಕುದುರೆಯನ್ನು ಕಟ್ಟಿದನು. ಅಲ್ಲಲ್ಲಿ ಸುತ್ತು ನೋಡಿ ದನು. ಪ್ರಾಣಿಮಾತ್ರವಾದರೂ ಇರಲಿಲ್ಲ; ಅರಮನೆಯೊಳಗೆ ಪ್ರವೇಶಿಸಿದನು. ಪ್ರಾಂಗಣದಲ್ಲಿ ಮೊದಲಿನಂತೆ ಒತ್ತಟ್ಟು ಸಮಾಧಿಯೂ ಬೇರೊತ್ತಟ್ಟು ಚಿತೆಯೂ ಇದ್ದುವು. ಚಿತೆಯ ಕಾಷ್ಠದ ಮೇಲೆ ಬ್ರಾಹ್ಮಣನೊಬ್ಬನು ಕುಳಿತಿದ್ದನು. ಬ್ರಾಹ್ಮಣನು ಅಧೋಮುಖಿಯಾಗಿ ರೋದನಮಾಡುತಿದ್ದನು.

ರಾಜಕುಮಾರನು ಬ್ರಾಹ್ಮಣನನ್ನು ಕುರಿತು, 'ಮಹಾಶಯರೆ! ನನಗೇಕೆ ಇಲ್ಲಿಗೆ ಬರಬೇಕೆಂದು ಆಜ್ಞೆಯನ್ನು ಮಾಡಿದಿರಿ?' ಎಂದು ಕೇಳಿದನು.

ಬ್ರಾಹ್ಮಣನು ಮುಖವೆತ್ತಿ ನೋಡುತ್ತಲೇ, ರಾಜಪುತ್ರನವನನ್ನು ಅಭಿ ರಾಮಸ್ವಾಮಿಯೆಂದು ತಿಳಿದನು. ಅವನನ್ನು ನೋಡಿ ರಾಜಪುತ್ರನ ಹೃದಯ ದಲ್ಲಿ ವಿಸ್ಮಯವೂ ಕೌತೂಹಲವೂ ಆಹ್ಲಾದವೂ ಏಕಕಾಲದಲ್ಲಿ ಆವಿರ್ಭಾವ ವಾದವು. ಆಗವನು ಬ್ರಾಹ್ಮಣನಿಗೆ ಪ್ರಣಾಮವನ್ನು ಮಾಡಿ, ಆತುರದಿಂದ, 'ತಮ್ಮನ್ನು ಹುಡುಕಿದ ಬಗೆಯನ್ನು ಬಣ್ಣಿಸಲಾರೆನು; ಈಗಿಲ್ಲಿರಲು ಕಾರಣವೇನು?' ಎಂದು ಕೇಳಿದನು.

ಅಭಿರಾಮಸ್ವಾಮಿಯು ಕಣ್ಣೊರಸಿಕೊಂಡು, 'ಪ್ರಕೃತದಲ್ಲಿ ಇಲ್ಲಿಯೇ ವಾಸ' ಎಂದನು.

ಅಭಿರಾಮಸ್ವಾಮಿಯು ಮಾತನ್ನು ಮುಗಿಸುವುದರೊಳಗೆ, ರಾಜಕುಮಾರನು, 'ನನ್ನ ಸ್ಮರಣೆಯನ್ನು ಮಾಡಿದಿರೇಕೆ? ರೋದನವೇಕೆ?' ಎಂದು ಮುಂತಾಗಿ ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ಮಾಡತೊಡಗಿದನು.

ಅಭಿರಾಮಸ್ವಾಮಿಯು, 'ರೋದನಕ್ಕಾವಕಾರಣವೋ ಅದೇ ಕಾರಣಕ್ಕೆ ಸಲುವಾಗಿ ನಿನ್ನನ್ನು ಬರಹೇಳಿದನು; ತಿಲೋತ್ತಮೆಗೆ ಮೃತ್ಯುಕಾಲವು ಉಪಸ್ಥಿತವಾಗಿದೆ' ಎಂದನು.

ಅದನ್ನು ಕೇಳಿ ಯೋದ್ಧೃಪತಿಗೆ ಮೈ ನಡುಗಿ ನಿಲ್ಲಲಾರದವನಾಗಿ ಅದುರುತ್ತ ಮೆಲ್ಲಮೆಲ್ಲನೆ ನೆಲದ ಮೇಲೆ ಉಪಾಯದಿಂದ ಕುಳಿತುಕೊಂಡನು. ಆಗೆಲ್ಲವೂ ಆದ್ಯೋಪಾಂತವಾಗಿ ಅವನ ಸ್ಮೃತಿಗೆ ಬಂದವು. ಪೂರ್ವದಾಸ್ಮೃತಿಯು ಒಂದೊಂದಾಗಿ ಅವನ ಹೃದಯವನ್ನು ತೀಕ್ಷ್ಣಧಾರೆಯುಳ್ಳ ಛುರಿಕದಂತೆ ದಾರುಣವಾಗಿ ಆಘಾತಮಾಡಲಾರಂಭಿಸಿತು. ದೇವಾಲಯದಲ್ಲಿ ಪ್ರಥಮ ದರ್ಶನ—ಶೈಲೇಶ್ವರನ ಸಮಕ್ಷಮದಲ್ಲಿ ಮಾಡಿದ ಪ್ರತಿಜ್ಞೆ—ಕೊಟಡಿಯಲ್ಲಿ ಪ್ರಥಮ ಪರಿಚಯದಲ್ಲಿ ಉಭಯರಿಗೂ ಉಂಟಾದ ಪ್ರೇಮೋತ್ಥಿತ ಅಶ್ರುಜಲ—ಆ ಕಾಳರಾತ್ರಿಯ ಘಟನೆ—ತಿಲೋತ್ತಮೆಯ ಮೂರ್ಛಾವಸ್ಥೆಯ ಮುಖ—ಯವನಾಗಾರದಲ್ಲಿ ತಿಲೋತ್ತಮೆಯ ಪೀಡನೆ—ಕಾರಾಗಾರದಲ್ಲಿ ತನ್ನ ಸ್ವಂತ ನಿರ್ದಯವಾದ ವ್ಯವಹರಣೆ—ಕಟ್ಟಕಡೆಗೆ ವನವಾಸದಲ್ಲಿ ಮರಣ—ಇವೆಲ್ಲವೂ ಒಂದೊಂದಾಗಿ ಸ್ಮೃತಿಗೆ ಬಂದು ರಾಜಕುಮಾರನ ಹೃದಯವನ್ನು ಪ್ರಚಂಡ ಚಂಡಮಾರುತದಾಘಾತದಂತೆ ಹೊಡಿಯುತಿದ್ದಿತು. ಮೊದಲ ಬೆಂಕಿಯು ಶತಗುಣ ಅಧಿಕವಾದ ಪ್ರಚಂಡ ಜ್ವಾಲೆಯಿಂದ ಜ್ವಲಿಸುತ ಮೇಲಕ್ಕೆದ್ದಿತು.

ರಾಜಪುತ್ರನು ಅನೇಕ ಕ್ಷಣಗಳತನಕ ಜಡನಾಗಿ ಕುಳಿತಿದ್ದನು. ಅಭಿರಾಮಸ್ವಾಮಿಯು ಪುನಃ ಹೇಳತೊಡಗಿದನು:—

'ವಿಮಲೆಯು ಯವನನನ್ನಾವ ದಿನ ವಧೆಮಾಡಿ ತನ್ನ ವೈಧವ್ಯದ ಪ್ರತಿಶೋಧೆಯನ್ನು ಮಾಡಿದಳೋ ಅಂದಿನಾರಭ್ಯ ನಾನು ಮಗಳನ್ನೂ ದೌಹಿತ್ರಿಯನ್ನೂ ಸಂಗಡ ಕರೆದುಕೊಂಡು ಯವನನ ಭಯದಿಂದ ಅಜ್ಞಾತವಾಸದಲ್ಲಿ ನಾನಾ ಸ್ಥಳಗಳಲ್ಲಿ ಭ್ರಮಣಮಾಡುತಿದ್ದೆನು. ಅಂದಿನ ಮೊದಲ್ಗೊಂಡು ತಿಲೋತ್ತಮೆಗೆ ರೋಗಕ್ಕೆ ಪ್ರಾರಂಭವಾಯಿತು. ರೋಗವಾವ ಕಾರಣದಿಂದ ಪ್ರಾಪ್ತವಾಯಿತೋ ಅದನ್ನು ನೀನು ಚೆನ್ನಾಗಿ ಬಲ್ಲೆ.'

ಜಗತ್ಸಿಂಹನ ಹೃದಯದಲ್ಲಿ ಭರ್ಜಿಯನ್ನಿಟ್ಟು ಇರಿದಂತಾಯಿತು.

"ತದಾರಭ್ಯ ಅವಳನ್ನು ಅನೇಕ ಸ್ಥಳಗಳಲ್ಲಿಟ್ಟುಕೊಂಡು ಬಹು ವಿಧವಾಗಿ ಚಿಕಿತ್ಸೆಯನ್ನು ಮಾಡಿದೆನು. ನಾನು ಯೌವನಾವಧಿ ನಿದಾನ ಮುಂತಾದ ಚಿಕಿತ್ಸೆಯ ಶಾಸ್ತ್ರಗಳನ್ನು ಸಾಂಗವಾಗಿ ಅಧ್ಯಯನ ಮಾಡಿದವನು; ಅನೇಕ ರೋಗಗಳಿಗೆ ಚಿಕಿತ್ಸೆಯನ್ನು ಮಾಡಿದವನು; ಇತರರಿಗೆ ತಿಳಿಯದ ಔಷಧಗಳನ್ನು ಬಲ್ಲ

ವನು ; ಆದರೆ ಹೃದಯದಲ್ಲಿ ನಾಟಿರುವ ವ್ಯಸನಜನಿತವಾದ ರೋಗಕ್ಕೆ ವೈದ್ಯನಾವ ಪ್ರತೀಕಾರವನ್ನೂ ಮಾಡನು ; ಈ ಸ್ಥಳವು ನಿರ್ಜನವಾಗಿದ್ದುದನ್ನು ಕಂಡು ಆ ಮನೆಯೊಳಗೆ ಒತ್ತಟ್ಟು ಆರೇಳು ದಿನಗಳಿಂದ ವಾಸಮಾಡುತ್ತಿದ್ದೇವೆ. ದೈವಯೋಗದಿಂದ ನೀನಿಲ್ಲಿಗೆ ಒಂದುದನ್ನು ನೋಡಿ, ನಿನ್ನ ಕುದುರೆಯ ಲಗಾಮಿಗೆ ಆ ಕಾಗದವನ್ನು ಕಟ್ಟಿದೆನು. ಮೊದಲಿನಿಂದಲೂ ನನಗಿದ್ದ ಇಷ್ಟವೇನೆಂದರೆ, ತಿಲೋತ್ತಮೆಯನ್ನು ರಕ್ಷಿಸಲಸಾಧ್ಯವಾದರೆ ಅಂತ್ಯಕಾಲದಲ್ಲೊಮ್ಮೆ ನಿನ್ನ ದರುಶನವನ್ನು ಮಾಡಿಸಿ ಅವಳ ಅಂತಃಕರಣವನ್ನು ತೃಪ್ತಿಗೊಳಿಸಬೇಕೆಂದಿದ್ದೆನು. ಆದುದರಿಂದ ನೀನಿಲ್ಲಿಗೆ ಬರಬೇಕೆಂದು ಬರೆದನು. ಬರೆದಾಗವಳ ಆರೋಗ್ಯದಲ್ಲಿ ನಿರಾಶನಾಗಿರಲಿಲ್ಲ. ಆದರೆ ಎರಡು ದಿನಗಳಲ್ಲಿ ರೋಗವು ಉಪಶಮನವಾಗದಿದ್ದರೆ ಚರಮ ಕಾಲವು ಉಪಸ್ಥಿತವಾಗುವುದೆಂದು ತಿಳಿದಿದ್ದೆನಾಗಿ ಎರಡು ದಿನಗಳ ಬಳಿಕ ಕಾಗದವನ್ನೋದಬೇಕೆಂದು ಬರೆದಿದ್ದೆನು. ನಾನು ಮೊದಲು ಯೋಚಿಸಿದಂತೆ ಮರಣಕಾಲವು ಸಂಪ್ರಾಪ್ತವಾಗಿದೆ. ತಿಲೋತ್ತಮೆಯ ಪ್ರಾಣದ ಆಶೆಯು ಹೆಚ್ಚೇನೂ ಉಳಿದಿಲ್ಲ. ಜೀವನ ದೀಪವು ನಿರ್ವಾಣೋನ್ಮುಖವಾಗಿದೆ.''

ಹೀಗೆಂದು ಹೇಳಿ ಅಭಿರಾಮಸ್ವಾಮಿಯು ರೋದನ ಮಾಡತೊಡಗಿದನು. ಜಗತ್ಸಿಂಹನೂ ರೋದನ ಮಾಡುತಿದ್ದನು.

ಸ್ವಾಮಿಯು ಪುನಃ ಹೇಳತೊಡಗಿದನು :— ''ನೀನು ಒಮ್ಮಿಂದೊಮ್ಮೆ ತಿಲೋತ್ತಮೆಯೆದುರಿಗೆ ಹೋಗಕೂಡದು. ಅವಳಾ ಅವಸ್ಥೆಯಲ್ಲಿ ಉಲ್ಲಾಸಾಧಿಕ್ಯವುಂಟಾಗಿ ಅವಳದನ್ನು ಸಹಿಸಲಾರದೆಹೋದರೆ ಮಾಡುವದೇನು ? ಮೊದಲು ಹೋಗಿ ನಾನವಳಿಗೆ ನೀನು ಬಂದಿರುವುದಾಗಿ ಹೇಳುವೆನು. ನೀನು ಬರುವ ಸಂಭವವುಂಟೆಂತಲೂ ಹೇಳಿದ್ದೇನೆ ; ಈಗ ಹೋಗಿ ನೀನು ಬಂದಿರುವ ಸಮಾಚಾರವನ್ನವಳಿಗೆ ತಿಳಿಸುವೆನು; ಬಳಿಕ ನೀನು ಹೋಗಿ ನೋಡು'' ಎಂದು ಹೇಳಿ, ಪರಮಹಂಸನು ಅರಮನೆಯ ಅಂತಃಪುರದೊಳಗೆ ಹೋದವನು ಸ್ವಲ್ಪ ಹೊತ್ತಿನಲ್ಲಿ ಹಿಂದಿರುಗಿ ಬಂದು ರಾಜಕುಮಾರನಿಗೆ ಬರಬಹುದೆಂದು ಹೇಳಿದನು.

ರಾಜಕುಮಾರನು ಪರಮಹಂಸನ ಸಂಗಡ ಅಂತಃಪುರಾಭಿಮುಖವಾಗಿ ಹೋದನು. ಒಳಗಡೆ ಪೂರಾ ಬಿದ್ದುಹೋಗಿದ್ದೊಂದು ಕೊಟಡಿ, ಆ ಕೊಟಡಿಯಲ್ಲೊತ್ತಟ್ಟು ಜೀರ್ಣವಾದೊಂದು ಮುರಿದ ಮಂಚ ; ಅದರ ಮೇಲೆ ವ್ಯಾಧಿಯಿಂದ ಕೃಶಳಾದ ಅನತಿವಿಲುಪ್ತ ರೂಪರಾಶಿಯನುಳ್ಳ ತಿಲೋತ್ತಮೆಯು ಮಲಗಿದ್ದುದನ್ನು ನೋಡಿದನು. ಆಗಲೂ ಪೂರ್ವಲಾವಣ್ಯದ ಮೃದುಳತರವಾದ ಪ್ರಭೆಯು ಪರಿವೇಷ್ಟಿತಳಾಗಿದ್ದಳು,—ನಿರ್ಯಾಣೋನ್ಮುಖ ಪ್ರಭಾತದ ತಾರೆಯಂತೆ ಮನವ ಮೋಹಗೊಳಿಸುವಂತಿದ್ದಳು. ಪಾರ್ಶ್ವದಲ್ಲೊಬ್ಬ ವಿತಂತುವು ಕುಳಿತು ಕೈಯಿಂದ ಮೆಲ್ಲನೆ ಬೀಸುತಲಿದ್ದಳು. ಅವಳು ನಿರಾಭರಣೆಯಾಗಿಯೂ ಮಲಿನವಸನ ಧಾರಿಣಿಯಾಗಿಯೂ ದೀನ ವಿತಂತುವಾಗಿಯೂ ಇದ್ದಳು. ರಾಜಕುಮಾರನು ಮೊದ

ಲವಳ ಗುರುತನ್ನು ಹಿಡಿಯಲಾರದೆ ಹೋದನು. ಗುರುತಾದೀತು ಹೇಗೆ? ಸ್ಥಿರಯೌವನೆಯಾಗಿದ್ದವಳು ಈಗ ಪ್ರಾಚೀನೆಯಾಗಿದ್ದಾಳೆ.

ರಾಜಕುಮಾರನು ಬಂದು ತಿಲೋತ್ತಮೆಯ ಶಯ್ಯಾಪಾರ್ಶ್ವದಲ್ಲಿ ನಿಂತನು. ಆಗವಳ ಕಣ್ಣುಗಳು ಮುಚ್ಚಿದ್ದುವು. ಅಭಿರಾಮಸ್ವಾಮಿಯು, 'ತಿಲೋತ್ತಮೆ! ರಾಜಕುಮಾರ ಜಗತ್ಸಿಂಹನು ಬಂದಿದ್ದಾನೆ' ಎಂದು ಕೂಗಿ ಹೇಳಿದನು.

ತಿಲೋತ್ತಮೆಯು ಕಣ್ಣುಗಳನ್ನು ತೆರೆದು ಜಗತ್ಸಿಂಹನನ್ನು ಕಣ್ಣೆರಿಸಿ ನೋಡಿದಳು. ಆ ದೃಷ್ಟಿಯಲ್ಲಿ ತಿರಸ್ಕರಣಾಭಿಲಾಷೆಯ ಚಿಹ್ನೆ ಲೇಶವೂ ಇರಲಿಲ್ಲ. ತಿಲೋತ್ತಮೆಯು ದೃಷ್ಟಿಸಿ ನೋಡಿ ಕೂಡಲೇ ದೃಷ್ಟಿಯನ್ನು ತಗ್ಗಿಸಿದಳು. ನೋಡುತ್ತಿದ್ದ ಹಾಗೆ ಅವಳ ಕಣ್ಣುಗಳಲ್ಲಿ ಅನರ್ಗಳವಾಗಿ ಅಶ್ರುಧಾರೆಯು ಸುರಿಯಲಾರಂಭವಾಯಿತು. ರಾಜಕುಮಾರನು ತಾಳಲಾರದೆ ಹೋದನು; ಲಜ್ಜೆಯು ದೂರವಾಯಿತು. ಆಗವನು ತಿಲೋತ್ತಮೆಯ ಪದಪ್ರಾಂತದಲ್ಲಿ ಕುಳಿತು ನೀರವವಾಗಿ ನಯನಾಸಾರದಿಂದ* ಅವಳ ದೇಹ ಲತೆಯನ್ನು ತೊಯಿಸುತಿದ್ದನು.

---

## ಇಪ್ಪತ್ತೊಂದನೆಯ ಪರಿಚ್ಛೇದ

## ಸಫಲ ನಿಷ್ಫಲ ಸ್ವಪ್ನಂ

ತಂದೆಯಿಲ್ಲದ ಅನಾಥೆಯು ರುಗ್ಣಶಯ್ಯೆಯಲ್ಲಿ ಮಲಗಿದ್ದಾಳೆ! ಜಗತ್ಸಿಂಹನು ಅವಳ ಪಾರ್ಶ್ವದಲ್ಲಿ ಕುಳಿತಿದ್ದಾನೆ!! ಹಗಲು ಕಳೆಯಿತು. ರಾತ್ರಿಯಾಯಿತು. ಪುನಃ ಹಗಲು ಬಂದು ಹೋಯಿತು. ಪುನಃ ರಾತ್ರಿಯು ಬಂದಿತು. ರಜಪೂತ ಕುಲಕ್ಕೆ ತಿಲಕಾಯಮಾನನಾದವನು ಅವಳ ಮುರಿದಿದ್ದ ಮಂಚದ ಪಕ್ಕದಲ್ಲಿ ಕುಳಿತು ಶುಶ್ರೂಷೆಯನ್ನು ಮಾಡುತಿದ್ದಾನೆ!!! ದೀನಳಾದಾ ವಿಧವೆಯು ಶಬ್ದವಿಹೀನಳಾಗಿ ಶುಶ್ರೂಷೆಯ ಕೆಲಸಕ್ಕೆ ಬೇಕಾದ ಸಹಾಯವನ್ನೆಡಬಿಡದೆ ಮಾಡುತಿದ್ದಾಳೆ. ರೋಗದಿಂದ ಕೃಶಳಾದಾ ದುಃಖಿನಿಯು ತನ್ನನ್ನು ನೋಡುವಳೆ? ಅವಳ ಶಿಶಿರನಿಪೀಡಿತವಾದ ಪದ್ಮಮುಖದಲ್ಲಿ ಪೂರ್ವಕಾಲದಾ ಮಂದಹಾಸವು ತೋರ್ಪಡುವುದೆ? ಎಂಬೀ ಆಕಾಂಕ್ಷೆಯಿಂದ ತದೇಕಾಯತ್ತನಾಗಿ ಅವಳ ಮುಖವನ್ನು ನೋಡುತ ಕುಳಿತಿದ್ದಾನೆ.

ಶಿಬಿರವೆಲ್ಲಿ? ಸೈನ್ಯವೆಲ್ಲಿ? ಶಿಬಿರವು ಭಂಗವಾಗಿ ಸೈನ್ಯವು ಪಾಟ್ನಾನಗರಕ್ಕೆ ಹೊರಟುಹೋಯಿತು! ಅನುಚರರೆಲ್ಲರೂ ಎಲ್ಲಿ? ದಾರುಕೇಶ್ವರ ತೀರದಲ್ಲಿ ಪ್ರಭುವಿನ ಆಗಮನವನ್ನೆದುರು ನೋಡಿಕೊಂಡಿದ್ದಾರೆ!! ಪ್ರಭುವೆಲ್ಲಿದ್ದಾನೆ? ಪ್ರಬಲವಾದ ಆತಪವಿಶೋಷಿತ ಸುಕುಮಾರ ಕುಸುಮಕಲಿಕೆಯನ್ನು ನಯನವಾರಿಯಿಂದ ಸೇಚನೆಮಾಡುತ್ತ ಪುನರುತ್ಫುಲ್ಲ ಮಾಡುವುದರಲ್ಲಿ ವ್ಯಸ್ತನಾಗಿ ಕುಳಿತಿದ್ದಾನೆ!!!

* ನಯನಾಸಾರದಿಂದ=ಕಣ್ಣುಗಳಿಂದ ಹೊರಟು ಬೀಳುತಿದ್ದ ಪ್ರವಾಹದಿಂದ.

ಕುಸುಮಕಲಿಕೆಯು ಕ್ರಮವಾಗಿ ಪುನರುತ್ಫುಲ್ಲವಾಗುತ ಬಂದಿತು. ಇಹ ಸಂಸಾರದಲ್ಲಿ ಮನ್ಮಥನು ಪ್ರಧಾನೈಂದ್ರಜಾಲಕನು! ವ್ಯಾಧಿಯ ಪ್ರತೀಕಾರಕ್ಕೆ ಪ್ರಧಾನ ಔಷಧವು ಪ್ರಣಯವು! ಹಾಗಲ್ಲದಿದ್ದರೆ ಹೃದಯದ ವ್ಯಾಧಿಯನ್ನಾರು ಉಪಶಮನ ಮಾಡಬಲ್ಲರು?

ನಿರ್ವಾಣೋನ್ಮುಖವಾದ ದೀಪವು ಬಿಂದು ಬಿಂದುವಾಗಿ ಬೀಳುವ ತೈಲ ದಿಂದ ಮೆಲ್ಲಮೆಲ್ಲನೆ ನಗುತ ನಗುತ ಹೇಗೇಳುವುದೋ, ಗ್ರೀಷ್ಮಕಾಲದ ಶುಷ್ಕ ವಲ್ಲರಿಯು ಆಷಾಢಮಾಸದ ನವವಾರಿಸೇಚನೆಯಿಂದ ಮೆಲ್ಲಮೆಲ್ಲನೆ ಪುನಃ ಹೇಗೆ ವಿಕಸಿತವಾಗುವುದೋ ಹಾಗೆ ತಿಲೋತ್ತಮೆಯು ಜಗತ್ಸಿಂಹನನ್ನು ಹೊಂದಿ ದಿನೇ ದಿನೇ ಪುನರುಜ್ಜೀವಿತೆಯಾಗುತ್ತಾ ಬಂದಳು.

ಕ್ರಮವಾಗಿ ತಿಲೋತ್ತಮೆಯು ನಿರಾಮಯೆಯಾಗಿ* ಮಂಚದಮೇಲೆದ್ದು ಕುಳಿತುಕೊಳ್ಳಲು ಸಮರ್ಥೆಯಾದಳು. ವಿಮಲೆಯು ಇಲ್ಲದಾಗವಳು ಜಗತ್ಸಿಂಹನ ಹತ್ತಿರ ಹತ್ತಿರ ಕುಳಿತು ಕಳೆದುಹೋದ ದಿನಗಳ ಸಮಾಚಾರವನ್ನು ಹೇಳುವಳು. ತಾನು ಮನಸಾ ಮಾಡಿದ ಅನೇಕ ಅಪರಾಧಗಳನ್ನೊಪ್ಪಿಕೊಳ್ಳುವಳು. ಮನಸ್ಸಿ ನಲ್ಲಿ ಅನ್ಯಾಯವಾದ ಅನೇಕ ಆಶೆಗಳು ಹುಟ್ಟಿ ಅಲ್ಲೇ ವಿಲೀನವಾದುದನೆಲ್ಲಾ ಹೇಳುವಳು. ಜಾಗ್ರತಾವಸ್ಥೆಯಲ್ಲಿಯೂ ನಿದ್ರಾವಸ್ಥೆಯಲ್ಲಿಯೂ ಕಂಡ ಮನೋ ಮೋಹನ ಸ್ವಪ್ನಗಳನ್ನು ಹೇಳುವಳು. ರುಗ್ಣಶಯ್ಯೆಯಲ್ಲಿ ಅಚೇತನಳಾಗಿ ಮಲ ಗಿದ್ದಾಗ ಕಂಡಿದ್ದೊಂದು ಸ್ವಪ್ನವನ್ನು ವಿವರಿಸಿ ಹೇಳಿದಳು :—

ಹೊಸ ವಸಂತದ ಸೊಬಗಿನಿಂದ ಕಂಗೊಳಿಸುತಿದ್ದೊಂದು ಸಣ್ಣ ಬೆಟ್ಟದ ಮೇಲೆ ತಾನು ಜಗತ್ಸಿಂಹನ ಸಂಗಡ ಪುಷ್ಪಕ್ರೀಡೆಯನ್ನು ಮಾಡುತಿದ್ದಹಾಗೂ, ಪುಷ್ಪಚಯನಮಾಡಿ ಸ್ತೂಪಾಕಾರವಾಗಿ ರಾಶಿಮಾಡಿ ಮಾಲೆಗಳನ್ನು ಕಟ್ಟಿ ತಾನೊಂದು ಮಾಲೆಯನ್ನು ಕಂಠದಲ್ಲಿ ಧರಿಸಿಕೊಂಡು ಮತ್ತೊಂದು ಮಾಲೆಯನ್ನು ಜಗತ್ಸಿಂಹನ ಕಂಠದಲ್ಲಿ ಹಾಕಿದಹಾಗೂ, ಜಗತ್ಸಿಂಹನ ಕಟಿಯಲ್ಲಿದ್ದ ಅಸಿಸ್ಪರ್ಶದಿಂ ದವನಿಗೆ ಹಾಕಿದ್ದ ಮಾಲೆಯು ಹರಿದುಹೋದಹಾಗೂ, ಆಗವಳು ಹಾರಕ್ಕೆ ಬದ ಲಾಗಿ ಚರಣಕ್ಕೆ ಸಂಕೋಲೆಯನ್ನು ಮಾಡಿ ಹಾಕುವೆನೆಂದ್ಹು ಹೇಳಿ ಕುಸುಮ ಗಳಿಂದೊಂದು ಸಂಕೋಲೆಯನ್ನು ಮಾಡಿದಹಾಗೂ, ಅದನ್ನವನ ಕಾಲಿಗೆ ತೊಡಿಸ ಲೆತ್ನಿಸಲು ಜಗತ್ಸಿಂಹನು ಸರಿದುಹೋದಹಾಗೂ, ತಿಲೋತ್ತಮೆಯು ಅವನ ಬೆನ್ನಟ್ಟಿ ಓಡಿದಹಾಗೂ, ಜಗತ್ಸಿಂಹನು ವೇಗದಿಂದ ಪರ್ವತವನ್ನಿಳಿದೋಡುತಿದ್ದ ಹಾಗೂ, ದಾರಿಯಲ್ಲೊಂದು ಸಣ್ಣ ಕಾಲ್ವೆಯು ಸಿಕ್ಕಿ ಜಗತ್ಸಿಂಹನದನ್ನು ದಾಟಿ ಹೊರಟುಹೋದಹಾಗೂ, ತಿಲೋತ್ತಮೆಯು ಹೆಂಗಸಾದುದರಿಂದದನ್ನು ದಾಟ ಲಾರದೆ ಕಾಲ್ವೆಯು ಅಗಲವಿಲ್ಲದ ಸ್ಥಳದಲ್ಲಿ ದಾಟಬೇಕೆಂದು ಅದರ ದಡವನ್ನನು ಸರಿಸಿ ಕೆಳಕಡೆಗೆ ಹೋದಹಾಗೂ, ಹೋದಹಾಗೆಲ್ಲಾ ಕಾಲ್ವೆಯು ದೊಡ್ಡದಾಗುತ್ತ

* ನಿರಾಮಯೆಯಾಗಿ = ರೋಗರಹಿತಳಾಗಿ.

ಬಂದು ಕಡೆಗೊಂದು ದೊಡ್ಡ ನದಿಯಾಗಿ ಕಂಡಹಾಗೂ, ಜಗತ್ಸಿಂಹನು ಕಣ್ಣಿಗೆ ಕಾಣದೆಹೋದಹಾಗೂ, ನಾನು ನಿಂತಿದ್ದೆಡೆ ಎತ್ತರವಾಗಿ ಜಾರಿಕೆಯಾಗಿದ್ದುದರಿಂದ ದಡವು ಜರಿದು ಬಿದ್ದುಹೋದಹಾಗೂ, ಕೆಳಗಡೆ ಹೋದಹಾಗೆಲ್ಲಾ ನದಿಯಲ್ಲಿ ನೀರಿನ ಸುಳಿಗಳು ಹೆಚ್ಚು ಕಂಡುಬಂದುದರಿಂದ ಮುಂದುಹೋಗಲು ಧೈರ್ಯಸಾಲದೆ ಪರ್ವತದಮೇಲೆ ಹತ್ತಿಹೋದಹಾಗೂ, ಮಾರ್ಗವು ಜಾರಿಕೆಯಾಗಿದ್ದುದರಿಂದ ಜಾಗ್ರತೆಯಾಗಿ ಹೋಗುವುದಕ್ಕಾಗದೆ ಉಚ್ಚಸ್ವರದಿಂದ ಅಳುವುದಕ್ಕೆ ತೊಡಗಿದಹಾಗೂ, ಒಮ್ಮಿಂದೊಮ್ಮೆ ಯಮನಂತಿದ್ದ ಕತಲೂಖಾನನು ಪುನಃ ಜೀವಿತನಾಗಿ ಬಂದವಳ ಮಾರ್ಗವನಡ್ಡಿಮಾಡಿದಹಾಗೂ, ಕಂಠದಲ್ಲಿದ್ದ ಹೂಮಾಲೆಯು ಭಾರವಾಗಿ ಲೋಹಶೃಂಖಲದಂತಾದಹಾಗೂ, ಕೈಯಲ್ಲಿದ್ದ ಕುಸುಮ'ಸಂಕೋಲೆಯು ಕಾಲಿನಮೇಲೆ ಬಿದ್ದು ಲೋಹವಾಗಿ ಪರಿಣಮಿಸಿದಹಾಗೂ, ಆಗ ತನ್ನ ದೇಹವು ಸ್ತಂಭಿತವಾದುದನ್ನು ಕಂಡು ಕತಲೂಖಾನನು ತನ್ನ ಕೇಶಪಾಶವನ್ನು ಹಿಡಿದು ತಿರುಗಿಸಿ ನದಿಯ ತರಂಗ ಪ್ರವಾಹದಲ್ಲಿ ಬಿಸುಟು ಬಿಟ್ಟಹಾಗೂ—ತಾನು ಕಂಡಾ ಕನಸನ್ನು ವಿವರಿಸಿ ಹೇಳಿದಳು.

ಸ್ವಪ್ನವು ಹೀಗಾಯಿತೆಂದು ಹೇಳಿ ಕಣ್ಣೀರನ್ನು ಸುರಿಸುತ, 'ಯುವರಾಜ! ಕನಸೆನ್ನ ಪಾಲಿಗೆ ಕನಸಾಗಿರಲಿಲ್ಲ. ನಿನಗೆ ಸಲುವಾಗಿ ನಾನಾ ಕನಸಿನಲ್ಲಿ ಕಟ್ಟಿದ ಕುಸುಮ ಸಂಕೋಲೆಯು ನಿನ್ನ ಚರಣಗಳಿಗೆ ಲೋಹಸಂಕೋಲೆಗಳಾಗಿ ಪರಿಣಮಿಸಿದುವು. ನಿನ್ನ ಕಂಠಕ್ಕೆ ಹಾಕಿದ್ದ ಕುಸುಮಮಾಲೆಯು ನಿನ್ನಾ ಕತ್ತಿಯಿಂದ ಭಗ್ನವಾಯಿತು ' ಎಂದಳು.

ಯುವರಾಜನು ನಕ್ಕು ಕಟಿಯಲ್ಲಿದ್ದ ಕತ್ತಿಯನ್ನು ಬಿಚ್ಚಿ ತಿಲೋತ್ತಮೆಯ ಪಾದತಲದಲ್ಲಿಟ್ಟು, 'ತಿಲೋತ್ತಮೆ ! ಈಗ ನೋಡು, ನಿನ್ನೆದುರಿಗೆ ಅಸಿಶೂನ್ಯನಾಗಿದ್ದೇನೆ, ಪುನಃ ಒತ್ತಡವೆ ಮಾಲೆಯನ್ನು ಹಾಕಿ ನೋಡು, ನಿನ್ನ ಸಮಕ್ಷಮದಲ್ಲಾ ಕತ್ತಿಯನ್ನೆರಡು ತುಂಡಾಗಿ ಮುರಿದುಹಾಕುವೆನು ' ಎಂದು ಹೇಳಿದನು.

ತಿಲೋತ್ತಮೆಯು ನಿರುತ್ತರಳಾಗಿದ್ದಳು. ಅದನ್ನು ನೋಡಿ ಯುವರಾಜನು ಪುನಃ, ' ತಿಲೋತ್ತಮೆ ! ನಾಸಿದನ್ನು ನಮ್ಮ ನಮ್ಮಲ್ಲಿ ರಹಸ್ಯವಾಗಿ ಹೇಳುವ ಮಾತೆಂದು ತಿಳಿಯಬೇಡ ' ಎಂದು ಹೇಳಿದನು.

ತಿಲೋತ್ತಮೆಯು ಲಜ್ಜೆಯಿಂದ ಅಧೋಮುಖಿಯಾದಳು.

ಅಂದು ಪ್ರದೋಷಕಾಲದಲ್ಲಿ ಅಭಿರಾಮಸ್ವಾಮಿಯು ಬೇರೆ ಕೊಟಡಿಯಲ್ಲಿ ಕುಳಿತು ಭಾಗವತ ಪುಸ್ತಕವನ್ನು ನೋಡುತಿದ್ದನು. ರಾಜಪುತ್ರನಲ್ಲಿಗೆ ಹೋಗಿ ಸವಿನಯಭಾವದಿಂದ ಅಭಿರಾಮಸ್ವಾಮಿಯನ್ನು ಕುರಿತು, ' ಮಹಾಶಯರೆ ! ನನ್ನದೊಂದು ವಿಜ್ಞಾಪನೆ:— ತಿಲೋತ್ತಮೆಯು ಈಗ ಪ್ರಯಾಣ ಮಾಡಲು ಶಕ್ತೆಯಾಗಿದ್ದಾಳೆ; ಆತಏವ, ನೀವೀ ಭಗ್ನಾಲಯದಲ್ಲಿದ್ದು ಕಷ್ಟಪಡುವುದರಿಂದ ಪ್ರಯೋಜನವಿಲ್ಲ. ನಾಳೆ ಪ್ರಯಾಣಕ್ಕೆ ಶುಭದಿನವಾಗಿದ್ದರೆ

ಅವಳನ್ನು ಕರೆದುಕೊಂಡು ಹೋಗೋಣ; ಹಾಗೂ ತಮಗೆ ಅನಭಿಮತವಾಗಿದ್ದರೆ, ಅಂಬರವಂಶಕ್ಕೆ ತಮ್ಮ ದೌಹಿತ್ರಿಯನ್ನು ಸಂಪ್ರದಾನಮಾಡಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು ' ಎಂದು ಹೇಳಿದನು.

ಅಭಿರಾಮಸ್ವಾಮಿಯು ಪುಸ್ತಕವನ್ನು ಕೆಳಗೆ ಹಾಕಿಬಿಟ್ಟು, ರಾಜಪುತ್ರನನ್ನು ಗಾಢಾಲಿಂಗನೆ ಮಾಡಿಕೊಂಡನು.

ರಾಜಪುತ್ರನು ಸ್ವಾಮಿಯ ಬಳಿಗೆ ಹೋದಾಗ ಅವನ ಭಾವವನ್ನರಿತು ವಿಮಲೆಯೂ ಆಶ್ಮನಿಯೂ ಮೆಲ್ಲಮೆಲ್ಲನೆ ಅವನ ಹಿಂದೆ ಬಂದು ಹೊರಗೆ ಮರೆಯಲ್ಲಿ ನಿಂತು ಒಳಗೆ ನಡೆದುದನ್ನೆಲ್ಲಾ ಕೇಳಿ, ಬಳಿಕ ರಾಜಕುಮಾರನು ಹೊರಗೆ ಬರುವುದನ್ನು ನೋಡಿ ಒತ್ತಟ್ಟೋರೆಯಾಗಿದ್ದು ಏನನ್ನೂ ಅರಿಯದವರಂತಿದ್ದುಬಿಟ್ಟರು. ವಿಮಲೆಯು ಉಲ್ಲಾಸದಿಂದ ನಗುತ್ತ ಆಶ್ಮನಿಯನ್ನು ಹೊಡಿಯುತಿದ್ದಳು. ಆಶ್ಮನಿಯು ಪೆಟ್ಟುಗಳನ್ನು ಸಹಿಸಿಕೊಂಡು ವಿಮಲೆಗೆ ನೃತ್ಯಗೀತ ಪಾಠಗಳಲ್ಲಿ ಪರೀಕ್ಷೆಯನ್ನು ಕೊಡುತಿದ್ದಳು. ರಾಜಕುಮಾರನವರನ್ನು ಓರೆಗಣ್ಣಿನಿಂದ ನೋಡಿ ಅವರಿಗೆ ಕಾಣಿಸಿಕೊಳ್ಳದಹಾಗ ಓರೆಗೊಂಡು ಹೊರಟುಹೋದನು.

---

## ಇಪ್ಪತ್ತೆರಡನೆಯ ಪರಿಚ್ಛೇದ

## ಸಮಾಪ್ತಿ

ಹೂವು ಅರಳಿತು. ಅಭಿರಾಮಸ್ವಾಮಿಯು ಎಲ್ಲರೊಡನೆ ಮಂದಾರಣದುರ್ಗಕ್ಕೆ ಪ್ರಯಾಣವಾಗಿ ಬಂದು ಮಹಾಸಮಾರೋಹದಿಂದ ಶುಭಮುಹೂರ್ತದಲ್ಲಿ ದೌಹಿತ್ರಿಯನ್ನು ಜಗತ್ಸಿಂಹನಿಗೆ ಕೊಟ್ಟು ಪಾಣಿಗೃಹೀತೆಯನ್ನಾಗಿ ಮಾಡಿದನು. ಉತ್ಸವಾವಲೋಕನಕ್ಕೆ ಸಲುವಾಗಿ ಜಗತ್ಸಿಂಹನು ತನ್ನ ಸಹಚರವರ್ಗದವರನ್ನು ಜಹನ್ನಾಬಾದಿನಿಂದ ಕರೆಯಿಸಿದನು. ತಿಲೋತ್ತಮೆಯ ತಂದೆಯ ಬಂಧುವರ್ಗದವರಿಗೂ ಲಗ್ನಪತ್ರಿಕೆಗಳು ಹೋಗಿ ಅವರೂ ಈ ಶುಭಮುಹೂರ್ತಕ್ಕೆ ಬಂದು ಆನಂದಭರಿತರಾದರು.

ಆಯಷೆಯ ಪ್ರಾರ್ಥನೆಯ ಪ್ರಕಾರ ಜಗತ್ಸಿಂಹನವಳಿಗೂ ಸಮಾಚಾರವನ್ನು ಕಳುಹಿದ್ದನು. ಆಯಷೆಯು ತನ್ನ ಕಿಶೋರ ವಯಸ್ಕರಾದ ಸಹೋದರರು ಮುಂತಾದ ಅನೇಕ ಪೌರವರ್ಗದಿಂದೊಡಗೂಡಿ ಪರಮಹರುಷದಿಂದ ಬಂದಿದ್ದಳು.

ಆಯಷೆಯು ಯುವನಿಯಾಗಿದ್ದರೂ ತಿಲೋತ್ತಮೆ ಜಗತ್ಸಿಂಹ ಇವರ ಅಧಿಕ ಸ್ನೇಹವಶದಿಂದವಳೂ ಎಲ್ಲಾ ಬಂಧುಗಳಂತೆ ಅಂತಃಪುರವಾಸಿನಿಯಾಗಿದ್ದಳು. ಆಯಷೆಯು ಸಂತಪಿಸುತಲಿದ್ದ ಹೃದಯವುಳ್ಳವಳಾಗಿ ವಿವಾಹೋತ್ಸವದಲ್ಲಿ ಉಲ್ಲಾಸದಿಂದಿರಲಿಲ್ಲವೆಂದು ಪಾಠಕಮಹಾಶಯರು ತಿಳಿದಿರುವರಲ್ಲವೆ? ಹಾಗಲ್ಲ. ವಾಸ್ತವವಾಗಿ ಅವಳು ಉಲ್ಲಾಸಹೀನಳಾಗಿರಲಿಲ್ಲ. ಅವಳ ಹರ್ಷ

ಪ್ರಫುಲ್ಲ ಹೃತ್ಕಮಲದಿಂದ ಎಲ್ಲರನ್ನೂ ಸಂತೋಷಗೊಳಿಸುತಿದ್ದಳು. ಶರತ್ಕಾಲದ ಪ್ರಸ್ಫುಟಿತ ಸರಸೀರುಹದ ಮಂದಾಂದೋಳನದಂತೆ ಪ್ರಕಾಶಿಸುತಿರುವ ಅವಳಾ ಮೃದುಮಧುರವಾದ ಮಂದಹಾಸದಿಂದ ಸಕಲ ಪದಾರ್ಥಗಳಿಗೂ ವಿಶೇಷ ಕಾಂತಿಯನುಂಟುಮಾಡುತಿದ್ದಳು.

ಯುವರಾಜನ ವಿವಾಹಕಾರ್ಯವೆಲ್ಲಾ ಅರ್ಧರಾತ್ರಿಗೆ ಸಾಂಗವಾಗಿ ಬೆಳೆಯಿತು. ಆಯಿಷೆಯು ತನ್ನ ಸಹಚರರೊಡನೆ ಸ್ವಸ್ಥಾನವನ್ನು ಕುರಿತು ಹೊರಟು ಹೋಗುವ ಪ್ರಯತ್ನದಿಂದ ವಿಮಲೆಯ ಬಳಿ ಹೋಗಿ ಮಂದಹಾಸಯುಕ್ತೆಯಾಗಿ ಅವಳಪ್ಪಣೆಯನ್ನು ಬೇಡಿದಳು. ವಿಮಲೆಯು ಆವ ಸಂಗತಿಯನ್ನೂ ಅರಿತಿರಲಿಲ್ಲವಾದುದರಿಂದ ಹರ್ಷವುಳ್ಳವಳಾಗಿ, 'ಷಹಜಾದೆ! ನಿನ್ನ ಶುಭಲಗ್ನಕ್ಕೆ ನಮ್ಮನ್ನು ಕರೆಯದಿರಬೇಡ, ಜ್ಞಾಪಕವಿರಲಿ' ಎಂದು ಹೇಳಿದಳು.

ಆಯಿಷೆಯು ವಿಮಲೆಯ ಅಪ್ಪಣೆಯನ್ನು ಪಡೆದು ಬಳಿಕ ತಿಲೋತ್ತಮೆಯನ್ನು ಸಂಗಡ ಕರೆದುಕೊಂಡು ಸೌಂದರ್ಯ ಸಿಭೃತವಾದೊಂದು ಕೊಟಡಿಗೆ ಬಂದಳು. ಅಲ್ಲಿ ಅವಳ ಕೈಯನ್ನು ಹಿಡಿದುಕೊಂಡು, 'ಭಗಿನಿ! ನಾನು ಹೊರಟು ಹೋಗುತ್ತೇನೆ. ನೀನು ಅಕ್ಷಯಸುಖದಿಂದಿರಬೇಕೆಂದು ನನ್ನ ಕಾಯಮನೋವಾಕ್ಕುಗಳಿಂದ ಹರಸಿ ಹೊರಟುಹೋಗುತ್ತೇನೆ' ಎಂದಳು.

ತಿಲೋತ್ತಮೆಯು, 'ಮತ್ತೆಷ್ಟು ದಿನದಲ್ಲಿ ನಿನ್ನನ್ನು ಪುನಃ ನೋಡುವೆನು?' ಎಂದು ಕೇಳಿದಳು.

ಆಯಿಷೆಯು, 'ನೋಡುವ ಭರವಸೆಯನ್ನು ಹೇಗೆ ಹೇಳಲಿ?' ಎಂದಳು.

ತಿಲೋತ್ತಮೆಯು ಅತ್ಯಂತ ವಿಷಣ್ಣೆಯಾದಳು. ಇಬ್ಬರೂ ಸ್ವಲ್ಪಹೊತ್ತು ಮೌನವಾಗಿದ್ದರು. ಅನಂತರ ಆಯಿಷೆಯು, 'ನೋಡಿದರೂ, ನೋಡದಿದ್ದರೂ ನೀನು ಆಯಿಷೆಯನ್ನು ಮರೆಯಬೇಡ' ಎಂದಳು.

ತಿಲೋತ್ತಮೆಯು ನಕ್ಕು, 'ಆಯಿಷೆಯನ್ನು ಮರೆತರೆ ಯುವರಾಜರು ನನ್ನ ಮುಖವನ್ನು ನೋಡರು' ಎಂದಳು.

ಆಯಿಷೆಯು ಗಾಂಭೀರ್ಯಸಹಕಾರದಿಂದ, 'ನಾನಾ ಮಾತಿನಿಂದ ಸಂತುಷ್ಟಳಾಗೆನು; ನೀನೆನ್ನ ವಿಚಾರವನ್ನು ಕುರಿತು ಆವಾಗಲೂ ಯುವರಾಜರಲ್ಲಿ ಪ್ರಸ್ತಾಪಿಸಕೂಡದು; ಹಾಗೆ ಪ್ರಸ್ತಾಪಿಸುವುದಿಲ್ಲವೆಂದು ನೀನೆನಗೆ ಭಾಷೆಯನ್ನು ಕೊಡಬೇಕು' ಎಂದಳು.

ಆಯಿಷೆಯು ತಾನು ಜಗತ್ಸಿಂಹನಿಗೆ ಸಲುವಾಗೀ ಜನ್ಮದಲ್ಲಿ ತನ್ನ ಸುಖಕ್ಕೆಲ್ಲಾ ಜಲಾಂಜಲಿಯನ್ನು ಮಾಡಿರುವುದು ಜಗತ್ಸಿಂಹನ ಹೃದಯದಲ್ಲಿ ಶೂಲವಾಗಿ ನೆಟ್ಟಿದೆಯೆಂದು ತಿಳಿದಿದ್ದಳಲ್ಲದೆ, ತನ್ನ ಪ್ರಸ್ತಾಪವನ್ನೆತ್ತಿದ ಮಾತ್ರದಿಂದವನಿಗೆ ಅನುತಾಪವುಂಟಾಗುವುದೆಂದು ಚೆನ್ನಾಗಿ ಬಲ್ಲವಳಾಗಿದ್ದಳು.

ತಿಲೋತ್ತಮೆಯು ಅವಳಿಷ್ಟದಂತಾಗಲೆಂದೊಪ್ಪಿಕೊಂಡಳು. ಆಯಿಷೆಯು

ಪುನಃ, 'ಮರೆಯದಿರು ನನ್ನ ಸ್ಮರಣಾರ್ಥವಾಗೀ ಕುರುಹುಗಳನ್ನು ಕೊಟ್ಟಿರುತ್ತೇನೆ, ಅವುಗಳನ್ನು ಬಿಟ್ಟಿರಬೇಡ' ಎಂದು ಹೇಳಿ, ತನ್ನ ದಾಸಿಗೆ ಅಪ್ಪಣೆಮಾಡಿದಳು. ದಾಸಿಯು ಅಪ್ಪಣೆಯಪ್ರಕಾರ ದಂತಖಚಿತವಾದೊಂದು ಪೆಟ್ಟಿಗೆಯಿಂದ ಅನೇಕ ರತ್ನಾಲಂಕಾರಗಳನ್ನು ತೆಗೆದು ತಂದುಕೊಟ್ಟಳು. ಅಯಿಷೆಯು ದಾಸಿಯನ್ನು ಹೊರಗೆ ಕಳುಹಿಸಿ ಅಮೋಘವಾದಾ ಆಭರಣಗಳನೆಲ್ಲಾ ತಿಲೋತ್ತಮೆಗೆ ಸ್ವಹಸ್ತದಿಂದ ತೊಡಿಸಲಾರಂಭಿಸಿದಳು.

ತಿಲೋತ್ತಮೆಯೂ ಬಹು ಸಂಪತ್ತುಳ್ಳ ಜಹಗೀರದಾರನ ಮಗಳಾಗಿದ್ದರೂ ಆ ಅಲಂಕಾರಗಳ ರಾಶಿಯು ಅದ್ಭುತ ಶಿಲ್ಪಿರಚನೆಯನ್ನೂ, ಅವುಗಳಲ್ಲಿ ಖಚಿತವಾಗಿದ್ದ ಬಹುಮೂಲ್ಯ ವಜ್ರ ಮುಂತಾದ ನವರತ್ನರಾಜಿಯ ಅಸಾಧಾರಣವಾದ ತೀವ್ರ ಕಾಂತಿಯನ್ನೂ ನೋಡಿ ಚಮತ್ಕೃತೆಯಾದಳು. ವಸ್ತುತಃ, ಅಯಿಷೆಯು ತನ್ನ ತಂದೆಯು ತನಗೆ ಕೊಟ್ಟಿದ್ದ ಸ್ವಂತ ಆಭರಣಗಳನೆಲ್ಲಾ ಅಳಿಸಿ ತಿಲೋತ್ತಮೆಗೊಪ್ಪುವಂತೆ ದುರ್ಲಭವಾದಾ ರತ್ನಾಭರಣಗಳನ್ನು ತಾನೇ ಪ್ರತ್ಯಕ್ಷವಾಗಿ ನಿಂತು ಮಾಡಿಸಿದ್ದಳು. ತಿಲೋತ್ತಮೆಯು ಆ ಆಭರಣಗಳನೆಲ್ಲಾ ಪರಮಾಶ್ಚರ್ಯದಿಂದ ಕೊಂಡಾಡುತಿದ್ದಳು.

ಅಯಿಷೆಯು, 'ಭಗಿನಿ! ಅವುಗಳನ್ನು ಕೊಂಡಾಡಬೇಡ, ಇಂದು ನೀನು ನಿನ್ನ ಹೃದಯದಲ್ಲಿ ಧಾರಣೆಮಾಡಿಕೊಂಡ ರತ್ನದ ಚರಣರೇಣುವಿಗೂ ಅವು ಸಮಾನವಾಗವು' ಎಂದು ಹೇಳುತ್ತ, ಉಕ್ಕಿ ಬರುತಿದ್ದ ಅಶ್ರುಜಲವನ್ನು ಎಷ್ಟೊಂದು ಕಷ್ಟದಿಂದ ಸಂವರಣಮಾಡಿಕೊಂಡಳೋ, ಅದನ್ನು ತಿಲೋತ್ತಮೆಯು ಸ್ವಲ್ಪವಾದರೂ ತಿಳಿಯಲಾರದೆ ಹೋದಳು.

ಅಯಿಷೆಯು ತಿಲೋತ್ತಮೆಗೆ ಆಭರಣಗಳನೆಲ್ಲಾ ತೊಡಿಸಿದ ಬಳಿಕ ತಿಲೋತ್ತಮೆಯ ಎರಡು ಕೈಗಳನ್ನೂ ಹಿಡಿದುಕೊಂಡು ಅವಳ ಮುಖವನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಮನಸ್ಸಿನಲ್ಲಿ, 'ಸರಳವಾದ ಪ್ರೇಮವನ್ನು ಬೀರುತಿರುವ ಈ ಮೂರ್ತಿಯ ಮುಖವನ್ನು ನೋಡಿ ನನ್ನ ಪ್ರಾಣೇಶ್ವರನೆಂದಿಗೂ ಮನಃಕ್ಲೇಶವನ್ನು ಹೊಂದಲಾರನೆಂದು ತೋರುತ್ತದೆ, ಜಗದೀಶ್ವರನು ಇವಳ ಮೂಲಕವಾದರೂ ಅವನನ್ನು ಚಿರಕಾಲ ಸುಖದಲ್ಲಿಟ್ಟಿರಬೇಕೆಂದು ನನ್ನ ಪ್ರಾರ್ಥನೆ' ಎಂದಂದುಕೊಂಡಳು. ಅನಂತರ ತಿಲೋತ್ತಮೆಯನ್ನು ಕುರಿತು, 'ತಿಲೋತ್ತಮೆ! ನಾನು ಹೊರಟುಹೋಗುತ್ತೇನೆ, ನಿನ್ನ ಸ್ವಾಮಿಯು ಕಾರ್ಯಾಂತರದಲ್ಲಿರಬಹುದು, ಅವನ ಬಳಿಗೆ ಹೋಗಿ ಅಪ್ಪಣೆಯನ್ನು ಪಡೆವುದಕ್ಕೆ ಕಾಲ ವಿಳಂಬವಾಗುವುದು, ಜಗದೀಶ್ವರನು ನಿಮ್ಮಗಳನ್ನು ದೀರ್ಘಾಯುಗಳಾಗಿಟ್ಟಿರಲಿ ; ಮತ್ತು, ನನ್ನ—ನಿನ್ನ ಸಾರರತ್ನವನ್ನು ಹೃದಯದಲ್ಲಿ ಧರಿಸಿಕೊಂಡಿರು' ಎಂದಳು.

''ನನ್ನ'' ಎಂದು ಹೇಳಿ ಅಷ್ಟರೊಳಗದನ್ನು ಸರಿಮಾಡಿಕೊಂಡು, ''ನಿನ್ನ

ಸಾರರತ್ನ''ವೆಂದು ಹೇಳುವಾಗ ಆಯುಷೆಗೆ ಕಂಠರೋಧವಾಯಿತು. ತಿಲೋತ್ತಮೆಯೂ ಆಗ ಆಯುಷೆಯ ನಯನಪಲ್ಲವವು ಜಲಭಾರದಿಂದ ಸ್ತಂಭಿತವಾಗಿ ಕಂಪಿತವಾದುದನ್ನು ನೋಡಿದಳು.

ತಿಲೋತ್ತಮೆಯೂ ಸಮದುಃಖಿಯಂತೆ, 'ಅಳುತ್ತೀ, ಏಕೆ, ಅಕ್ಕ !' ಎಂದು ಕೇಳಿದಳು. ಹಾಗೆಂದು ಕೇಳುತ್ತಲೇ ಆಯುಷೆಯ ನಯನವಾರಿ ಸ್ರೋತವು ಧಾರೆಧಾರೆಯಾಗಿ ಹೊರಟು ಪ್ರವಹಿಸಲಾರಂಭವಾಯಿತು !!

ಆಯುಷೆಯೂ ಕೂಡಲೇ ಸ್ವಲ್ಪವೂ ಸಾವಕಾಶಮಾಡದೆ ಬೇಗನೆದ್ದು ಹೋಗಿ ಪಲ್ಲಕ್ಕಿಯಲ್ಲಿ ಕುಳಿತು ಹೊರಟುಹೋದಳು.

ಆಯುಷೆಯೂ ಹೋಗಿ ತನ್ನ ಆವಾಸಗೃಹವನ್ನು ಮುಟ್ಟಿದಾಗಿನ್ನೂ ಬೆಳಕು ಹರಿದಿರಲಿಲ್ಲ. ಆಯುಷೆಯೂ ತನ್ನ ಉಡುಪನ್ನು ಬದಲಾಯಿಸಿ ತಣ್ಣೆಲರು ಬೀಸುತಿದ್ದೊಂದು ಗವಾಕ್ಷದ ಬಳಿ ನಿಂತುಕೊಂಡಳು. ಆಗವಳು ಬದಲಾಯಿಸಿದ ವಸನಗಳಿಗಿಂತ ಹೆಚ್ಚು ಕೋಮಲ ನೀಲವರ್ಣದ ಗಗನಮಂಡಲದಲ್ಲಿ ಲಕ್ಷ ಲಕ್ಷ ತಾರೆಗಳು ಪ್ರಕಾಶಿಸುತಿದ್ದುವು. ಕತ್ತಲೆಯಲ್ಲಿ ಮರದೆಲೆಗಳು ತಂಗಾಳಿಯಿಂದ ಚಲಿಸಲ್ಪಟ್ಟು ಶಬ್ದಮಾಡುತಿದ್ದುವು. ಅರಮನೆಯ ಮೇಲುಗಡೆ ಪೇಚಕಪಕ್ಷಿಯೂ ಮೃದು ಗಂಭೀರ ನಿನಾದವನ್ನು ಮಾಡುತಿದ್ದಿತು. ಅರಮನೆಯೆದುರಿಗೆ ಪ್ರಾಕಾರದ ತಲಹದಿಯಲ್ಲಿ ಆಯುಷೆಯೂ ನಿಂತಿದ್ದ ಕೊಟಡಿಗೆ ಸರಿಯಾಗಿ, ಕೆಳಗಡೆ ಜಲಪರಿಪೂರ್ಣವಾಗಿದ್ದ ಕಂದಕವು ನಿಶ್ಶಬ್ದವಾದ ಆಕಾಶಪಟದ ಪ್ರತಿಬಿಂಬವನ್ನು ಧಾರಣೆಮಾಡಿದ್ದಿತು.

ಆಯುಷೆಯೂ ವಾತಾಯನದಲ್ಲಿ ಕುಳಿತು ಬಹಳಹೊತ್ತು ಚಿಂತೆಯನ್ನು ಮಾಡಿದಳು. ಕೈಯಲ್ಲಿ ಹಾಕಿದ್ದೊಂದುಂಗುರವನ್ನು ತೆಗೆದು ಹಿಡಿದುಕೊಂಡಳು. ಉಂಗುರವು ಗರಳಾಧಾರ*ವಾಗಿದ್ದಿತು. ಮನಸ್ಸಿನಲ್ಲೊತ್ತಡವೆ, 'ಈ ವಿಷವನ್ನು ಪಾನಮಾಡೀ ಕ್ಷಣದಲ್ಲಿ ಪಿಪಾಸೆಯನ್ನೆಲ್ಲಾ ನಿವಾರಣೆಮಾಡಿಕೊಳ್ಳಬಲ್ಲೆನು' ಎಂದುಕೊಂಡು, ಪುನಃ, 'ಅಂತಹ ಕೆಲಸವನ್ನು ಮಾಡುವುದಕ್ಕೆ ಸಲುವಾಗಿಯೆ ವಿಧಾತನೆನ್ನನ್ನು ಸೃಷ್ಟಿಸಿದನು ? ನಾನೀ ಕಷ್ಟವನ್ನು ಸಹಿಸಲಾರದೆ ಹೋದರೆ ನಾರಿಯ ಜನ್ಮದಲ್ಲಿ ಹುಟ್ಟಿದುದು ವ್ಯರ್ಥ, ಜಗತ್ಸಿಂಹನು ಕೇಳಿದರೆ ಏನೆಂದು ಹೇಳುವನು !' ಎಂದಂದುಕೊಂಡಳು. ಬಳಿಕ ಉಂಗುರವನ್ನು ಪುನಃ ಬೆರಳಿಗೆ ತೊಡಿಸಿಕೊಂಡಳು. ಪುನಃ, 'ಈ ಲೋಭವನ್ನೆದುರಿಸಿ ದೂರಮಾಡುವುದು ಹೆಂಗಸರಿಗೆ ಸಾಧ್ಯವಲ್ಲ. ಅಂತಹ ಪ್ರಲೋಭವನ್ನು ದೂರಮಾಡುವುದು ಉಚಿತ' ಎಂದಂದುಕೊಂಡು, ಗರಳಾಧಾರವಾಗಿದ್ದಾ ಉಂಗುರವನ್ನು ಪರಿಖದ* ನೀರಿನಲ್ಲಿ ಬಿಸುಟುಬಿಟ್ಟಳು.

— ಸಂಪೂರ್ಣಂ —

---

* ಗರಳಾಧಾರ = ವಿಷಕ್ಕಾಧಾರವಾದ; ವಿಷವತುಂಬಿದ್ದ. * ಪರಿಖ = ಕಂದಕ,

ಕ್ಷೀರಣ್ಯಾಸ್ಸಂತು ಗಾವೋ ಭವತು ವಸುಮತೀ ಸರ್ವಸಂಪನ್ನ ಸಸ್ಯಾ ।
ಪರ್ಜನ್ಯಃ ಕಾಲವರ್ಷೀ ಸಕಲಜನಮನೋ ನಂದಿನೋ ವಾಂತು ವಾತಾಃ ॥
ಮೋದಂತಾಂ ಜನ್ಮಭಾಜಃ ಸತತಮಭಿಮತಾ ಬ್ರಾಹ್ಮಣಾಸ್ಸಂತು ಸಂತಃ ।
ಶ್ರೀಮಂತಃ ಪಾಂತು ಪೃಥ್ವೀಂ ಪ್ರಶಮಿತರಿಪವೋ ಧರ್ಮನಿಷ್ಠಾಶ್ಚ
ಭೂಪಾಃ ॥

# Durgesha Nandini

OR

# The Chieftain's Daughter

"The excellence of the works of Bankim Chander, the Bengalee novelist of world-wide fame, has been acknowledged by persons of high literary merit and his works have been translated into many languages, European and Indian. In view both to enrich the Kannada literature and to regale the minds of the reading public, Mr. B. Venkatachar has translated almost all of Bankim Chander's works and has sent us his revised edition of *Durgesha Nandini*. It is a novel based on historical facts and abounds with events of a most chivalrous character. The plot is clever and the sequel happy; and the reader of this excellent work can scarcely fail to perceive its beauty. The object of the author in writing this is evidently to elevate the minds of his readers and to ennoble their thoughts and this has been done successfully. The work is further replete with truisms always worth keeping in view. The hero Jagat Simha and the heroine Tilottame sustain their character excellently well and Vimala plays her part in a splendid manner and avenges her lord in a wonderfully clever way. But Aisha towers above all and is a perfect model of her sex.

"The translator is seen at his best when he exhibits his descriptive faculty and both passion and pang have been depicted in a most lively way. He has earned, and deservedly, a high reputation as a Canarese writer and the diction and style of the work under review are excellent and the copious admixture of Sanskrit lends to it a dignity rarely to be excelled. People of either sex who wish to enlighten their minds should not neglect to read Durgesha-Nandini."

—*The Mysore Times*.

658—29, ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.